ಶ್ರೀ ಜಗದ್ಗುರು ಮೂರುಸಾವಿರಮಠ ಗ್ರಂಥಮಾಲೆ, ಹುಬ್ಬಳ್ಳಿ

ಅಷ್ಟಾದಶ ಕುಸುಮಂ

ಷಟ್ಸ್ಥಲ ಸಾರ್ವಭೌಮ

ಶ್ರೀ ಚೆನ್ನಬಸವ ಶಿವಯೋಗೀಂದ್ರ ವಿರಚಿತ

# ಕ್ಷೇತ್ರಜ್ಞ ಸುಮನೋವಾದಂ



ಪ್ರಕಾಶಕರು :
ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಲ
ಮೂರುಸಾವಿರಮಠ
ಹುಬ್ಬಳ್ಳಿ

೧೯೬೧ ಬೆಲೆ : ೫ ರೂ.

ಶ್ರೀಜಗದ್ಗುರು ಮೂರುಸಾವಿರಮಠ, ಗ್ರಂಥಮಾಲೆ ಹುಬ್ಬಳ್ಳಿ

ಅಷ್ಟಾದಶ ಕುಸುಮಂ

ಷಟ್ಸ್ಥಲ ಸಾರ್ವಭೌಮ

ಶ್ರೀ ಚೆನ್ನಬಸವ ಶಿವಯೋಗೀಂದ್ರ ವಿರಚಿತ

# ಕ್ಷೇತ್ರಜ್ಞ ಸುಮನೋವಾದಂ

ಪ್ರಕಾಶಕರು :

ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳ

ಮೂರುಸಾವಿರಮಠ

ಹುಬ್ಬಳ್ಳಿ

೧೯೬೧

ಬೆಲೆ : ೫ ರೂ.

ಶ್ರೀಜಗದ್ಗುರು ಮೂರುಸಾವಿರಮಠ, ಗ್ರಂಥಮಾಲೆ ಹುಬ್ಬಳ್ಳಿ

ಅಷ್ಟಾದಶ ಕುಸುಮಂ

ಷಟ್ಸ್ಥಲ ಸಾರ್ವಭೌಮ

ಶ್ರೀ ಚೆನ್ನಬಸವ ಶಿವಯೋಗೀಂದ್ರ ವಿರಚಿತ

# ಕ್ಷೇತ್ರಜ್ಞ ಸುಮನೋವಾದಂ

ಪ್ರಕಾಶಕರು :

ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳ

ಮೂರುಸಾವಿರಮಠ

ಹುಬ್ಬಳ್ಳಿ

೧೯೬೧ ಬೆಲೆ : ೫ ರೂ.

ಶ್ರೀಮಜ್ಜಗದ್ಗುರು ಗಂಗಾಧರ ಮಹಾಸ್ವಾಮಿಗಳು
ಮೂರುಸಾವಿರಮಠ ಧರ್ಮಪ್ರಚಾರಕ ಮಂಡಳ,

**ಹುಬ್ಬಳ್ಳಿ.**



ಅಧ್ಯಕ್ಷರು :

ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಶ್ರೀ ಗಂಗಾಧರ ರಾಜಯೋಗೀಂದ್ರ
ಮಹಾಸ್ವಾಮಿಗಳು ಮೂರುಸಾವಿರಮಠ, ಹುಬ್ಬಳ್ಳಿ

ಸದಸ್ಯರು :

ಶ್ರೀ ನಿ. ಪ್ರ. ಬಸವಲಿಂಗಸ್ವಾಮಿಗಳವರು ಗವಿಮಠ, ನವಿಲುಗುಂದ
ಶ್ರೀ ನಿ. ಪ್ರ. ಶಿವಬಸವಸ್ವಾಮಿಗಳು ಹೊಸಮಠ, ಹುಬ್ಬಳ್ಳಿ
ಶ್ರೀ ನಿ. ಪ್ರ. ಚನ್ನವೀರಸ್ವಾಮಿಗಳು ಎರಡೆತ್ತಿನಮಠ, ಹುಬ್ಬಳ್ಳಿ
ಶ್ರೀಯುತ ವ್ಹಿ. ಎಸ್. ಬಸವನಾಳ ವಕೀಲರು, B.A., LL. B. ಧಾರವಾಡ

ಶ್ರೀ ಜಗದ್ಗುರು ಮೂರುಸಾವಿರಮಠ ಗ್ರಂಥಮಾಲೆ,

ಅಷ್ಟಾದಶ ಕುಸುಮಂ

ಷಟ್‌ಸ್ಥಲ ಸಾರ್ವಭೌಮ

ಶ್ರೀ ಚೆನ್ನಬಸವ ಶಿವಯೋಗೀಂದ್ರವಿರಚಿತ

# ಕ್ಷೇತ್ರಜ್ಞ ಸುಮನೋವಾದಂ

ಸಂಶೋಧಕರು ಮತ್ತು ಸಂಪಾದಕರು :

ಪಂಡಿತ ಬಸವರಾಜಶಾಸ್ತ್ರಿಗಳು ಬೃಹನ್ಮಠ, ಪಗಡದಿನ್ನಿ

ವ್ಯಾಕರಣತೀರ್ಥ, ವ್ಯಾಕರಣರತ್ನ, ವ್ಯಾಕರಣಶಾಸ್ತ್ರಿ, ಸಾಹಿತ್ಯಶಿರೋಮಣಿ

ಪ್ರಿನ್ಸಿಪಾಲ ಶ್ರೀ ಜ. ಗಂ. ಸಂಸ್ಕೃತ ಕಾಲೇಜ, ಹುಬ್ಬಳ್ಳಿ

ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರಕ ಮಂಡಳ
ಮೂರುಸಾವಿರಮಠ, ಹುಬ್ಬಳ್ಳಿ

ಸಂಪಾದಕ ಮಂಡಳ :

ಶ್ರೀ ನಿ. ಪ್ರ. ಶಿವಬಸವಸ್ವಾಮಿಗಳು ಹೊಸಮಠ, ಹುಬ್ಬಳ್ಳಿ

ಶ್ರೀ ನಿ. ಪ್ರ. ಶಿವಲಿಂಗಸ್ವಾಮಿಗಳು ಹುಕ್ಕೇರಿಮಠ, ಹಾವೇರಿ

ಶ್ರೀ ಪಂ. ಬಸವರಾಜಶಾಸ್ತ್ರಿಗಳು ಪಗಡದಿನ್ನಿ ಬೃಹನ್ಮಠ
ಪ್ರಿ. ಜ. ಗಂ. ಸಂಸ್ಕೃತ ಕಾಲೇಜ, ಹುಬ್ಬಳ್ಳಿ

ಶ್ರೀ ಪ್ರೊ. ಉಮಾಪತಿ ಶಾಸ್ತ್ರಿಗಳು, M.A. ಬಸವೇಶ್ವರ ಕಾಲೇಜ, ಬಾಗಲಕೋಟೆ

ಶ್ರೀ ಚೆನ್ನಮಲ್ಲಿಕಾರ್ಜುನರು ಸಂಪಾದಕರು 'ಸದ್ಧರ್ಮ ದೀಪಿಕೆ' ಮೈಸೂರ



ಮುದ್ರಕರು :

ಪುಟ ೧ ರಿಂದ ೧೬೮
ಶ್ರೀ ಎಸ್. ಎಫ್. ಮಿಂಡಗುದ್ಲಿ,
ರವೀಂದ್ರ ಮುದ್ರಣಾಲಯ ಉಳವಿ ಹಿಲ್, ಧಾರವಾಡ

ಪುಟ ೧೬೯ ರಿಂದ ಮುಂದೆ
ಶ್ರೀ ಎಸ್. ಎಫ್. ಕಟ್ಟಿಮನಿ,
ಮನೋಹರ ಪಾವರ ಪ್ರಿಂಟಿಂಗ್ ಪ್ರೆಸ್, ಹುಬ್ಬಳ್ಳಿ



# ಅರ್ಪಣ

ಪರಮ ಶಿವಾನುಭಾವಿಗಳೂ ಕರ್ನಾಟಕದ ಶೈಕ್ಷಣಿಕ ರಂಗದಲ್ಲಿ
ಹೊಸಕಳೆಯನ್ನು ಉಂಟುಮಾಡಿದವರೂ ಸಮಾಜದ
ಹಿತಚಿಂತಕರೂ ಜಗದ್ಗುರು ಗಂಗಾಧರ ಧರ್ಮಪ್ರಚಾರಕ
ಮಂಡಲದ ಸಂಸ್ಥಾಪಕರೂ ಆದ
ಲಿಂಗೈಕ್ಯ ಪರಮಪೂಜ್ಯ

ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು
ಶ್ರೀ ಗುರುಸಿದ್ಧರಾಜಯೋಗೀಂದ್ರ ಮಹಾಸ್ವಾಮಿಗಳವರು
ಮೂರುಸಾವಿರಮಠ
ಅವರ

ದಿವ್ಯ ಚರಣಾರವಿಂದಗಳಲ್ಲಿ
ಈ ಹದಿನೆಂಟನೆಯ ಪುಷ್ಪವನ್ನು
ಅತ್ಯಂತ ಭಕ್ತಿಪೂರ್ವಕವಾಗಿ ಅರ್ಪಿಸಲಾಗಿದೆ.

—ಪ್ರಕಾಶಕರು



ಲಿಂಗೈಕ್ಯ ಶ್ರೀಮನ್ ಮಹಾರಾಜ ನಿರಂಜನ
ಜಗದ್ಗುರು ಗುರುಸಿದ್ಧರಾಜಯೋಗೀಂದ್ರ ಮಹಾಸ್ವಾಮಿಗಳು
ಮೂರುಸಾವಿರಮಠ, ಹುಬ್ಬಳ್ಳಿ

ಶ್ರೀಗುರು ಬಸವಲಿಂಗಾಯ ನಮಃ

# ಪ್ರಸ್ತಾವನೆ

ಈ "ಕ್ಷೇತ್ರಜ್ಞ ಸುಮನೋವಾದ" ಎಂಬ ಗ್ರಂಥವು ನವ ಮೈಸೂರು ದೇಶದ ಶಿವಮೊಗ್ಗಾ ಜಿಲ್ಹೆಗೆ ಸೇರಿದ ಶಿರಾಳಕೊಪ್ಪದ ಗ್ರಾಮದಲ್ಲಿರುವ ಶ್ರೀ ದುರ್ಗದ ಗುರುಶಾಂತಪ್ಪನವರು (T. Gurushantappa) ಅಕ್ಕಿಯ ಗಿರಣಿಯ ಮಾಲಿಕರು ಇವರಿಂದ ಓಲೆಯ ಗರಿಯ ಪ್ರತಿಯಲ್ಲಿದ್ದುದು ಸುಮಾರು ಆರೆಂಟು ವರ್ಷಗಳ ಹಿಂದೆ ನನಗೆ ದೊರಕಿತು. ಸಾವಿರಾರು ಓಲೆಯ ಪ್ರತಿಗಳನ್ನು ಬೇರೆ ಬೇರೆ ಕಡೆಯಲ್ಲಿದ್ದವುಗಳನ್ನು ನೋಡಿದ ನನಗೆ ಇದೊಂದೇ ಪ್ರತಿಯು ಇಲ್ಲಿ ಮಾತ್ರ ದೊರೆತುದನ್ನು ನೋಡಿ ಅತ್ಯಾನಂದವಾಯಿತು. ಆ ಮೇಲೆ ಇದನ್ನು ಕಾಗದದಲ್ಲಿ ಬರೆಯಿಸಿ ಎರಡು ಮೂರು ಸಾರೆ ಓದಿ ಪರೀಕ್ಷ್ಕರಿಸಿ ಇದರೊಳಗಿನ ಧಾರ್ಮಿಕ ವಿಷಯಗಳನ್ನು ತಿಳಿದು ಮೆಚ್ಚಿದ ನಾನು ಇದನ್ನು ಮುದ್ರಣ ಮಾಡಿಸುವ ಕೃಪೆಯಾಗಬೇಕೆಂದು ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಶ್ರೀ ಗುರುಸಿದ್ಧರಾಜಯೋಗೀಂದ್ರ ಮಹಾಸ್ವಾಮಿಗಳವರು ಮಹಾಸಂಸ್ಥಾನ ಮೂರುಸಾವಿರಮಠ ಹುಬ್ಬಳ್ಳಿ ಇವರಲ್ಲಿ ವಿನಯಪೂರ್ವಕವಾಗಿ ವಿಜ್ಞಾಪಿಸಿಕೊಂಡೆನು. ಆಗ್ಗೆ ಮಹಾಸನ್ನಿಧಿಯವರು ಮತ್ತೊಂದು ಹಸ್ತಪ್ರತಿಯನ್ನು ಬರೆಯಿಸಿ ತರಿಸಿಕೊಂಡು ಪರಾಂಬರಿಸಿ ಇದನ್ನು ಮುದ್ರಣ ಮಾಡುವದು ಅವಶ್ಯಕವೆಂದು ನಿಶ್ಚಯಿಸಿದರು. ಅದರ ಪರಿಣಾಮವಾಗಿ ಈಗಿರುವ ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರು ಮೂರುಸಾವಿರಮಠ ಹುಬ್ಬಳ್ಳಿ ಅವರು 'ಶ್ರೀ ಜಗದ್ಗುರು ಗಂಗಾಧರ ಧರ್ಮಪ್ರಚಾರ ಮಂಡಳ'ದ ಮುಖಾಂತರ ಈ ಗ್ರಂಥ ಮುದ್ರಣದ ಏರ್ಪಾಟನ್ನು ಕೃಪೆಯಿಟ್ಟು ನಡೆಯಿಸಿದರು. ಅದರ ಫಲವಾಗಿ ಈ ಗ್ರಂಥವು ಪ್ರಕಾಶಕ್ಕೆ ಬಂದುದಕ್ಕಾಗಿ ತುಂಬಾ ಕೃತಜ್ಞನಾಗಿದ್ದೇನೆ.

ಒಬ್ಬರಿಗೊಬ್ಬರು ಹೇಳಿದಂತೆ ಸಂವಾದ (Dialogue) ರೂಪವಾಗಿ ಜ್ಞಾನ ಸಂಪಾದನೆ ಮಾಡುವ ಅನುಕೂಲವನ್ನುಂಟು ಮಾಡಿಕೊಡುವುದು ಈ ಗ್ರಂಥವಾಗಿದೆ. ಮಾನವನಲ್ಲಿ ಅಂತರ್ಯಾಮಿ ಚೈತನ್ಯ ಭಾವ ಕರ್ತಾರ ಕ್ಷೇತ್ರಜ್ಞ ಆತ್ಮರೆಂಬ ಆರು ರೂಪುಗಳಾಗಿ, ಆತ್ಮನಿದ್ದಾನೆ. ಆ ಆತ್ಮನಿಗೆ ಅಧೀನವಾಗಿ ಸುಚಿತ್ತ, ಸುಬುದ್ಧಿ,

ನಿರಹಂಕಾರ, ಸುಮನ, ಸುಜ್ಞಾನ, ಸದ್ಭಾವ, ಎಂಬ ಆರು ಅಂತಃಕರಣಗಳಿವೆ. ಇವುಗಳು ಪೃಥಿವಿ ಜಲ ತೇಜಸ್ಸು ವಾಯು, ಆಕಾಶ, ಆತ್ಮ, ಎಂಬ ಆರು ತತ್ವಗಳ ಸಂಬಂಧಾತ್ಮಕಗಳಾಗಿವೆ. ಇವುಗಳಲ್ಲಿ ಆತ್ಮರೂಪಕ್ಕೆ ಸಂಬಂಧಿಸಿದ ಆಕಾಶ ತತ್ವದ 'ಕ್ಷೇತ್ರಜ್ಞನು' ಗುರುವಾಗಿ ಅಂತಃಕರಣ ರೂಪಕ್ಕೆ ಸಂಬಂಧಿಸಿದ ವಾಯು ತತ್ವದ 'ಸುಮನ' ಎಂಬ ಶಿಷ್ಯನಿಗೆ ಬೋಧಿಸಿದಂತೆ ಈ ಗ್ರಂಥವು ರಚಿಸಲ್ಪಟ್ಟಿರುವುದರಿಂದ ಇದಕ್ಕೆ "ಕ್ಷೇತ್ರಜ್ಞ ಸುಮನೋವಾದಂ" ಎಂಬ ಹೆಸರು ಸಾರ್ಥಕವಾಗಿದೆ: ಒಟ್ಟಿನಲ್ಲಿ 'ಕ್ಷೇತ್ರಜ್ಞ' ಎಂಬುವನು 'ಸುಮನ' ಎಂಬವನೊಡನೆ ನಡೆಯಿಸಿದ ಸಂವಾದವಿದು.

ಈ ಗ್ರಂಥದ ಪ್ರಾರಂಭದಲ್ಲಿ "ಷಟ್ಸ್ಥಲ ಚಕ್ರವರ್ತಿ ಚೆನ್ನಬಸವ ದೇವರು ನಿರೂಪಿಸಿದ ಕ್ಷೇತ್ರಜ್ಞ ಸುಮನೋವಾದ" ಎಂದು ಇದರ ಹೆಸರು ಹೇಳಲ್ಪಟ್ಟಿದೆ. ಪ್ರಥಮದಲ್ಲಿ 'ವಸ್ತುನಿರ್ದೇಶಸ್ಥಲಂ' ಎಂಬ ಮೊದಲನೆಯ ಸಂಧಿ, ಮುಂದೆ 'ವಿಶ್ವೋತ್ಪತ್ತಿ ವಿವರಣ ಸ್ಥಲಂ' ಎಂಬ ಎರಡನೆಯ ಸಂಧಿ, 'ಪಿಂಡಸ್ಥಲ'ವೆಂಬ ಮೂರನೆಯ ಸಂಧಿ, 'ಪಿಂಡಜ್ಞಾನ ಸ್ಥಲ'ವೆಂಬ ನಾಲ್ಕನೆಯ ಸಂಧಿ, 'ಸಂಸಾರ ಸಂಬಂಧ ಸ್ಥಲ'ವೆಂಬ ಐದನೆಯ ಸಂಧಿ, 'ಸಂಸಾರ ಹೇಯಸ್ಥಲ'ವೆಂಬ ಆರನೆಯ ಸಂಧಿ, 'ಲಿಂಗ ನಿಜ ಸ್ಥಾಪನ ಸ್ಥಲ'ವೆಂಬ ಏಳನೆಯ ಸಂಧಿ, 'ಗುರುಕರುಣ ಸ್ಥಲ' ವೆಂಬ ಎಂಟನೆಯ ಸಂಧಿ, 'ದೀಕ್ಷಾ ವಿಧಾನಸ್ಥಲ' ಎಂಬ ಒಂಬತ್ತನೆಯ ಸಂಧಿ, 'ಜ್ಞಾನಾಚಾರ ಸ್ಥಲ'ವೆಂಬ ಹತ್ತನೆಯ ಸಂಧಿ, 'ಲಿಂಗಧಾರಣ ಸ್ಥಲ'ವೆಂಬ ಹನ್ನೊಂದನೆಯ ಸಂಧಿ, 'ಭಸ್ಮಧಾರಣ ಸ್ಥಲ'ವೆಂಬ ಹನ್ನೆರಡನೆಯ ಸಂಧಿ, 'ರುದ್ರಾಕ್ಷಿಸ್ಥಲ'ವೆಂಬ ಹದಿಮೂರನೆಯ ಸಂಧಿ, 'ಪಂಚಾಕ್ಷರಿಯ ಸ್ಥಲ'ವೆಂಬ ಹದಿನಾಲ್ಕನೆಯ ಸಂಧಿ, 'ಭಕ್ತ ಸ್ಥಲ'ವೆಂಬ ಹದಿನೈದನೆಯ ಸಂಧಿ, 'ಮಾಹೇಶ್ವರ ಸ್ಥಲ'ವೆಂಬ ಹದಿನಾರನೆಯ ಸಂಧಿ, 'ಪ್ರಸಾದಿಸ್ಥಲ'ವೆಂಬ ಹದಿನೇಳನೆಯ ಸಂಧಿ. 'ಪ್ರಾಣಲಿಂಗಿ ಸ್ಥಲ'ವೆಂಬ ಹದಿನೆಂಟನೆಯ ಸಂಧಿ, 'ಶರಣ ಸ್ಥಲ'ವೆಂಬ ಹತ್ತೊಂಬತ್ತನೆಯ ಸಂಧಿ, 'ಐಕ್ಯಸ್ಥಲ'ವೆಂಬ ಇಪ್ಪತ್ತನೆಯ ಸಂಧಿ, 'ಸ್ವಲೀಲಾನಂದ ಸ್ಥಲ' ವೆಂಬ ಇಪ್ಪತ್ತೊಂದನೆಯ ಸಂಧಿ ಹೀಗೆ ಇಪ್ಪತ್ತೊಂದು ಸಂಧಿ ಅಥವಾ ಪ್ರಕರಣಗಳು ಇದರಲ್ಲಿರುತ್ತವೆ.

ಮೊದಲಿನ ಹದಿನೈದು ಸಂಧಿಗಳು ಅಥವಾ ಪ್ರಕರಣಗಳು ಭಾವನಿ (ಭಾಮಿನಿ) ಷಟ್ಪದಿಯಲ್ಲಿಯೂ, ಮುಂದೆ ಹದಿನಾರು ಮತ್ತು ಹದಿನೆಂಟನೆಯ ಪ್ರಕರಣಗಳು ಪರಿವರ್ಧನಿ ಷಟ್ಪದಿಯಲ್ಲಿಯೂ ಇನ್ನುಳಿದ ಪ್ರಕರಣಗಳು ಭಾಮಿನಿ ಷಟ್ಪದಿಯಲ್ಲಿಯೂ ರಚಿಸಲ್ಪಟ್ಟಿವೆ. ಭಾವನಿ ಅಥವಾ ಭಾಮಿನಿ ಷಟ್ಪದಿಗೆ ಒಂದು ಎರಡು ನಾಲ್ಕು ಮತ್ತು ಐದನೆಯ ಪಾದಗಳಲ್ಲಿ ಹದಿನಾಲ್ಕು ಮಾತ್ರೆಗಳೂ ಮೂರು ಮತ್ತು ಆರನೆಯ ಪಾದಗಳಲ್ಲಿ ಕೊನೆಯ ಗುರು ಅಕ್ಷರವು ಸೇರಿ ಇಪ್ಪತ್ತುಮೂರು ಮಾತ್ರೆಗಳೂ ಇರಬೇಕು.

ಪರಿವರ್ಧಿನಿ ಷಟ್ಪದಿಯಲ್ಲಿ ಒಂದು ಎರಡು ನಾಲ್ಕು ಮತ್ತು ಐದನೆಯ ಪಾದಗಳಿಗೆ ಹದಿನಾರು ಮಾತ್ರೆಗಳೂ ಮೂರು ಮತ್ತು ಆರನೆಯ ಪಾದಗಳಿಗೆ ಕೊನೆಯ ಗುರು ಅಕ್ಷರವು ಸೇರಿ ಇಪ್ಪತ್ತಾರು ಮಾತ್ರೆಗಳೂ ಇರಬೇಕು.

ಈ ಗ್ರಂಥದ ಪ್ರತಿಯೊಂದು ಪ್ರಕರಣದಲ್ಲಿಯೂ ಮೊದಲಿಗೆ ಒಂದೊಂದು ಪಲ್ಲವಿಯಿದ್ದು ಇದು ಆಯಾ ಸಂಧಿಯಲ್ಲಿ ವಿವರಣೆ ಮಾಡಲ್ಪಟ್ಟ ವಿಷಯಗಳನ್ನು ಸಂಕ್ಷೇಪವಾಗಿ ಸೂಚಿಸುತ್ತಿದೆ.

ಮೊದಲನೆಯ ಸಂಧಿಯ ಮೊದಲನೆಯ ಪದ್ಯದಲ್ಲಿ "ಚೆನ್ನವೃಷೇಂದ್ರ ಘನ ಯೋಗೀಂದ್ರ ಮಾಂ ಪಾಹಿ" ಎಂದು ಹೇಳಲ್ಪಟ್ಟಿರುವವರು ಕಲ್ಯಾಣದ ಚೆನ್ನಬಸವೇಶ್ವರರೇ ಆಗಿರಬೇಕು ಅವರ ಸ್ತೋತ್ರವಿದೆಂದು ಗ್ರಹಿಸಬಹುದಾಗಿದೆ. ಏಕೆಂದರೆ ಎರಡನೆಯ ಪದ್ಯದಲ್ಲಿ, ಭಕ್ತನಾದ ಬಸವೇಶ್ವರ ಮಹಾನುಭಾವಿಗಳಾದ ಚೆನ್ನಬಸವೇಶ್ವರ ಪ್ರಭುದೇವರು ಮತ್ತು ಇವರ ಭಕ್ತರಾದ ಮಡಿವಾಳ ಮಾಚಯ್ಯನವರು ಘಟ್ಟಿವಾಳಯ್ಯನವರು ಸಿದ್ಧರಾಮಯ್ಯನವರು ಮೊದಲಾದ ಸದ್ಗುರುಲಿಂಗಜಂಗಮಭಕ್ತರ ಪ್ರಾರ್ಥನೆಯಿದೆ. ಹೀಗಿರುವುದರಿಂದ ಈ ಗ್ರಂಥವನ್ನು ಕಲ್ಯಾಣದ ಶೂನ್ಯಸಿಂಹಾಸನದ ಅನುಯಾಯಿಗಳಾಗಿದ್ದವರು ರಚಿಸಿರಬೇಕೆಂದು ಗುರುತಿಸಲಿಕ್ಕೆ ಬರುವಂತಿದೆ. ನಿ. ಜ. ತೋಂಟದ ಸಿದ್ಧೇಶ್ವರರು ರಚಿಸಿದ ವಚನದಲ್ಲಿ ಲನೆಯ ವಚನ ಇವರ ಹಿಂದೆ ಚನ್ನಬಸವಯೋಗೀಂದ್ರರೆಂಬವರ ಹೆಸರು ಇಲ್ಲ.

"ಇದು ಸಮಸ್ತ ಶಿವಾನುಭಾವರ
ಪದಪಯೋರುಹಗಂಧಮದಷಟ್-
ಪದನು ಷಟ್ಸ್ಥಲಸಾರ್ವಭೌಮಂ ಚೆನ್ನವೃಷಭೇಂದ್ರಂ।
ವಿದಿತವಾಗಿ ನಿರೂಪಸಿದ ಸಂ-
ಮುದ ಮಹಾ ಕ್ಷೇತ್ರಜ್ಞಸುಮನೋ
ವಾದದೊಳು ಸದ್ವಸ್ತುನಿರ್ದೇಶ ಪ್ರಥಮಸಂಧಿ ||"

ಎಂದು ಮೊದಲನೆಯ ಸಂಧಿಯ ಕೊನೆಯಲ್ಲಿ ಇದೆ. ಇದೇ ಸಂಗತಿಯನ್ನೇ ಉಳಿದ ಪ್ರಕರಣಗಳ ಕೊನೆಯಲ್ಲಿಯೂ ಹೇಳಿರುವುದರಿಂದ ಈ ಗ್ರಂಥದ ರಚನೆಯನ್ನು ಮಾಡಿದ ಶ್ರೀ ನಿರಂಜನ ಚೆನ್ನಬಸವಸ್ವಾಮಿಗಳು ಷಟ್ಸ್ಥಲಸಾರ್ವಭೌಮ (ಚಕ್ರವರ್ತಿ) ಎಂದೂ ಕಲ್ಯಾಣದ ಶೂನ್ಯಸಿಂಹಾಸನದ ಪರಂಪರೆಯವರೆಂದೂ ತಿಳಿಯಲು ಆರಿಗೂ ಅನುಮಾನ ಬರಲಾರದು.

ದಯಾಸಮುದ್ರನಾದ ಆದಿಗುರುವು ತನ್ನ ಕರಕಮಲದಲ್ಲಿ ಸಂಜಾತನಾದ ಶಿಷ್ಯನಿಗೆ ಆತನು ಪೂಜೆಮಾಡುವ ( ಪೂಜ್ಯಭಾವನೆಯನ್ನಿಟ್ಟಿರುವ ) ನಿರಾಕಾರನಾದ ಮಹಾದೇವನ ವಿಷಯದ ಗೊತ್ತಾದ ಸಂಗತಿಯನ್ನು ವಿಸ್ತಾರವಾಗಿ ತೋರಿಸಿಕೊಡುವ

ಸಂಧಿಯಿದು ಮೊದಲನೆಯದಾಗಿದೆ. ವೀರಶೈವರಿಗೆ ಪೂಜ್ಯನಾದ ನಿರಾಕಾರರೂಪ ಮಹಾದೇವನಿಗೆ 'ಮಹಾಘನವಸ್ತು' (God) ಎಂದು ಕರೆದು ಆ ವಸ್ತುವಿನ ಲಕ್ಷಣದ ತೋರುವಿಕೆಯನ್ನು ಇಲ್ಲಿ ವಿವರಣಮಾಡಿದ್ದಾರೆ. ಆರನೆಯ ಪದ್ಯದಿಂದ ಒಂಬತ್ತನೆಯ ಪದ್ಯದ ವರೆಗೆ ನೋಡಿರಿ. ಬಹು ಪ್ರಾಚೀನವೆನಿಸಿಕೊಂಡಿರುವ ಹತ್ತು ಉಪನಿಷತ್ತುಗಳಲ್ಲಿ ಒಂದಾದ ಕಠೋಪನಿಷತ್ತಿನಲ್ಲಿ ಈ ಶ್ಲೋಕಗಳಿವೆ.

ಇಂದ್ರಿಯೇಭ್ಯಃ ಪರಾಹ್ಯರ್ಥಾಃ ಅರ್ಥೇಭ್ಯಶ್ಚ ಪರಂ ಮನಃ |
ಮನಸಶ್ಚ ಪರಾಬುದ್ಧಿಃ ಬುದ್ಧೇರಾತ್ಮಾ ಮಹಾನ್ ಪರಃ ‖ ೧೦ ‖

ಮಹತಃ ಪರಮವ್ಯಕ್ತಮವ್ಯಕ್ತಾತ್ ಪುರುಷಃ ಪರಃ |
ಪುರುಷಾನ್ನ ಪರಂ ಕಿಂಚಿತ್ ಸಾ ಕಾಷ್ಠಾ ಸಾ ಪರಾಗತಿಃ ‖ ೧೧ ‖

ಏಷ ಸರ್ವೇಷು ಭೂತೇಷು ಗೂಢಾತ್ಮಾ ನ ಪ್ರಕಾಶತೇ |
ದೃಶ್ಯತೇ ತ್ವಗ್ರ್ಯಯಾ ಬುದ್ಧ್ಯಾ ಸೂಕ್ಷ್ಮಯಾ ಸೂಕ್ಷ್ಮದರ್ಶಿಭಿಃ ‖ ೧೨ ‖

ಇಂದ್ರಿಯಗಳಿಗಿಂತಲೂ ಇಂದ್ರಿಯಾರ್ಥಗಳು (ಇಂದ್ರಿಯ ವಿಷಯಗಳು) ಉತ್ತಮವಾದುವಾಗಿವೆ. ಆ ವಿಷಯಗಳಿಗಿಂತಲೂ ಮನಸ್ಸು ಉತ್ತಮವಾದುದು. ಮನಸ್ಸಿಗಿಂತಲೂ ಬುದ್ಧಿಯುತ್ತಮವಾದುದು. ಬುದ್ಧಿಗಿಂತಲೂ ಮಹದಾತ್ಮ ಎಂಬುದು ಉತ್ತಮವು. ಈ ಮಹದಾತ್ಮನಿಗಿಂತಲೂ ಅವ್ಯಕ್ತವು ಉತ್ತಮವಾದುದು. ಈ ಅವ್ಯಕ್ತಕ್ಕಿಂತಲೂ ಪುರುಷನು ಉತ್ತಮನು, ಪುರುಷನಿಗಿಂತಲೂ ಉತ್ತಮವಾದುದು ಯಾವುದೂ ಇಲ್ಲ. ಅದೇ ಕೊನೆಯ (ಪರಿಣಾಮ) ಸ್ಥಿತಿಯು (ಸುಖದುಃಖಾದಿಗಳಿಗೆ ಅಧೀನವಾದ ಜ್ಞಾನವಿಲ್ಲದೆ ಕಟ್ಟಿಗೆಯಂತೆ ಇರುವ ಸ್ಥಿತಿಯು) ಅದೇ ಶ್ರೇಷ್ಠವಾದ ಗತಿಯು. (ಇದಕ್ಕಿಂತಲೂ ಹೆಚ್ಚಾದಗತಿಯು ಯಾರಿಗೂ ದೊರಕುವುದಿಲ್ಲ.)

ಇದೇ ಕಠೋಪನಿಷತ್ತಿನಲ್ಲಿ ಮುಂದೆ ಈ ಶ್ಲೋಕಗಳಿರುತ್ತವೆ.

ಇಂದ್ರಿಯೇಭ್ಯಃ ಪರಂ ಮನೋ ಮನಸಃ ಸತ್ವಮುತ್ತಮಂ |
ಸತ್ವಾದಧಿಮಹಾನಾತ್ಮಾ ಮಹತೋಽವ್ಯಕ್ತಮುತ್ತಮಂ ‖
ಅವ್ಯಕ್ತಾತ್ತು ಪರಃ ಪುರುಷೋವ್ಯಾಪಕೋ ಲಿಂಗ ಏವ ಚ |
ಯದ್‌ಜ್ಞಾತ್ವಾ ಮುಚ್ಯತೇ ಜಂತುರಮೃತತ್ವಂ ಚ ಗಚ್ಛತಿ ‖

ಈ ಶ್ಲೋಕಗಳಲ್ಲಿ ಮೇಲೆ ಹೇಳಿದಂತೆ ಇಂದ್ರಿಯಗಳಿಗಿಂತ ಮನಸ್ಸು ಉತ್ತಮ ಎಂದು ಮುಂತಾಗಿ ಬೋಧಿಸುತ್ತಾ ಕೊನೆಯ ಪುರುಷ ತತ್ವವು ವ್ಯಾಪಕವಾಗಿ ಲಿಂಗವಾಗಿಯೇ ಇದೆ. ಇದನ್ನು ತಿಳಿದು ಪ್ರಾಣಿಯು ಮುಕ್ತನಾಗುತ್ತಾನೆ. ಮತ್ತು

ಅಮೃತತ್ವವನ್ನು ಪಡೆಯುತ್ತಾನೆ; ಎಂಬುದಾಗಿ ಪುರುಷ ಶಬ್ದಕ್ಕೆ 'ಲಿಂಗ' ಎಂಬ ಹೆಸರನ್ನು ಸಾಂಕೇತಿಕವಾಗಿ ಹೇಳಿದ್ದಾರೆ.

ಇದೇ ಉಪನಿಷತ್ತಿನಲ್ಲಿ—

ಅಂಗುಷ್ಠಮಾತ್ರಃ ಪುರುಷೋ ಮಧ್ಯೇ ಆತ್ಮನಿ ತಿಷ್ಠತಿ |
ಈಶಾನೋ ಭೂತಭವ್ಯಸ್ಯ ನ ತತೋ ವಿ ಜುಗುಪ್ಸತೇ ||

'ಏತದ್ವೈತದ್' ಎಂಬ ಬೋಧೆಯಿದೆ; ಇದರಿಂದ ಪುರುಷನು ಈಶಾನನೆಂದು ವ್ಯಕ್ತವಾಗುತ್ತದೆ.

ಭಗವದ್ಗೀತೆಯಲ್ಲಿ—

'ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ'

ಎಂದು ಹೇಳಿರುವ ಪ್ರಕಾರ ಹೃದಯದಲ್ಲಿ ಇರುವವನು ಈಶ್ವರನೆಂದು ವ್ಯಕ್ತವಾಗುತ್ತದೆ.

ಅಂಗುಷ್ಠಮಾತ್ರಃ ಪುರುಷೋ ಜ್ಯೋತಿರಿವಾಧೂಮಕಃ |
ಈಶಾನೋ ಭೂತಭವ್ಯಸ್ಯ ಸ ಏವಾದ್ಯಃ ಸ ಉ ಸ್ವಃ ( ಏತದ್ವೈತದ್ )

ಇದರಿಂದ ಪುರುಷನು ಹೊಗೆಯಿಲ್ಲದ ಜ್ಯೋತಿರೂಪನೆಂದು ವ್ಯಕ್ತವಾಗುತ್ತದೆ.

'ಅಂಗುಷ್ಟಮಾತ್ರಃ ಪುರುಷೋಽಂಗುಷ್ಠಂ ಚ ಸಮಾಶ್ರಿತಃ'

ಎಂಬ ಸೂತ್ರವನ್ನು ಲಿಂಗಧಾರಣೆಯ ಪರವಾಗಿ ಅರ್ಥಮಾಡಿದ ಅನೇಕ ಗ್ರಂಥಗಳಿವೆ.

ಏಷ ಸರ್ವೇಷು ಭೂತೇಷು ಗೂಢಾತ್ಮಾ ನ ಪ್ರಕಾಶತೆ |
ದೃಶ್ಯತೇ ತ್ವಗ್ರ್ಯಯಾ ಬುದ್ಧ್ಯಾ ಸೂಕ್ಷ್ಮಯಾ ಸೂಕ್ಷ್ಮದರ್ಶಿಭಿಃ ||೧೨||

ಎಂಬ ಮೇಲಿನ ಆಧಾರದಿಂದ ಪುರುಷ ಅಥವಾ ಲಿಂಗವು ಸರ್ವಪ್ರಾಣಿಗಳಲ್ಲಿ ಗುಪ್ತವಾದ ಆತ್ಮವಾಗಿದ್ದು ಹೊರಗೆ ಪ್ರಕಾಶಿಸುವುದಿಲ್ಲ. ( ಕಟ್ಟಿಗೆಯಲ್ಲಿ ಬೆಂಕಿಯಿದ್ದ ಹಾಗೆ) ಅದನ್ನು ಸೂಕ್ಷ್ಮದರ್ಶಿಗಳು ತಮ್ಮ ಶ್ರೇಷ್ಠವಾದ ಬುದ್ಧಿಯಿಂದ ನೋಡುತ್ತಾರೆ.

ಏಕೋ ವಶೀ ಸರ್ವಭೂತಾಂತರಾತ್ಮಾ ಏಕಂ ರೂಪಂ
ಬಹುಧಾ ಯಃ ಕರೋತಿ |
ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾಸ್ತೇಷಾಂ ಸುಖಂ
ಶಾಶ್ವತಂ ನೇತರೇಷಾಮ್ |

ಈ ಶ್ಲೋಕವು ಅದೇ ಉಪನಿಷತ್ತಿನಲ್ಲಿಯೇ ಇದೆ.

ಸರ್ವಪ್ರಾಣಿಗಳ ಅಂತರಾತ್ಮನಾಗಿರುವವನನ್ನು ತಮ್ಮ ಆತ್ಮದಲ್ಲಿರುವವನನ್ನಾಗಿ ಯಾರು ನೋಡಿ ಅನುಭವಿಸುವರೋ ಅವರ ಸುಖವೇ ಶಾಶ್ವತವಾದಸುಖ; ಇತರರದು ಶಾಶ್ವತಸುಖವಲ್ಲ. ಹೀಗೆ ಅದೇ ಉಪನಿಷತ್ತಿನಲ್ಲಿಯ ಈ ಮೇಲಿನ ಶ್ಲೋಕದಿಂದ ಹೇಳಲ್ಪಟ್ಟಿರುವದರಿಂದಲೂ ವೀರಶೈವರು ಆತ್ಮಸ್ಥವಾದ ಲಿಂಗವೇ ಮುಖ್ಯವೆಂದು ಧರಿಸಿರುವುದರಿಂದಲೂ ಲಿಂಗಧಾರಣೆಯು ಉಪನಿಷತ್ತುಗಳ ಕಾಲದಲ್ಲಿ ಮಾನ್ಯ ವಾಗಿದ್ದಿತೆಂದು ಚೆನ್ನಾಗಿ ವ್ಯಕ್ತವಾಗುತ್ತದೆ.

ಈ ಪುರುಷತತ್ವ ಅಥವಾ ಲಿಂಗವು—

ಅಶಬ್ದಮಸ್ಪರ್ಶಮರೂಪಮವ್ಯಯಂ
ತಥಾರಸಂ ನಿತ್ಯ ಮಗಂಧವಚ್ಚ ಯತ್ |
ಅನಾದ್ಯನಂತಂ ಮಹತಃ ಪರಂ ಧೃವಂ
ನಿಚಾಯ್ಯ ತ್ವಂ ಮೃತ್ಯುಮುಖಾತ್ ಪ್ರಮುಚ್ಯತೇ ||

ಈ ಲಕ್ಷಣವುಳ್ಳುದಾಗಿ ಈ ಉಪನಿಷತ್ತಿನಲ್ಲಿ ಹೇಳಿದ ಪ್ರಕಾರವೇ ಈ ಗ್ರಂಥದ ವಸ್ತುನಿರ್ದೇಶಸ್ಥಲದಲ್ಲಿ ಹೇಳಲ್ಪಟ್ಟಿರುವುದರಿಂದ ವೀರಶೈವರ ಮುಖ್ಯದೈವವಾದ 'ವಸ್ತುವು' ಉಪನಿಷತ್ತಿನಲ್ಲಿ ಉಕ್ತವಾದ ಪುರುಷತತ್ವ ಅಥವಾ ಲಿಂಗವೇ ಎಂದು ನಿರ್ಧರಿಸಲನುಮಾನವು ಆರಿಗೂ ಬರಲಾರದು. ಗ್ರಂಥಾಂತರಗಳಲ್ಲಿ 'ಲಿಂಗವೇ ಬ್ರಹ್ಮ' 'ಬ್ರಹ್ಮವೇ ಲಿಂಗ' 'ಲಿಂಗರೂಪಂ ಜಗದ್ರೂಪಂ' ಎಂಬಿವೇ ಮೊದಲಾದ ವಾಕ್ಯ ಪ್ರಮಾಣಗಳು ದೊರಕುವುದರಿಂದ ಲಿಂಗವೇ ನಿರಾಕಾರಮೂಲವಸ್ತುವಿನಿಂದುಂಟಾದ ಮೊದಲನೆಯ ಸಾಕಾರ ರೂಪವಾಗಿ ಸರ್ವರಿಂದಲೂ ಪೂಜಿಸಲ್ಪಡುವುದಕ್ಕೆ ನಿಜವಾದ ಸಾಧನೆಯೆಂದು ಗ್ರಹಿಸಬೇಕಾಗಿದೆ. ಈಗಿನ ಶಾಸ್ತ್ರಕಾರರು (Scientists) ತಿಳಿದಿರುವ ಜಗತ್ತಿನ ಮೂಲರೂಪವಾದ ವಿದ್ಯುದಣುವು ಗೋದಿಕಾಳಿನ ಮಾಟವಾಗಿ ರುವುದೆಂಬ ಹೇಳಿಕೆಯು ಜಗತ್ತಿನ ಮೂಲರೂಪವಾದ ಸೂಕ್ಷ್ಮರೂಪವು ವಿದ್ಯುತ್ಪ್ರಕಾಶ ಲಿಂಗವೇ ಆಗಿದೆ. ಈ ವಿಧದಲ್ಲಿ ಪೂರ್ವದವರ ಶಾಸ್ತ್ರದ ಮತ್ತು ಈಗೀಗಿನವರ ಶಾಸ್ತ್ರದ ಬೋಧೆಯು ಒಂದೇ ಸರಿಯಾಗಿ ಇದೆ. ಅದು ಲಿಂಗವನ್ನು ಒಪ್ಪುತ್ತದೆ ಎಂದು ನಿಶ್ಚಯಿಸಲಿಕ್ಕೆ ಬರುತ್ತಿದೆ.

ಶಿವಶರಣರ ವಚನಗಳಲ್ಲಿ 'ನನೆಯೊಳಗಣ ಪರಿಮಳದಂತೆ, ಕನ್ಯೆಯ ಸ್ನೇಹದಂತೆ, ನಿನ್ನರಿವನಾರಿಗೂ ಅರಿಯಬಾರದು' ಎಂದು ಪರವಸ್ತುವಿನ ವಿಷಯವಾಗಿ ಹೇಳಿದ್ದಾರೆ. ಮೇಲಿನ ಕಠೋಪನಿಷತ್ತಿನಲ್ಲಿಯೂ ಸರ್ವಪ್ರಾಣಿಗಳಲ್ಲಿ ಗೂಢಾತ್ಮ ನಾಗಿದ್ದಾನೆ. ಹೊರಗೆ ಪ್ರಕಾಶಿಸುವುದಿಲ್ಲ. ಎಂದು ಇರುವುದರಿಂದ ವೀರಶೈವರಿಗೆ ಪೂಜ್ಯವಾದ ಘನವಸ್ತುವು ಲಿಂಗವೆನಿಸಿಕೊಂಡು ಕೇವಲ ಸೂಕ್ಷ್ಮವಾಗಿರುವುದೆಂದು ನಿಶ್ಚಯಿಸಲಿಕ್ಕೆ ಬರುತ್ತದೆ. ಇಂತು ವಸ್ತುನಿರ್ದೇಶನಸ್ಥಲವು.

## ೨. ವಿಶ್ವೋತ್ಪತ್ತಿ ವಿವರಣಸ್ಥಲ

ಉತ್ತಮನಾದ ಗುರುವು ಸತ್ಯಸದ್ರೂಪನಾದ ತನ್ನ ಮಗನರೂಪನಾದ ಶಿಷ್ಯನಿಗೆ ಸರ್ವಜಗತ್ತಿನ ಸಾಕಾರರೂಪನಾದ ಬ್ರಹ್ಮ (ಲಿಂಗ) ದಿಂದಲೇ ಸರ್ವ ಜಗತ್ತು ವ್ಯಾಪಿಸಿಕೊಂಡಿರುವುದರ ವಿವರವನ್ನು ಈ ಎರಡನೆಯ ಸಂಧಿಯಲ್ಲಿ ಹೇಳಿದ್ದಾನೆ. ಬ್ರಹ್ಮರೂಪವೇ ಜಗತ್ತಾಗಿತೋರಿ ಭೂಮಿಯು ಗೋಳಕಾಕಾರವಾಗಿರುವಂತೆ ಬ್ರಹ್ಮನು ಗೋಳಕಾಕಾರನಾಗಿ (ಲಿಂಗರೂಪನಾಗಿ) ಇದ್ದಾನೆ. ಮತ್ತು ಅಣುಲಿಂಗರೂಪನಾಗಿಯೂ ವ್ಯಾಪಿಸಿಕೊಂಡಿದ್ದಾನೆ. ಎಂಬ ಅಭಿಪ್ರಾಯವು ಈ ಸಂಧಿಯಲ್ಲಿ ಹೇಳಲ್ಪಟ್ಟಿದೆ. ಒಂದು ವಿದ್ಯುದಣುವು (Eletron) ಮುಂದೆ ಅದರ ಸೂಕ್ಷ್ಮರೂಪಗಳನ್ನು ಹೊಂದಿರುವದನ್ನು ಈಗಿನ ಶಾಸ್ತ್ರಕಾರರು ಬೋಧಿಸಿ ಹೇಳಿರುವುದರಿಂದ ಜಗತ್ತಿನ ಸೂಕ್ಷ್ಮರೂಪವಾದ ಅಣುವೂ ಗೋಳಾಕಾರ (ಲಿಂಗರೂಪ) ಆಗಿದೆ. ಆ ಅಣುಲಿಂಗಗಳಿಂದ ಬೆಳೆದು ಕೊಂಡಿರುವುದೇ ಬ್ರಹ್ಮ (ಮಹಾಲಿಂಗ) ಎಂಬುದನ್ನು ತಿಳಿಸುವುದೀ ಸಂಧಿಯು. ಇದರಿಂದ ಬ್ರಹ್ಮವು ಬೃಹನ್ಮಯವು ಎಂದರೆ ವಿಶ್ವಮೂರ್ತಿಯಾದ ವಿರಾಡ್ರೂಪ ಲಿಂಗವು ಲಿಂಗಮಯವಾಗಿದೆ, ಎಂಬುದು ಸ್ಪಷ್ಟಪಡುತ್ತದೆ. ಮೊದಲಿನ ಸಂಧಿಯಲ್ಲಿ ಹೇಳಲ್ಪಟ್ಟ 'ವಸ್ತು' ಎಂಬುದೇ ಸಾಕಾರವಾಗಿ ವಿಶ್ವಮೂರ್ತಿಯಾಗಿದೆ. ಅದೇ ಬ್ರಹ್ಮವೆನಿಸಿಕೊಂಡಿದೆ. ಆ ಬ್ರಹ್ಮದಿಂದಲೇ "ಅನಾದಿಬಿಂದು" ಉದಯವಾಗಿದೆ. ಈ ಅನಾದಿಬಿಂದುವೇ ಮಹತ್ತಾದ ಅಂಗ (ಮಹದಂಗ)ವೆನಿಸಿಕೊಂಡಿದೆ. ಸತ್-ಚಿತ್-ಆನಂದ ನಿತ್ಯ ಪರಿಪೂರ್ಣ ಎಂಬ ಪಂಚಲಕ್ಷಣವುಳ್ಳದಾಗಿ ಪರ, ಗೂಢ, ಶರೀರಸ್ಥ, ಲಿಂಗಕ್ಷೇತ್ರ ಅನಾದಿವತ್ ಎಂಬ ಪಂಚ, ಸಂಜ್ಞೆಗಳುಳ್ಳ ಬ್ರಹ್ಮರೂಪವಾಗಿ ಅದರಿಂದ ವಿಶ್ವದ ಉತ್ಪತ್ತಿಯಾಗಿದೆ. ಆ ವಿಶ್ವದಿಂದ ಸಚರ ಮತ್ತು ಅಚರ ಎಂದು ಎರಡುಭೇದದ ಸೃಷ್ಟಿಯಾಗಿದೆ ಎಂಬುದರ ವಿವರವು ಇಲ್ಲಿ ಇದೆ. ಕೆಲವರು ಅನಾದಿಬಿಂದುವೇ ಮೂಲವೆಂದು ಜಗತ್ಸೃಷ್ಟಿಯ ಕಾರಣವೆಂದೂ ಹೇಳುತ್ತಾರೆ. ಈ ಅನಾದಿಬಿಂದುವೇ 'ಶಕ್ತಿ' ಎಂದು ತಿಳಿಯಲ್ಪಡುವುದರಿಂದ ಹಾಗೆ ಹೇಳುವವರು ಶಕ್ತಿಗೆ ಮುಖ್ಯತ್ವವನ್ನು ಕೊಟ್ಟಂತೆ ಆಗುತ್ತದೆ. ಆದರೆ ಮೊದಲನೆಯ ಸಂಧಿಯಲ್ಲಿ ಹೇಳಿದ ವಸ್ತುವಿನಿಂದಲೇ (ಇದಕ್ಕೆ ಪರವಸ್ತು ಎಂದೂ ಹೆಸರು ಕೊಡಲ್ಪಟ್ಟಿದೆ.) ವಿಶ್ವಸೃಷ್ಟಿಯಾಗಿದೆ ಎಂಬುದು ಮುಖ್ಯವೆಂಬುದನ್ನು ಮರೆಯದಿರಬೇಕು. ಈಗಿನ ವಿಜ್ಞಾನಿಗಳು (Scientists) ಒಂದು ಅಣುವಿನಲ್ಲಿ ಧನಕಣ ಋಣಕಣ ಎಂಬ ಎರಡು ಕಣಗಳಿದ್ದು ಅವುಗಳಲ್ಲಿ ಋಣಕಣವು ಚಲಿಸುತ್ತಿರುವುದಾಗಿಯೂ ಧನಕಣವು ಸುಮ್ಮನೆ ಇದ್ದಂತೆ ಕಂಡರೂ ಆ ಧನಕಣದ ಆಶ್ರಯದಿಂದಲೇ ಋಣಕಣವು ಚಲನೆಯಾಗಿ ಅನೇಕ ಅಣುಕ ವಸ್ತುಗಳನ್ನು ಸೃಷ್ಟಿಮಾಡುವುದಾಗಿಯೂ ಹೇಳಿರುವುದರಿಂದ ಋಣ ಕಣವೇ ಶಕ್ತಿಯೆಂದೂ ಧನಕಣವೇ ವಸ್ತುವೆಂದೂ ತಿಳಿದು ವಸ್ತುವಿನಿಂದಲೇ ಸೃಷ್ಟಿಯೆಂಬುದನ್ನು ಅಂಗೀಕರಿಸಬೇಕಾಗಿದೆ. ಪರವಸ್ತುವೇ ಲಿಂಗವಾಗಿ ಅನಾದಿಬಿಂದುವೇ

ಅಂಗವಾಗಿ ಇರುವುದರ ವಿವರದಿಂದಲೇ ವೀರಶೈವರ ಅಂಗ ಲಿಂಗ ಸಾಮರಸ್ಯದ ಆರು ಸ್ಥಲಗಳು ಏರ್ಪಡಿಸಲ್ಪಟ್ಟಿವೆ. ಇಂತು ವಿಶ್ವೋತ್ಪತ್ತಿ ವಿವರಣ ಸ್ಥಲವು.

## ೩. ಪಿಂಡಸ್ಥಲ

ಈ ಮುಂದಿನ ಸಂಧಿಯಲ್ಲಿ "ಪಿಂಡ" ಶಬ್ದದ ಅರ್ಥವಿವರಣೆಯನ್ನೂ ಪಿಂಡದ ಈ ನಿಜಸ್ವರೂಪವನ್ನೂ ಅದು ರೂಪಾಂತರವನ್ನೂ ತಾಳಿ ಅನೇಕ ರೂಪುಗಳಾಗಿರುವುದನ್ನೂ ಚಿತ್ಪಿಂಡನೆನಿಸಿಕೊಂಡ ಸುಮನ ಎಂಬ ಶಿಷ್ಯನಿಗೆ ಕ್ಷೇತ್ರಜ್ಞನೆಂಬ ಆತ್ಮರೂಪಿಯಾದ ಉತ್ತಮನಾದ ಗುರುದೇವನು ಕರುಣೆಯಿಟ್ಟು ಪ್ರೀತಿಯಿಂದ ಉಪದೇಶ ಮಾಡಿದ್ದಾನೆ.

ಬಹುರ್ಜನ್ಮಕೃತೈಃ ಪುಣ್ಯೈಃ ಪ್ರಕ್ಷೀಣೇ ಪಾಪಪಂಜರೇ ।<br>ಶುದ್ಧಾಂತಃಕರಣೋ ದೇಹೀ ಪಿಂಡ ಶಬ್ದೇನ ಗೀಯತೇ ॥

ಎಂಬ ಪ್ರಮಾಣದ ಪ್ರಕಾರ ಅತಃಕರಣದಲ್ಲಿ ಶುದ್ಧನಾದ ಜೀವನು "ಪಿಂಡ" ಶಬ್ದವಾಚ್ಯನಾಗಿದ್ದಾನೆ. ಈ ಪಿಂಡನೇ (ಶುದ್ಧಜೀವ). ತಾನು ಶಿವಸ್ವರೂಪವೆಂಬ ಜ್ಞಾನವನ್ನು ಹೊಂದಿ ಚಿತ್ಪಿಂಡನೆಂದು ಕರೆಯಲ್ಪಡುತ್ತಾನೆ. ಪಂಚಭೂತಗಳಿಂದ ಪಂಚವಿಂಶತಿತತ್ವಗಳು ಉತ್ಪನ್ನವಾದ ರೀತಿ ಇಪ್ಪತ್ತುನಾಲ್ಕು ತತ್ವಗಳ ವಿವರ ಮೊದಲಾದವುಗಳು ಇಲ್ಲಿ ಹೇಳಲ್ಪಟ್ಟಿವೆ.

## ೪. ಪಿಂಡಜ್ಞಾನಸ್ಥಲ

ಅನಂತರದಲ್ಲಿ ಕೊನೆಯದಾದ ಶುದ್ಧಾಂತಃಕರಣ ಸ್ಥಿತಿಯನ್ನು ಹೊಂದಿದ ಜೀವನೇ ಪಿಂಡನೆನಿಸಿಕೊಂಡು ಪರವಸ್ತುವಿನಿಂದ ಆದ ಸದ್ರೂಪವಸ್ತು ಅಸದ್ರೂಪ ವಸ್ತು ಎಂಬುದಾಗಿ ವಸ್ತುವಿನ ಎರಡು ರೂಪಗಳಾಗಿರುವ ವಿವರವನ್ನು ಸ್ಥಿರವಾದ ವಿಚಾರದಿಂದ ( ಬುದ್ಧಿ ) ತಿಳಿಯುವವನು ಪಿಂಡಜ್ಞಾನಿಯೆನಿಸಿಕೊಳ್ಳುತ್ತಾನೆ. ಇಲ್ಲಿ ಸಾಮಾನ್ಯವಾಗಿ ಪ್ರಾಪಂಚಿಕ ವಸ್ತುಗಳನ್ನು ಅಜಡ, ಜಡ, ( ಚಿತ್ ಅಚಿತ್ ) ಈ ಭೇದಗಳನ್ನು ಮಾನಿಸುವ ಅದ್ವೈತಜ್ಞಾನಿಯ ವಿಚಾರವಿದೆ. ಈ ಪಿಂಡಜ್ಞಾನಿ ಸ್ಥಳವನ್ನು ಆಶ್ರಯಿಸಿಕೊಂಡು ಈಗಿನ ಪ್ರಚಾರದಲ್ಲಿರುವ ಅದ್ವೈತ ಜ್ಞಾನವು ಹರಡಿದೆ, ಎಂಬುದು ಇದರಿಂದ ವ್ಯಕ್ತವಾಗುತ್ತದೆ. ಶಿವನ (ಪರವಸ್ತು) ಕರುಣೆಯ ಕಟಾಕ್ಷದ ಶಕ್ತಿಯು ಪ್ರಾಪಂಚಿಕದಲ್ಲಿ ಪ್ರವೃತ್ತಿಯಾಗದೆ ನಿವೃತ್ತಿಮಯವಾಗಿ ಇರುತ್ತದೆ. ಆದುದರಿಂದ ಪಿಂಡಜ್ಞಾನಿಯ ವಿಷಯ ವರ್ತನೆಗಳೆಲ್ಲವೂ ನಿವೃತ್ತಿಮಯವಾಗಿಯೇ ಇರುತ್ತವೆ. ಈ ನಿವೃತ್ತಿಮಯ ಶಕ್ತಿಯೇ ಚಿತ್ತಿನ ಶಕ್ತಿ ( ಚಿಚ್ಛಕ್ತಿ ) ಯಾಗಿರುತ್ತದೆ. ಈ ಚಿಚ್ಛಕ್ತಿಯಿಂದ ಸತ್ ಮತ್ತು ಅಸತ್ ರೂಪ ವಸ್ತುಗಳ ನಿಶ್ಚಿತವಾದ

ವಿವರವನ್ನು ತಿಳಿಯುತ್ತಾನೆ. ಎಂಬುದೇ ಮೊದಲಾದ ಈ ಸಂಧಿಯ ವಿಷಯಗಳ ವಿವರಣೆಯಿಂದ (ಶುದ್ಧಾದ್ವೈತ) ಜ್ಞಾನಿಯು ಹೊಂದಬೇಕಾದ ಜ್ಞಾನವು ಚಿಚ್ಛಕ್ತಿಯ ದೆಸೆಯಿಂದಲೇ ಎಂಬ ವಿಷಯವು ವ್ಯಕ್ತವಾಗುತ್ತದೆ. ಇದರಿಂದ ಅದ್ವೈತ ಜ್ಞಾನವನ್ನು ಪಡೆದ ಮೇಲೆ ಶಿವಾದ್ವೈತದಲ್ಲಿ ಪ್ರವೇಶವಾಗಬೇಕೆಂಬುದು ಸ್ಪಷ್ಟ ಪಡುತ್ತದೆ. "ಬ್ರಹ್ಮನಿಗೆ ಇರುವ ಸದ್ರೂಪಕ್ಕೆ ಬೇರೆಯಾದ ಒಂದು ಅಸದ್ರೂಪವು ಇಲ್ಲವಾಗಿ ಆ ಬ್ರಹ್ಮನಿಗೆ ಸತ್ ಚಿತ್ ಆನಂದ ನಿತ್ಯ ಪರಿಪೂರ್ಣ ಅಖಂಡ ಎಂಬ ವ್ಯಾಪಕಲಕ್ಷಣಗಳಿವೆ. ಆದುದರಿಂದ ಆಕಾಶಕ್ಕಿಂತಲೂ ಮೀರಿ ನಿರವಯವಾಗಿ ಬ್ರಹ್ಮವು ಪ್ರಕಾಶಿಸುತ್ತದೆ. ಎಂಬಲ್ಲಿ ಒಂದು ವೃಕ್ಷದಲ್ಲಿ ಬೇರು ಕಾಂಡ ಎಲೆ ಹೂ ಫಲಗಳಾದಂತೆ ಜಗತ್ಕಾರಿಣಿಯಾದ ಮಾಯೆಯ ದೆಶೆಯಿಂದ ಪಂಚಭೂತಗಳು ಬ್ರಹ್ಮನಿಂದ ಉತ್ಪನ್ನವಾಗಿವೆ" ಎಂದು ಹೇಳಿದರೆ ಇದು ಸರಿಯಲ್ಲವೆಂದು ಶಂಕೆಯನ್ನು ತೋರಿಸಿದಾಗ ಆ ಮಾಯೆಯು ಶುಕ್ತಿರಜತನ್ಯಾಯದಂತೆ ಸುಳ್ಳು ಎಂಬುದಾಗಿ ಪ್ರತಿಪಾದಿಸಲ್ಪಡುತ್ತದೆ. (ಚಿಚ್ಛಕ್ತಿ ಜ್ಞಾನದಿಂದ ತಿಳಿಯಲ್ಪಡುವ ಬ್ರಹ್ಮನಿಂದ ಕಲ್ಪಿತಪ್ರಪಂಚ ಸೃಷ್ಟಿಕಾರಣವಾದ ಮಾಯೆಯು ಉದಯವಾಗಿಲ್ಲ ವೆಂಬುದಾಗಿ ಶುದ್ಧಾದ್ವೈತವು ಹೇಳುವುದರಿಂದ ವೀರಶೈವರು ಪಿಂಡಜ್ಞಾನವನ್ನು ಹೊಂದುವಾಗಮಾತ್ರ ಈ ಶುದ್ಧಾದ್ವೈತಜ್ಞಾನದ ವಿವರಣೆಯನ್ನು ಮಾನಿಸುತ್ತಾರೆ. ಎಂಬುದು ಸ್ಪಷ್ಟಪಡುತ್ತದೆ.) ಇಲ್ಲಿ ಕಂಡ ಬ್ರಹ್ಮನ ಆರು ಲಕ್ಷಣಗಳನ್ನೇ ಆರು ಸ್ಥಲಗಳಲ್ಲಿ ವೀರಶೈವರು ಅಂಗೀಕರಿಸಿದ್ದಾರೆ. ಭಕ್ತ ಮಹೇಶ ಪ್ರಸಾದಿ ಪ್ರಾಣ ಲಿಂಗಿ ಶರಣ ಐಕ್ಯ ಎಂಬಿವೇ ಆರುಸ್ಥಲಗಳಾಗಿವೆ. ಪ್ರಪಂಚವು ಮಹಾದೇವನಿಗೆ ಭಿನ್ನವಾಗಿದೆ ಎಂದು ತಿಳಿವುದೇ ಮರವೆ ಅಥವಾ ಮಾಯೆಯುಂದೂ, ಈ ಮಾಯೆಯು ಆ ಪರವಸ್ತುವಿನಿಂದಲೇ ಉಂಟಾಗಿದೆಯೆಂದೂ ವೀರಶೈವರು ನಂಬುತ್ತಾರೆ. ಇಂತು ಪಿಂಡಜ್ಞಾನಸ್ಥಲವು.

### ೫. ಸಂಸಾರ ಸಂಬಂಧ ಸ್ಥಲ

ಪರ ವಸ್ತುವಿನ ಸರ್ವವ್ಯಾಪಕ ಜ್ಞಾನವೇ ಅರಿವು ಆ ಜ್ಞಾನವಿಲ್ಲದಿರುವಿಕೆಯೇ ಮರವೆ ಈ ಅರಿವು ಮರೆವೆಗಳಿಂದಲೇ ಜನನಮರಣಗಳುಂಟಾಗುತ್ತವೆ ಎಂಬುದಾಗಿ ಗುರುವು ಶಿಷ್ಯನಿಗೆ ಬೋಧಿಸಿದ್ದಾನೆ. ಈ ಸಂಧಿಯಲ್ಲಿ ಎರಡನೆಯ ಪದ್ಯವಾಗಿ "ಸುಮ್ಮನೆ ಸದ್ರೂಪ ಅಸದ್ರೂಪ ವಸ್ತುಗಳ ವಿವೇಕದ ಅತಿಶಯವನ್ನು ತಿಳಿದರೆ ಏನುಪ್ರಯೋಜನ? ದೀಪವನ್ನು ಕತ್ತಲೆಯು ಮುಚ್ಚಿಕೊಂಡಹಾಗೆ (ಬೋರಲು ಮುಚ್ಚಿದಂತೆ) ಮತ್ತು ಪೂರ್ಣವಾದ ಲೆಕ್ಕಕ್ಕೆ (ಹತ್ತು ಇಪ್ಪತ್ತು ನೂರು ಎಂಬ ಸಂಖೆಗಳಿಗೆ) ಮತ್ತೆ ಒಂದು ಎಂಬ ಸಂಖೆಯನ್ನು ಸೇರಿಸುವಹಾಗೆ ಪ್ರಾರಬ್ಧವನ್ನು ನಾಶಮಾಡದೆ ಪಂಚಭೌತಿಕಗಳನ್ನು ಅನುಭವಿಸುವ ಪ್ರಾಪಂಚಿಕ ಜೀವನಾದರೆ

ಏನು ಪ್ರಯೋಜನ? ಎಂದು ಹೇಳಿರುವುದರಿಂದ ಸದಸದ್ವಸ್ತು ವಿವೇಕವನ್ನು ತಿಳಿದರೂ ಅಲ್ಲದಿದ್ದರೆ ಅರಿವು ಮರವೆಗಳನ್ನು ಹೊಂದಿದರೂ ಪ್ರಾರಬ್ಧ ಸಂಚಿತ ಆಗಾಮಿ ಎಂಬ ಕರ್ಮಗಳಲ್ಲಿ ಮುಖ್ಯವಾದ ಪ್ರಾರಬ್ಧವನ್ನು ನಾಶಮಾಡದೆ ಇರುವ ಭೌತಿಕ ಜೀವನದಿಂದ ಪ್ರಯೋಜನವಿಲ್ಲವೆಂದು ಸ್ಪಷ್ಟವಾಗಿ ವ್ಯಕ್ತವಾಗುತ್ತದೆ. ಇದರಿಂದ ಸದಸದ್ವಸ್ತು ವಿವೇಕವೆಂಬ ಶುದ್ಧಾದ್ವೈತ ಜ್ಞಾನವನ್ನು ಪಡೆದರೂ ಪ್ರಾಪಂಚಿಕದಲ್ಲಿ ಮುಳುಗಿದ ಜೀವನು ಮುಂದೆ ಸಾಧಿಸಬೇಕಾದ ಕಾರ್ಯಗಳಿರುತ್ತವೆ. ಎಂಬದು ವ್ಯಕ್ತವಾಗುತ್ತದೆ. ಇಂತು ಸಂಸಾರ ಸಂಬಂಧಸ್ಥಲವು.

## ೬. ಸಂಸಾರ ಹೇಯ ಸ್ಥಲ

ಮುಂದೆ "ನಾನು ಬ್ರಹ್ಮನಿದ್ದೇನೆ" ಎಂಬ ಜ್ಞಾನದಿಂದ ತಿಳಿದು ನೋಡಿ ಲೋಕ ವಾಸನೆ, ದೇಹವಾಸನೆ, ಶಾಸ್ತ್ರವಾಸನೆ ಎಂಬ ಮೂರು ವಾಸನೆಗಳನ್ನು ಬಿಟ್ಟವನಾಗಿ ಕೇಡನ್ನುಂಟು ಮಾಡುವ ಸಂಸಾರದ ಮಾಯಾ ಲಕ್ಷಣಗಳನ್ನು ಕಳೆದವನಾಗಿ ನಿಜ ಸುಖದಲ್ಲಿ ಇರಬೇಕೆಂದು ಉತ್ತಮ ಗುರುವು ಬೋಧಿಸಿದ್ದಾನೆ. ಎಲೈ ಮನಸ್ಸೇ ನೀನು ಚಿತ್ತೆಂಬ ಅಂತಃಪುರದಲ್ಲಿ ಯಾವಾಗಲೂ ಸಚ್ಚಿದಾನಂದ ನಿತ್ಯ ಪರಿಪೂರ್ಣ ಲಕ್ಷಣವುಳ್ಳ ಬ್ರಹ್ಮನೊಡನೆ ಕೂಡಿದವನಾಗಿ ಅತಿಶಯವಾದ (ನಿರುತ್ತರ) ಆನಂದ ದಲ್ಲಿ ಲೀಲೆಯಿಂದಾಡುತ್ತ ನಿತ್ಯ ಸುಖವನ್ನು ಹೊಂದಿರು. ಆದರೆ ಈಜಗೆ ಇರುವ ಮಾಯಾ ರೂಪುವುಳ್ಳ ನಾಮರೂಪಗಳಿಗೆ ಆಶ್ರಯವಾದ ಹೊರಗಿನ ಇಂದ್ರಿಯಗಳ ಅಧಿಕವಾದ ಮದದಿಂದ ಕೂಡಿದ ವಿಷಯಗಳ ಆನಂದದಲ್ಲಿ ಮರೆದು ಮಲಗಬೇಡ ಎಂಬೀ ಬೋಧೆಯಿಂದ ಮನಸ್ಸು ಹೊರಗಿನ ಇಂದ್ರಿಯಗಳ ಸುಖವೇ ತನ್ನ ಸುಖವೆಂದು ತಿಳಿದಿರುವುದು. "ಮರವೆ"ಯಾಗಿದೆ ಅದನ್ನು ಬಿಡಬೇಕು. ಎಂದು ವ್ಯಕ್ತವಾ ಗುತ್ತದೆ. ಅರಿವು ಮರವೆಗಳ ವಿವರವು ಈ ಸಂಧಿಯಲ್ಲಿ ಕೊಡಲ್ಪಟ್ಟಿದೆ. ಇಂತು ಸಂಸಾರಹೇಯ ಸ್ಥಲವು.

## ೭. ಲಿಂಗ ನಿಜಸ್ಥಾಪನ ಸ್ಥಲ

ಜ್ಞಾನದಿಂದ ಭವವು (ಜನ್ಮಾಂತರ) ನಾಶವಾಗುತ್ತದೆ. ಎಂದು ತಿಳಿದ ಮಾತ್ರ ದಿಂದ ಏನು ಪ್ರಯೋಜನ? ತನುವು ಪರವಸ್ತುವಿನ ಸರ್ವಗತಪ್ರಸನ್ನತೆ (ಪ್ರತ್ಯಕ್ಷತೆ) ಪಡೆಯದಿದ್ದರೆ ಆ ತನುವು ನಾಶವಾಗುವುದಿಲ್ಲ. ಎಂಬುದಾಗಿ ಗುರೂತ್ತಮನು ಬೋಧಿಸಿ ದ್ದಾನೆ. ಮುಂದೆ " ಜ್ಞಾನ ವೈರಾಗ್ಯ ಉಪರತಿ " ಎಂಬೀ ಮೂರರಲ್ಲಿ ಜ್ಞಾನವೊಂದೇ ಎಲ್ಲಕ್ಕೂ ಕಾರಣವು ಹೀಗೆ ಹೊಸ (ಆಶ್ಚರ್ಯಕರ) ಆನಂದ ರೂಪವಾದ ಜ್ಞಾನ ದೀಪವನ್ನು ( ಜ್ಯೋತಿ ) ಹೊರಗಿನ ಚಲನೆಗೆ ನಾಶವಾಗದೆ ಇರುವಹಾಗೆ ಅತ್ಯಂತ ಅನುಪಮ ರೀತಿಯ ಉಪಕರಣಗಳಿಂದ ( ಸುವಿಧಾನ ) ಸುಮ್ಮನೆ ನೋಡಲು

ಆ ಪರಬ್ರಹ್ಮವು ಮನಸ್ಸೆಂಬ ಕಮಲದಲ್ಲಿ ಸೇರಿಕೊಂಡು ಇರುತ್ತದೆ. ಇದೇ ಬ್ರಹ್ಮಾನು ಸಂಧಾನವಾಗಿದೆ. ಮತ್ತು ಈ ಅನುಸಂಧಾನದ ಜ್ಞಾನದೀಪವನ್ನು ತನುವಿನ ನವನಾಳದ ಬಾಗಿಲುಗಳಲ್ಲಿ ಸಂಬಂಧಿಸದೇ ಹೃದಯದಲ್ಲಿನ ಕಮಲದಲ್ಲಿ ಲಿಂಗಮೂರ್ತಿ ಇಲ್ಲದೇ ಸಾಧಿಸಿದರೆ ಪ್ರಾಣವಾಯುವಿನ ಸಂಚಲನೆಯಿಂದ ನಾಶವಾಗುವ ಅಜ್ಞಾನ ದೀಪವು ಬರಿದಾದ ಹಾಳುಮನೆಯಲ್ಲಿರುವ ದೀಪದಂತಾಗಿದೆ ಈ ದೀಪದಿಂದ ಏನು ಪ್ರಯೋಜನ? "ಪ್ರಯೋಜನವಿಲ್ಲ" ಎಂಬ ಬೋಧೆಯು ಇಲ್ಲಿದೆ. ೧೦೮ ಉಪ ನಿಷತ್ತುಗಳಲ್ಲಿ ಒಂದಾದ ಬ್ರಹ್ಮೋಪನಿಷತ್ತಿನಲ್ಲಿ ಈ ಶ್ಲೋಕವಿದೆ.

ಹೃದಿಸ್ಥಾ ದೇವತಾಃ ಸರ್ವಾವೃದಿಪ್ರಾಣಾಃ ಪ್ರತಿಷ್ಟಿತಾಃ |
ಹೃದಿಪ್ರಾಣಾಶ್ಚ ಜ್ಯೋತಿಶ್ಚ ತ್ರಿವೃತ್ಸೂತ್ರಂಚ ತದ್ವಿದುಃ || ಇತಿ

ಹೃದಯದಲ್ಲಿ ಎಲ್ಲಾ ದೇವತೆಗಳು ಇದ್ದಾರೆ. ಪ್ರಾಣಗಳು ಇವೆ. ಜ್ಯೋತಿಯೂ ಇದೆ. ಇದರ ದೆಸೆಯಿಂದ ಮೂರುಸೂತ್ರಗಳ ಜನಿವಾರವಾಗಿದೆ ಎಂದು ಹೇಳಿ ಇದಕ್ಕಿಂತಲೂ ಶ್ರೇಷ್ಠವಾಗಿ ಶಿರಸ್ಸಿನಲ್ಲಿರುವ ಅಕ್ಷರ (ಮಂತ್ರರೂಪ) ಬಹ್ಮದ (ಪರಮಪದ) ಸೂತ್ರಧಾರಣೆಯೇ ಮುಖ್ಯವೆಂದು ಹೇಳಿರುವದರಿಂದ ಹೃದಯ ಕ್ಕಿಂತಲೂ ಶಿರಸ್ಸಿನಲ್ಲಿನ ಬ್ರಹ್ಮಾನುಸಂಧಾನವೇ ಮುಖ್ಯವೆಂದು ತಿಳಿಯಬೇಕಾಗಿದೆ. ಮತ್ತು ಪ್ರಮಾಣವಿಲ್ಲದ (ಅಪ್ರಮಾಣ) ಜ್ಞಾನ ಘನಲಿಂಗವು ಶ್ರೆಷ್ಠವಾದ ಆಶ್ರಮ ದಲ್ಲಿ (ಸ್ಥಾನ) ವ್ಯಾಪಿಸಿದ ತನುಮನ (ಅಥವಾ ಪ್ರಪಂಚ ಆತ್ಮ) ಈ ಉಭಯ ಭಾವನೆಗಳಲ್ಲಿ ವ್ಯಾಪಿಸಿದ (ಆಯತ) ನಿರ್ಮಲವಾದ ಪ್ರಪಂಚವೂ ಆತ್ಮನೂ ಶಿವನ ಸ್ವರೂಪವೇ ಎಂಬ ಸಮ್ಯಗ್‌ಜ್ಞಾನವು ಸಹಜ ವಸ್ತುವಿನೊಡನೆ ತುಂಬಿಕೊಂಡು ಮಹತ್ತೇ ಮೊದಲಾದ ಮನಃಕಮಲವೆಂಬ ಮನೆಯ ಮಧ್ಯದಲ್ಲಿ ಪ್ರೀತಿಯಿಂದ ಇರುತ್ತದೆ. ಎಂಬೀಬೋಧೆ ಇರುತ್ತದೆ. ಇದರಿಂದ ಪ್ರಪಂಚವೂ ಆತ್ಮನೂ ಶಿವ ನೆಂಬ ಸಮ್ಯಗ್‌ಜ್ಞಾನವೂ ಸಹ ಶಿವ (ಲಿಂಗ)ಮಯವಾಗಿರಬೇಕೆಂದು ವ್ಯಕ್ತವಾಗು ತ್ತದೆ. ಇಂತು ಲಿಂಗದ ಅವಶ್ಯಕತೆಯ ಸ್ಥಲವು ಲಿಂಗನಿಜಸ್ಥಾಪನ ಸ್ಥಲವು.

## ೮. ಗುರು ಕರಣಸ್ಥಲ

ಮುಂದೆ ದಯಾಸಾಗರನಾದ ಗುರುವು ಶಿಷ್ಯನಿಗೆ ಮಾಯೆಯ ಸಂಸಾರವನ್ನು ಬಿಡಿಸಿ ಮಹಾನುಭಾವದ ಅರ್ಥವಿವರಣವನ್ನು ಹೇಳಿ ಆ ಶಿಷ್ಯನನ್ನು ರಕ್ಷಿಸುತ್ತಾನೆ. ಎಂಬುದರ ವಿವರವಿದೆ. ಹುಡುಕುತ್ತಿರುವ ಬಳ್ಳಿಯು ಓಡಾಡುವಾಗ ಕಾಲಿಗೆ ತೊಡಕುಬಿದ್ದಹಾಗೆ ನನ್ನ ಭಾಗ್ಯವು ಆಶ್ಚರ್ಯವಾದುದು. ಶ್ರೆಷ್ಠವಾದ "ಸಕಲ" ಎಂಬುದೇ ನಿಃಕಲವಾಗಿ ಆ ನಿಃಕಲವೇ ಸಕಲವಾಗಿ ಎರಡುರೂಪವನ್ನು ತಾಳಿ ಆ ಗುರುವಿನ ದರುಶನದಿಂದ ಶ್ರೇಷ್ಠವಾದ "ನಿತ್ಯತೃಪ್ತಿ" ಶಾಶ್ವತವಾದ ಪರಿಣಾಮು

ವಾಗಿ ಒಮ್ಮೆಗೆ ಲಿಂಗರೂಪವಾಗಿ ಸಿಕ್ಕಿದೆ. ಈ ಮಹಾಘನವನ್ನು ಬೆರಸಿ ನೋಡು ವೆನು ಎಂಬ ಈ ಸಂಧಿಯಲ್ಲಿನ ಹೇಳಿಕೆಯಿಂದ ಪರವಸ್ತುವಿನ ಸಂಬಂಧದ ಮಹಾನು ಭಾವವು ಇಲ್ಲಿ ಗೋಚರವಾಗುತ್ತದೆ. ಬೀಜವೃಕ್ಷನ್ಯಾಯದಹಾಗೆ ಯಾವದು ಮೊದಲು ಎಂದು ಗೊತ್ತುಮಾಡಲಾಗದೆ ಬೀಜದಿಂದ ವೃಕ್ಷ ವೃಕ್ಷದಿಂದ ಬೀಜ ಎಂಬುದನ್ನು ಮಾತ್ರ ಹೇಳಲಿಕ್ಕೆ ಬರುವುದರಿಂದಲೂ ಒಂದಕ್ಕೊಂದು ಬಿಡುವಿಲ್ಲದೆ ನಡೆದಿರುವದರಿಂದಲೂ ನಿಃಕಲದಿಂದ ಸಕಲ ಸಕಲದಿಂದ ನಿಃಕಲ ಆಗಿ ಪರವಸ್ತುವು ಯಾವಾಗಲೂ ಎಡೆಬಿಡದೆ ತೋರುತ್ತದೆ ಈ ವಸ್ತುವೇ ಮಹಾಘನವು ಇದನ್ನು ಬೆರಸಬೇಕು ಎಂದು ಸಾಧಿಸುವುದೇ ನಿತ್ಯತೃಪ್ತಿಯು. ಈ ನಿತ್ಯತೃಪ್ತಿಯೇ ಮಹಾನುಭಾವವಾಗಿದೆ ಇಂತು ಗುರುಕರುಣಸ್ಥಲವು.

## ೯. ದೀಕ್ಷಾವಿಧಾನಸ್ಥಲ

ಮುಂದೆ ಮೇಲೆ ಹೇಳಿದ ರೀತಿಯಲ್ಲಿ ಮಹಾನುಭಾವಿಯಾದ ಗುರುವು (ಲಿಂಗಾಂಗ ಸಾಮರಸ್ಯವುಳ್ಳವನು) ಶಿವರೂಪನಾದ ಶಿಷ್ಯನಲ್ಲಿರುವ ತಾನು ಬೇರೆ ಶಿವನು ಬೇರೆ ಎಂಬ ಭಿನ್ನಭಾವವನ್ನು ಹೋಗಲಾಡಿಸಿ ಆ ಶಿಷ್ಯನ ಹಸ್ತದಲ್ಲಿ ಭಿನ್ನವಲ್ಲದಿರುವ ಎಂದರೆ ಶಿಷ್ಯನು ಶಿವನು ಒಂದೇ ಆಗಿರುವ (ಅಂಗಲಿಂಗ ಸಮ ರಸವಾದಿ) ಲಿಂಗವನ್ನು ಕೊಟ್ಟು (ಧರಿಸಿ) ರಕ್ಷಿಸಿದ್ದಾನೆ. ಇಂತ್ತು ದೀಕ್ಷಾ ವಿಧಾನ ಸ್ಥಲವು.

## ೧೦. ಜ್ಞಾನಾಚಾರ ಸ್ಥಲ

ಮುಂದೆ ದೇಶಿಕೋತ್ತಮನು ಜ್ಞಾನದ ದೃಢವಿಶ್ವಾಸವುಳ್ಳ ಆಚರಣೆಯಿಂದ ಯಾವಾಗಲೂ ಲಿಂಗವನ್ನು ಬಿಡದೆ ಒಳ್ಳೆಯ ಉಪಕರಣಗಳಿಂದ ಸೇವಿಸಬೇಕೆಂಬು ದಾಗಿ ನಿರೂಪಣೆಯನ್ನು ಕೊಟ್ಟನು. (ಇದೇ ಜ್ಞಾನಾಚಾರ) ಆಚಾರ ನಿಷ್ಠೆಯ ಯೋಗ (ಆಚಾರಲಿಂಗ) ವನುಳ್ಳ ಗುರುವು (ಗುರುಲಿಂಗ) ಇಷ್ಟಲಿಂಗರೂಪದ ಸದಾ ಶಿವಯೋಗ (ಶಿವಲಿಂಗ) ವನ್ನು ಹೊಂದಿ ಅದರಿಂದ ಮುಂದೆ ಜಂಗಮಲಿಂಗಯೋಗ ಆದರಿಂದ ಪ್ರಸಾದಲಿಂಗದ ಯೋಗ ಅದರಿಂದ ಮಹಾಲಿಂಗದ ಯೋಗ ಹೀಗೆ ಒಪ್ಪುವ ಶಿವಯೋಗದ ಮೂಲವಾದ ಆಚಾರವನ್ನು ತಪ್ಪದೇ ನೀನು ಆಚರಿಸು ಎಂಬುದಾಗಿ ಜ್ಞಾನಾಚಾರಮಾರ್ಗದ ಅನುಸಂಧಾನದ ವಿವರವನ್ನು ಗುರುವು ಬೋಧಿಸಿದ್ದಾನೆ. ಇಂತು ಜ್ಞಾನಾಚಾರ ಸ್ಥಲವು.

## ೧೧. ಲಿಂಗಧಾರಣ ಸ್ಥಲ

ಮುಂದೆ ಗುರೂತ್ತಮನು ತನಗೆ ಅಭಿನ್ನವಾದ ಲಿಂಗವನ್ನು ಶಿಷ್ಯನು ಪೂಜಿಸಿ

ಯಾವಾಗಲೂ ಬಿಡದೆ-ಹಾಗೆ ಶಿರಸ್ಸು ಕೊರಳು ಕಕ್ಷೆ ಎದೆ ನಾಭಿ ಅಮುಳೈಕ್ಯ ಎಂಬ ಆರು ಸ್ಥಾನಗಳಲ್ಲಿ ಯಾವುದಾದರೊಂದರಲ್ಲಿ ಧರಿಸಿಕೊಂಡಿರಬೇಕೆಂಬುದಾಗಿ ಹೇಳಿದ್ದಾನೆ. ಹೀಗೆ ಲಿಂಗವನ್ನು ಧರಿಸಿ ಪೂಜಿಸಿದುದರಿಂದ ಕಾಮವು (ದೇಹೇಂದ್ರಿಯಾದಿಗಳ ಅಪೇಕ್ಷೆಯು) ಲಿಂಗದಲ್ಲಿಯೇ ಸೇರಿ ಮೊದಲಿನಂತೆ ಮಾಡುವ ತನ್ನ ಸೇವಕತನಕ್ಕೆ ಹಿಂಜರಿದು ( ಅಪೇಕ್ಷಿಸದೆ ) ಓಡಿಹೋಯಿತು. ಘನವಾದ ಆ ಲಿಂಗದ ಜ್ಞಾನದ ಪ್ರಕಾಶದ ದೆಸೆಯಿಂದ ಕತ್ತಲೆಯೆಂಬ ಅಜ್ಞಾನವು ನಾಶವಾಯಿತು. ಕಾಮ ಕ್ರೋಧ ಲೋಭ ಮೋಹ ಮದ ಮತ್ಸರ ಎಂಬ ಮಾನವ-ಶತ್ರುವರ್ಗವು ಲಿಂಗಧಾರಿಯಲ್ಲಿ ಇರಬೇಕೆಂಬ ಪ್ರೀತಿಯಿಲ್ಲದೆ ದುಃಖಪಟ್ಟು (ಅತ್ತು) ಹೊರಟು ಹೋಯಿತು. ಶಬ್ದ ಸ್ಪರ್ಶ ಆದಿ ಇಂದ್ರಿಯ ವಿಷಯಗಳು ನಮಗೆ ಇವನಲ್ಲಿ ಬಾಳಿಕೆಯಿಲ್ಲವೆಂಬುದಾಗಿ ಹೆಜ್ಜೆಗಳನ್ನು ಹಿಂದಕ್ಕೆ ಇಟ್ಟುಕೊಂಡು ತಪ್ಪಿಸಿಕೊಂಡವು. ಸ್ತ್ರೀಯರ ಮದುವೆ ಯಾಗಬೇಕೆಂಬುದೇ ಮುಂತಾದ ಭಯವು ನಾಚಿಹೋಯಿತು. ( ದೇಹ ಸುಖಕ್ಕಾಗಿ ಮದುವೆಯಾಗಬೇಕೆಂಬ ಅಂಜಿಕೆಯು ತಲೆತಗ್ಗಿಸಿಕೊಂಡಿತು.) ಲೌಕಿಕರ ರೀತಿಯಲ್ಲಿ ನಡೆಯುವ ಸಂಸಾರವು ತಪ್ಪಿಹೋಯಿತು. ಪಶು ಮತ್ತು ಪಾಶ ಇವುಗಳಬಂಧನವನ್ನೂ ಮೀರಿದುದಾಯಿತು. ಜಾಣತನದಿಂದ ವಿಕಳಾವಸ್ಥೆಯನ್ನು ಹೊಂದದಿರುವ ಮಹಾ ಲಿಂಗವು ಅಂಗದಲ್ಲಿ ಕೂಡಲು ಪೂರ್ಣವಾದ ಆನಂದ ಸಮುದ್ರದ ತೆರೆಯಲ್ಲಿ (ಅಲೆಗಳಲ್ಲಿ) ಸಮಸ್ತಭ್ರಾಂತಿ (ಷಡ್‌ಭ್ರಮೆ) ಯನ್ನು ಹರಿಯಬಿಟ್ಟುದಾಯಿತು * ಹೀಗೆ ಲಿಂಗ ಧಾರಣ ಮತ್ತು ಪೂಜೆಯ ಪ್ರಯೋಜನವನ್ನು ವಿವರಿಸಿದ ಮೇಲೆ ಶಿಷ್ಯನು ತಾನು ಹೊಂದಿದ ಸುಖವನ್ನು ಈ ರೀತಿಯಾಗಿ ಹೇಳಿದ್ದಾನೆ. ಪ್ರಪಂಚದಲ್ಲಿ ಕೆಡಹುವ ಮಾಯೆಯನ್ನು ದೂರಹಾರಿಸಿದೆನು. ಇಂದ್ರಿಯಗಳನ್ನು ಅವುಗಳ ಸುಖವಿಲ್ಲದೆ ಬಾಧೆ ಪಡುವಂತೆ ಮಾಡಿದೆನು. ಈ ದೇಹದ ಧರ್ಮವನ್ನು ಪ್ರಾಣಿಗಳಿಗೆ ಇದ್ದ ಹಾಗೆ ಇಲ್ಲದಂತೆ ಮಾಡಿದೆನು. ಈ ದೇಹಕ್ಕೆ ಇರುವ ನಾನು ಎಂಬ ಅಹಂಕಾರ ಬುದ್ಧಿಯನ್ನು ಹಿಮ್ಮುಖಮಾಡಿದೆನು. ದೇವನೇ ಸರ್ವವು ಎಂಬ ಭಾವವನ್ನು ಮರೆದು ನಾನು ಮನುಷ್ಯ ಪ್ರಪಂಚಪ್ರಾಣಿ ಎಂದು ತಿಳಿದಿರುವ ವಿಪರೀತ ಭಾವನೆಗೆ ಪೆಟ್ಟು ಹಾಕಿದೆನು. ಗುರುವಿನ ಕರುಣೆಯುಳ್ಳ ಪಾದದಲ್ಲಿ ಉರುಳಿದೆನು. ಬೇಕು ಬೇಡ ಎಂಬ ಪ್ರಾಯಶ್ಚಿತ್ತ ಕರ್ಮಗಳನ್ನು ಇಲ್ಲದಂತೆ ಮಾಡಿದೆನು. ಅಮಮಾ ! ಅಹಹಾ !! ಆಶ್ಚರ್ಯ ಇಂತು ಲಿಂಗಧಾರಣ ಸ್ಥಲವು.

## ೧೨. ಭಸ್ಮಧಾರಣ ಸ್ಥಲ

ಲಿಂಗವನ್ನು ಧರಿಸಿದ ಅಂಗದಲ್ಲಿ ಶಿವಲಿಂಗಸಮರಸ ಜ್ಞಾನವನ್ನು ಬೆಳೆಯಿಸುವುದಕ್ಕೆ ಮುಖ್ಯಾಂಗವಾದ ವಿಭೂತಿಯನ್ನು ಧರಿಸಬೇಕೆಂಬುದಾಗಿ ಗುರುವು ಹೇಳಿದ

---

* ಟಿಪ್ಪಣಿ:- ಇಲ್ಲಿ ಪಶು ಮತ್ತು ಪಾಶ ಶಬ್ದಗಳಿರುವುದರಿಂದ ಪಾಶುಪತರು ಲಿಂಗಧಾರಿಗಳಾಗಿದ್ದರೆಂದು ವ್ಯಕ್ತವಾಗುತ್ತದೆ.

ವಿಷಯವು ಈ ಸಂಧಿಯಲ್ಲಿ ಬಂದಿದೆ. ಎಲ್ಲ ಭುವನಗಳಲ್ಲಿಯೂ (ಹದಿನಾಲ್ಕು ಭುವನ ವೆಂಬುದು ಒಂದು ವಿಧದ ಗಣನೆ) ಎಲ್ಲ ಶ್ರೇಷ್ಠ ದೇವತೆಗಳಲ್ಲಿಯೂ ಈ ಭೂಮಿಯ ಲ್ಲಿಯೂ ಶಿವಲಿಂಗವನ್ನು ಧರಿಸುವುದೇ ಧರ್ಮದ ನಿಯಮವು. ಇದೇ ಮುಖ್ಯ ಧರ್ಮ ವೆಂದು ಅರಿದಾಚರಿಸಲು ಲಿಂಗವನ್ನು ಧರಿಸಿದವನು ಎಲ್ಲ ಫಲಗಳನ್ನು ವಶ್ಯ ಮಾಡುವ ವಿಭೂತಿಯನ್ನು ಸರ್ವ ಕಾರ್ಯಗಳಲ್ಲಿಯೂ ಶುಭವೆಂದು ಧರಿಸುವುದು ಉತ್ತಮ ವ್ರತವಾಗಿದೆ. ಭಸ್ಮವು ಬಿಳಿಯ ಬಣ್ಣವುಳ್ಳುದಾದುದರಿಂದ ಜ್ಞಾನದ ಬಣ್ಣವನ್ನು ತೋರಿಸುವುದಾಗಿ ಚಿದಂಗ ಎನಿಸಿಕೊಂಡಿದೆ. ಚೈತನ್ಯ ಶಾಶ್ವತ ಎಂಬ ಲಕ್ಷಣಗಳನ್ನೂ ಕೊಡುವುದಿದು, ಗೂಢವಾದುದು, ನಿರ್ನಾಮವಾದುದು ಎಂಬ ರೀತಿಯಲ್ಲಿಯೂ ಇದು ಇರುತ್ತದೆ. ಈ ವಿಭೂತಿಯು ಪರಾನುಭೂತಿಯೂ ಆಗಿದೆ. ವಿಭೂತಿಯೆಂದರೆ ಮಂತ್ರಕಲೆಯುಳ್ಳುದು. ಪರಾನುಭೂತಿಯೆಂದರೆ ಪರವಸ್ತುವಿನ ಅನುಭವವನ್ನು ಉಂಟು ಮಾಡಿಕೊಡುವುದು. * ಇಂತು ಭಸ್ಮಧಾರಣ ಸ್ಥಲವು.

## ೧೩. ರುದ್ರಾಕ್ಷಧಾರಣ ಸ್ಥಲ

ಗುರೂತ್ತಮನು ನಾಶವಾಗದಿರುವ ಭಸ್ಮದ ಶರೀರವುಳ್ಳ (ಭಸ್ಮಧಾರಿ) ಶಿಷ್ಯನಿಗೆ ಮುಂದೆ ಹೇಳಲ್ಪಟ್ಟ ಕ್ರಮದಿಂದ ರುದ್ರಾಕ್ಷಿಯನ್ನು ಧರಿಸಬೇಕೆಂಬುದಾಗಿ ಹೇಳಿದ್ದಾನೆ. ರುದ್ರನ ಜ್ಞಾನಾಕ್ಷಿಯಿಂದ (ಶಿವಜ್ಞಾನನೇತ್ರದಿಂದ) ರುದ್ರಾಕ್ಷಗಳು ಉತ್ಪನ್ನವಾದುವು ಎಂಬ ಬೋಧೆಯಿಂದ ಇವುಗಳನ್ನು ಧರಿಸುವವನ ಜ್ಞಾನೇಂದ್ರಿಯಗಳೇ ಮೊದಲಾದವು ರುದ್ರ (ಶಿವ) ಸ್ವರೂಪಗಳಾದವೆಂದೇ ತಿಳಿಯಬೇಕು. ಇಂತು ರುದ್ರಾಕ್ಷಧಾರಣಸ್ಥಲವು

## ೧೪. ಪಂಚಾಕ್ಷರಿಯ ಸ್ಥಲ

ಭಸ್ಮರುದ್ರಾಕ್ಷಿಗಳನ್ನು ಧರಿಸಿದಮೇಲೆ ಸಂಸಾರಸಮುದ್ರಕ್ಕೆ ಅಗ್ನಿಸ್ವರೂಪ ವಾದ ಮಹಾಮಂತ್ರ ಎಂದರೆ ಷಡಕ್ಷರಮಂತ್ರವನ್ನು ಜಪಿಸಬೇಕು. ಇದರ ವಿವರವು ಹೀಗೆ ಇದೆ. ಸಂಪದ್ಯುಕ್ತವಾದ ಭಸ್ಮದ ಧಾರಣೆ ರುದ್ರಾಕ್ಷ ಧಾರಣೆ ಎಂಬ ಶುಭ ಕ್ರಿಯೆಗಳಿಂದ ಕೂಡಿ ಲಿಂಗಪೂಜೆಯ ಆರಂಭದಲ್ಲಿ ತೊಡಗಿದವನು, ಭವಸಮುದ್ರ ವನ್ನು ದಹನಮಾಡುವುದಾದ ಕೆಟ್ಟಮತಗಳೆಂಬ ಆನೆಗಳಿಗೆ ಸಿಂಹದಂತೆ ಇರುವುದಾದ ಮತ್ತು ಸಪ್ತಕೋಟಿ ಮಹಾಮಂತ್ರಗಳಿಗೆ ರಾಜನೆಂಬ ಕೀರ್ತಿಯನ್ನು ಹೊಂದಿದ ಮೂಲಮಂತ್ರವಾದ ಷಡಕ್ಷರವನ್ನು ಜಪಿಸಬೇಕು. ಈ ಮಂತ್ರದ

---

* ಟಿಪ್ಪಣಿ:– ಇದೇ ಭಸ್ಮವ್ರತವು ಶಿರೋವ್ರತ ಮುಂತಾದ ಹೆಸರುಗಳಿಂದ ಕರೆಯಲ್ಪತ್ತದೆ. ದೇವತೆಗಳು ಲಿಂಗವನ್ನು ಧರಿಸಿದ್ದರೆಂಬುದಕ್ಕೆ ಉಪನಿಷತ್ಪ್ರಮಾಣಗಳು ಇರುತ್ತವೆ. ಭಸ್ಮವು "ಆತ್ಮಜ್ಯೋತಿ" ಎಂದು ಜಾಬಾಲ ದರ್ಶನೋಪನಿಷತ್ತು ಹೇಳುತ್ತದೆ.

ಉತ್ಪತ್ತಿಯು ಹೇಗೆ ಆಯಿತೆಂಬುದರ ವಿವರವು ಈ ಸಂಧಿಯಲ್ಲಿ ಹೇಳಲ್ಪಟ್ಟಿದೆ. □ ಪಂಚಾಕ್ಷರ ಎಂಬ ಹೆಸರಿದ್ದರೂ ಇದು ಷಡಕ್ಷರಸ್ಥಲವಾಗಿಯೇಯಿದೆ ಹೀಗೆ ಸಿದ್ಧಾಂತ ಶಿಖಾಮಣಿ ಗ್ರಂಥದಲ್ಲಿಯೂ ಇದೆ. ಇಂತು ಪಂಚಾಕ್ಷರಿಸ್ಥಲವು.

## ೧೫. ಭಕ್ತಿಸ್ಥಲ

ಶಿವಜ್ಞಾನದಿಂದ ಸುಡಲ್ಪಟ್ಟ ದೇಹ ಮತ್ತು ಪ್ರಾಣ ಇವುಗಳನ್ನು ಗುರುಲಿಂಗ ಜಂಗಮರಿಗೆ ಕೊಟ್ಟು ಸಮರಸ (ಐಕ್ಯ) ಭಾವನೆಯುಳ್ಳವನೆ ಭಕ್ತಿ ಸ್ಥಲದಲ್ಲಿ ಇರುವಾತನಾಗಿದ್ದಾನೆ. ಪರವಸ್ತುವಿನ ಅನುಸಂಧಾನದ ಆಚರಣೆ ಗಾಗಿರುವ ಲಿಂಗ (ಆಚಾರಲಿಂಗ) ದಲ್ಲಿ ಮನೋಹರವಾದ ಗುರುಲಿಂಗ ಶಿವಲಿಂಗ ಜಂಗಮಲಿಂಗ ಪ್ರಸಾದಲಿಂಗ ಮಹಾಲಿಂಗ ಎಂಬ ಐದುಲಿಂಗಗಳ ಶ್ರೇಷ್ಠ ವಿಚಾ ರವುಕೂಡಿ ಇದೆ. ಭಕ್ತಎಂಬ ಅಂಗದಲ್ಲಿ ಮಾಹೇಶ್ವರಾದಿ ಐದು ಅಂಗಗಳೊಡನೆ ಕೂಡಿಕೊಂಡು ಇರುವದುನ್ನು ವಿಚಾರಮುಖದಿಂದ ತಿಳಿದು ನಿರ್ಮಲವಾದ ಆಚಾರ ಲಿಂಗದ ನಡೆಯು ಪ್ರಾಣಿಯಾಗಿರಲು ಆತನು "ಭಕ್ತ" ಎನಿಸಿಕೊಳ್ಳುತ್ತಾನೆ. ○ ಇಂತು ಭಕ್ತಿಸ್ಥಲವು.

---

□ ಟಿಪ್ಪಣಿ:- ಷಡಕ್ಷರ ಮಂತ್ರಕ್ಕೆ ಅರ್ಥದ ವಿವರವು ಹೀಗೆ ಯಿದೆ. ನಮಃ ಎಂದರೆ ಜೀವ ಅಥವಾ ಅಂಗ ಶಿವಯೆಂದರೆ ಶಿವ ಅಥವಾ ಲಿಂಗ ಈ ಎರಡರ ಸಂಬಂಧವನ್ನು ಹೇಳು ವುದೇ ಅಯ. ಶಬ್ದವು ಹೀಗೆ 'ನಮಃಶಿವಾಯ' ಮಂತ್ರದಿಂದ ಜೀವನು ಶಿವನಾಗಲಿ ಅಥವಾ ಅಂಗವು ಲಿಂಗವಾಗಲಿ ಎಂಬ ಅಭಿಪ್ರಾಯವು ವ್ಯಕ್ತವಾಗುತ್ತದೆ. ಹೀಗೆ ಪ್ರಾರ್ಥಿಸಿಕೊಂಡಮೇಲೆ ಸೋಽಹಂ ಶಿವನೇನಾನು ಎಂಬ ಅಭಿಪ್ರಾಯದ ಓಂಕಾರವು ಪಂಚಾಕ್ಷರದ ಮುಂದೆಯೇ ಇದೆ. ಉಳಿದ ಎಲ್ಲ ದೇವತೆಗಳ ಮಂತ್ರಗಳಲ್ಲಿ ಆಯಾ ದೇವತೆಗೆ ನಮಸ್ಕಾರ ಎಂಬ ಭಿನ್ನರೂಪದ ಪ್ರಾರ್ಥನೆಯಿದೆ ಈ ಷಡಕ್ಷರ ಮಂತ್ರದಲ್ಲಿ ಜೀವನು ಶಿವನಾಗಲಿ ಎಂಬ ಪ್ರಾರ್ಥನೆಯು ಶಿವನೇನಾನೆಂಬ ನಿರ್ಣಯವು ಸಹ ಇರುವುದರಿಂದ ಇದು ಕೇವಲ ಶಿವಾದ್ವೈತವಾಗಿ ಈ ಮಂತ್ರವು ಏಳುಕೋಟಿ ಮಂತ್ರಗಳಿಗೆ ರಾಜಾಧಿರಾಜ ಎನಿಸಿಕೊಂಡಿದೆ. ಹೀಗೆ ಭಾರತೀಯ ಧರ್ಮ ಗ್ರಂಥಗಳು ಸಾರಿ ಹೇಳುತ್ತಿವೆ ಆದುದರಿಂದ ಇದು ಮಹಾಮಂತ್ರವಾಗಿದೆ.

○ ಟಿಪ್ಪಣಿ:- ಲಿಂಗದಲ್ಲಿ ಆಚಾರಲಿಂಗ ಗುರುಲಿಂಗ ಜಂಗಮಲಿಂಗ ಪ್ರಸಾದಲಿಂಗ ಮತ್ತು ಮಹಾಲಿಂಗ ಎಂದು ಆರು ಲಿಂಗಗಳು ಇವೆ ಇವುಗಳಲ್ಲಿ ಭಕ್ತನಿಗೆ ಆಚಾರಲಿಂಗವು ಮುಖ್ಯವು ಇದರ ಅಂತರ್ಗತವಾಗಿ ಉಳಿದ ಐದುಲಿಂಗಗಳು ಇರುವವೆಂದು ತಿಳಿಯುತ್ತಾನೆ. ಇದರಂತೆಯೇ ಭಕ್ತಸ್ಥಲ ಮಾಹೇಶ್ವರಸ್ಥಲ ಪ್ರಸಾದಿಸ್ಥಲ ಪ್ರಾಣಲಿಂಗಿಸ್ಥಲ ಶರಣಸ್ಥಲ ಮತ್ತು ಐಕ್ಯಸ್ಥಲ ಎಂಬ ಆರುಸ್ಥಲಗಳು ಆರು ಅಂಗಗಳಾಗಿವೆ. ಇವುಗಳಲ್ಲಿ ಭಕ್ತಸ್ಥಲ ಎಂಬ ಅಂಗವೇ ಮುಖ್ಯ ನಾದ ಭಕ್ತನು ತನ್ನ ಭಕ್ತಸ್ಥಲದ ಅಂತರ್ಗತವಾಗಿ ಉಳಿದ ಐದುಸ್ಥಲಗಳು ಇರುವುದಾಗಿ ತಿಳಿದಾಚರಿಸುತ್ತಾನೆ. ಭಕ್ತಸ್ಥಲವೇ ಅಂಗವಾದ ಭಕ್ತನಿಗೆ ಆಚಾರಲಿಂಗವು ಮುಖ್ಯವಾದುದ ರಿಂದ ಆತನು "ಆಚಾರಲಿಂಗಪ್ರಾಣಿ" ಎಂದು ಎನಿಸಿಕೊಂಡಿದ್ದಾನೆ. ಅವನು ನಡೆಯುತ್ತಿರುವ ಆಚಾರವೇ ಆಚಾರಲಿಂಗ ಎನಿಸಿಕೊಂಡಿದೆ.

A ಟಿಪ್ಪಣಿ ೨ :- ಗುರುವಿಗೆ ತನುವನ್ನು ಲಿಂಗಕ್ಕೆ ಪ್ರಾಣವನ್ನೂ ಜಂಗಮಕ್ಕೆ ಅಭಿಮಾನ ವನ್ನೂ (ಧನ) ಒಪ್ಪಿಸಬೇಕೆಂದೂ ಶಿವಶರಣರ ವಚನಗಳಲ್ಲಿ ಬಹಳವಾಗಿ ಹೇಳಲ್ಪಟ್ಟಿದೆ.

ವಿಷಯವು ಈ ಸಂಧಿಯಲ್ಲಿ ಬಂದಿದೆ. ಎಲ್ಲ ಭುವನಗಳಲ್ಲಿಯೂ (ಹದಿನಾಲ್ಕು ಭುವನ ವೆಂಬುದು ಒಂದು ವಿಧದ ಗಣನೆ) ಎಲ್ಲ ಶ್ರೇಷ್ಠ ದೇವತೆಗಳಲ್ಲಿಯೂ ಈ ಭೂಮಿಯ ಲ್ಲಿಯೂ ಶಿವಲಿಂಗವನ್ನು ಧರಿಸುವುದೇ ಧರ್ಮದ ನಿಯಮವು. ಇದೇ ಮುಖ್ಯ ಧರ್ಮ ವೆಂದು ಅರಿದಾಚರಿಸಲು ಲಿಂಗವನ್ನು ಧರಿಸಿದವನು ಎಲ್ಲ ಫಲಗಳನ್ನು ವಶ್ಯ ಮಾಡುವ ವಿಭೂತಿಯನ್ನು ಸರ್ವ ಕಾರ್ಯಗಳಲ್ಲಿಯೂ ಶುಭವೆಂದು ಧರಿಸುವುದು ಉತ್ತಮ ವ್ರತವಾಗಿದೆ. ಭಸ್ಮವು ಬಿಳಿಯ ಬಣ್ಣವುಳ್ಳುದಾದುದರಿಂದ ಜ್ಞಾನದ ಬಣ್ಣವನ್ನು ತೋರಿಸುವುದಾಗಿ ಚಿದಂಗ ಎನಿಸಿಕೊಂಡಿದೆ. ಚೈತನ್ಯ ಶಾಶ್ವತ ಎಂಬ ಲಕ್ಷಣಗಳನ್ನೂ ಕೊಡುವುದಿದು, ಗೂಢವಾದುದು, ನಿರ್ನಾಮವಾದುದು ಎಂಬ ರೀತಿಯಲ್ಲಿಯೂ ಇದು ಇರುತ್ತದೆ. ಈ ವಿಭೂತಿಯು ಪರಾನುಭೂತಿಯೂ ಆಗಿದೆ. ವಿಭೂತಿಯೆಂದರೆ ಮಂತ್ರಕಲೆಯುಳ್ಳುದು. ಪರಾನುಭೂತಿಯೆಂದರೆ ಪರವಸ್ತುವಿನ ಅನುಭವವನ್ನು ಉಂಟು ಮಾಡಿಕೊಡುವುದು. * ಇಂತು ಭಸ್ಮಧಾರಣ ಸ್ಥಲವು.

## ೧೩. ರುದ್ರಾಕ್ಷಧಾರಣ ಸ್ಥಲ

ಗುರೂತ್ತಮನು ನಾಶವಾಗದಿರುವ ಭಸ್ಮದ ಶರೀರವುಳ್ಳ (ಭಸ್ಮಧಾರಿ) ಶಿಷ್ಯನಿಗೆ ಮುಂದೆ ಹೇಳಲ್ಪಟ್ಟ ಕ್ರಮದಿಂದ ರುದ್ರಾಕ್ಷಿಯನ್ನು ಧರಿಸಬೇಕೆಂಬುದಾಗಿ ಹೇಳಿದ್ದಾನೆ. ರುದ್ರನ ಜ್ಞಾನಾಕ್ಷಿಯಿಂದ (ಶಿವಜ್ಞಾನನೇತ್ರದಿಂದ) ರುದ್ರಾಕ್ಷಗಳು ಉತ್ಪನ್ನವಾದುವು ಎಂಬ ಬೋಧೆಯಿಂದ ಇವುಗಳನ್ನು ಧರಿಸುವವನ ಜ್ಞಾನೇಂದ್ರಿಯಗಳೇ ಮೊದಲಾದವು ರುದ್ರ (ಶಿವ) ಸ್ವರೂಪಗಳಾದವೆಂದೇ ತಿಳಿಯಬೇಕು. ಇಂತು ರುದ್ರಾಕ್ಷಧಾರಣಸ್ಥಲವು

## ೧೪. ಪಂಚಾಕ್ಷರಿಯ ಸ್ಥಲ

ಭಸ್ಮರುದ್ರಾಕ್ಷಿಗಳನ್ನು ಧರಿಸಿದಮೇಲೆ ಸಂಸಾರಸಮುದ್ರಕ್ಕೆ ಅಗ್ನಿಸ್ವರೂಪ ವಾದ ಮಹಾಮಂತ್ರ ಎಂದರೆ ಷಡಕ್ಷರಮಂತ್ರವನ್ನು ಜಪಿಸಬೇಕು. ಇದರ ವಿವರವು ಹೀಗೆ ಇದೆ. ಸಂಪದ್ಯುಕ್ತವಾದ ಭಸ್ಮದ ಧಾರಣೆ ರುದ್ರಾಕ್ಷ ಧಾರಣೆ ಎಂಬ ಶುಭ ಕ್ರಿಯೆಗಳಿಂದ ಕೂಡಿ ಲಿಂಗಪೂಜೆಯ ಆರಂಭದಲ್ಲಿ ತೊಡಗಿದವನು, ಭವಸಮುದ್ರ ವನ್ನು ದಹನಮಾಡುವುದಾದ ಕೆಟ್ಟಮತಗಳೆಂಬ ಆನೆಗಳಿಗೆ ಸಿಂಹದಂತೆ ಇರುವುದಾದ ಮತ್ತು ಸಪ್ತಕೋಟಿ ಮಹಾಮಂತ್ರಗಳಿಗೆ ರಾಜನೆಂಬ ಕೀರ್ತಿಯನ್ನು ಹೊಂದಿದ ಮೂಲಮಂತ್ರವಾದ ಷಡಕ್ಷರವನ್ನು ಜಪಿಸಬೇಕು. ಈ ಮಂತ್ರದ

---

* ಟಿಪ್ಪಣಿ:- ಇದೇ ಭಸ್ಮವ್ರತವು ಶಿರೋವ್ರತ ಮುಂತಾದ ಹೆಸರುಗಳಿಂದ ಕರೆಯಲ್ಪತ್ತದೆ. ದೇವತೆಗಳು ಲಿಂಗವನ್ನು ಧರಿಸಿದ್ಧರೆಂಬುದಕ್ಕೆ ಉಪನಿಷತ್ಪ್ರಮಾಣಗಳು ಇರುತ್ತವೆ. ಭಸ್ಮವು "ಆತ್ಮಜ್ಯೋತಿ" ಎಂದು ಜಾಬಾಲ ದರ್ಶನೋಪನಿಷತ್ತು ಹೇಳುತ್ತದೆ.

ಉತ್ಪತ್ತಿಯು ಹೇಗೆ ಆಯಿತೆಂಬುದರ ವಿವರವು ಈ ಸಂಧಿಯಲ್ಲಿ ಹೇಳಲ್ಪಟ್ಟಿದೆ. □ ಪಂಚಾಕ್ಷರ ಎಂಬ ಹೆಸರಿದ್ದರೂ ಇದು ಷಡಕ್ಷರಸ್ಥಲವಾಗಿಯೇಯಿದೆ ಹೀಗೆ ಸಿದ್ಧಾಂತ ಶಿಖಾಮಣಿ ಗ್ರಂಥದಲ್ಲಿಯೂ ಇದೆ. ಇಂತು ಪಂಚಾಕ್ಷರಿಸ್ಥಲವು.

### ೧೫. ಭಕ್ತಿಸ್ಥಲ

ಶಿವಜ್ಞಾನದಿಂದ ಸುಡಲ್ಪಟ್ಟ ದೇಹ ಮತ್ತು ಪ್ರಾಣ ಇವುಗಳನ್ನು ಗುರುಲಿಂಗ ಜಂಗಮರಿಗೆ ಕೊಟ್ಟು ಸಮರಸ (ಐಕ್ಯ) ಭಾವನೆಯುಳ್ಳವನೆ ಭಕ್ತಿ ಸ್ಥಲದಲ್ಲಿ ಇರುವಾತನಾಗಿದ್ದಾನೆ. ಪರವಸ್ತುವಿನ ಅನುಸಂಧಾನದ ಆಚರಣೆ ಗಾಗಿರುವ ಲಿಂಗ (ಆಚಾರಲಿಂಗ) ದಲ್ಲಿ ಮನೋಹರವಾದ ಗುರುಲಿಂಗ ಶಿವಲಿಂಗ ಜಂಗಮಲಿಂಗ ಪ್ರಸಾದಲಿಂಗ ಮಹಾಲಿಂಗ ಎಂಬ ಐದುಲಿಂಗಗಳ ಶ್ರೇಷ್ಠ ವಿಚಾ ರವುಕೂಡಿ ಇದೆ. ಭಕ್ತಎಂಬ ಅಂಗದಲ್ಲಿ ಮಾಹೇಶ್ವರಾದಿ ಐದು ಅಂಗಗಳೊಡನೆ ಕೂಡಿಕೊಂಡು ಇರುವದುನ್ನು ವಿಚಾರಮುಖದಿಂದ ತಿಳಿದು ನಿರ್ಮಲವಾದ ಆಚಾರ ಲಿಂಗದ ನಡೆಯ ಪ್ರಾಣಿಯಾಗಿರಲು ಆತನು "ಭಕ್ತ" ಎನಿಸಿಕೊಳ್ಳುತ್ತಾನೆ. ○ ಇಂತು ಭಕ್ತಿಸ್ಥಲವು.

---

□ ಟಿಪ್ಪಣೆ:- ಷಡಕ್ಷರ ಮಂತ್ರಕ್ಕೆ ಅರ್ಥದ ವಿವರವು ಹೀಗೆ ಯಿದೆ. ನಮಃ ಎಂದರೆ ಜೀವ ಅಥವಾ ಅಂಗ ಶಿವಯೆಂದರೆ ಶಿವ ಅಥವಾ ಲಿಂಗ ಈ ಎರಡರ ಸಂಬಂಧವನ್ನು ಹೇಳು ವುದೇ ಅಯ. ಶಬ್ದವು ಹೀಗೆ 'ನಮಃಶಿವಾಯ' ಮಂತ್ರದಿಂದ ಜೀವನು ಶಿವನಾಗಲಿ ಅಥವಾ ಅಂಗವು ಲಿಂಗವಾಗಲಿ ಎಂಬ ಅಭಿಪ್ರಾಯವು ವ್ಯಕ್ತವಾಗುತ್ತದೆ. ಹೀಗೆ ಪ್ರಾರ್ಥಿಸಿಕೊಂಡಮೇಲೆ ಸೋಽಹಂ ಶಿವನೇನಾನು ಎಂಬ ಅಭಿಪ್ರಾಯದ ಓಂಕಾರವು ಪಂಚಾಕ್ಷರದ ಮುಂದೆಯೇ ಇದೆ. ಉಳಿದ ಎಲ್ಲ ದೇವತೆಗಳ ಮಂತ್ರಗಳಲ್ಲಿ ಆಯಾ ದೇವತೆಗೆ ನಮಸ್ಕಾರ ಎಂಬ ಭಿನ್ನರೂಪದ ಪ್ರಾರ್ಥನೆಯಿದೆ ಈ ಷಡಕ್ಷರ ಮಂತ್ರದಲ್ಲಿ ಜೀವನು ಶಿವನಾಗಲಿ ಎಂಬ ಪ್ರಾರ್ಥನೆಯು ಶಿವನೇನಾನೆಂಬ ನಿರ್ಣಯವು ಸಹ ಇರುವುದರಿಂದ ಇದು ಕೇವಲ ಶಿವಾದ್ವೈತವಾಗಿ ಈ ಮಂತ್ರವು ಏಳುಕೋಟಿ ಮಂತ್ರಗಳಿಗೆ ರಾಜಾಧಿರಾಜ ಎನಿಸಿಕೊಂಡಿದೆ. ಹೀಗೆ ಭಾರತೀಯ ಧರ್ಮ ಗ್ರಂಥಗಳು ಸಾರಿ ಹೇಳುತ್ತಿವೆ ಆದುದರಿಂದ ಇದು ಮಹಾಮಂತ್ರವಾಗಿದೆ.

○ ಟಿಪ್ಪಣೆ:- ಲಿಂಗದಲ್ಲಿ ಆಚಾರಲಿಂಗ ಗುರುಲಿಂಗ ಜಂಗಮಲಿಂಗ ಪ್ರಸಾದಲಿಂಗ ಮತ್ತು ಮಹಾಲಿಂಗ ಎಂದು ಆರು ಲಿಂಗಗಳು ಇವೆ ಇವುಗಳಲ್ಲಿ ಭಕ್ತನಿಗೆ ಆಚಾರಲಿಂಗವು ಮುಖ್ಯವು ಇದರ ಅಂತರ್ಗತವಾಗಿ ಉಳಿದ ಐದುಲಿಂಗಗಳು ಇರುವವೆಂದು ತಿಳಿಯುತ್ತಾನೆ. ಇದರಂತೆಯೇ ಭಕ್ತಸ್ಥಲ ಮಾಹೇಶ್ವರ ಸ್ಥಲ ಪ್ರಸಾದಿಸ್ಥಲ ಪ್ರಾಣಲಿಂಗಿಸ್ಥಲ ಶರಣಸ್ಥಲ ಮತ್ತು ಐಕ್ಯಸ್ಥಲ ಎಂಬ ಆರುಸ್ಥಲಗಳು ಆರು ಅಂಗಗಳಾಗಿವೆ. ಇವುಗಳಲ್ಲಿ ಭಕ್ತಸ್ಥಲ ಎಂಬ ಅಂಗವೇ ಮುಖ್ಯ ನಾದ ಭಕ್ತನು ತನ್ನ ಭಕ್ತಸ್ಥಲದ ಅಂತರ್ಗತವಾಗಿ ಉಳಿದ ಐದುಸ್ಥಲಗಳು ಇರುವುದಾಗಿ ತಿಳಿದಾಚರಿಸುತ್ತಾನೆ. ಭಕ್ತಸ್ಥಲವೇ ಅಂಗವಾದ ಭಕ್ತನಿಗೆ ಆಚಾರಲಿಂಗವು ಮುಖ್ಯವಾದುದ ರಿಂದ ಆತನು "ಆಚಾರಲಿಂಗಪ್ರಾಣಿ" ಎಂದು ಎನಿಸಿಕೊಂಡಿದ್ದಾನೆ. ಅವನು ನಡೆಯುತ್ತಿರುವ ಆಚಾರವೇ ಆಚಾರಲಿಂಗ ಎನಿಸಿಕೊಂಡಿದೆ.

A ಟಿಪ್ಪಣೆ ೨ :- ಗುರುವಿಗೆ ತನುವನ್ನು ಲಿಂಗಕ್ಕೆ ಪ್ರಾಣವನ್ನೂ ಜಂಗಮಕ್ಕೆ ಅಭಿಮಾನ ವನ್ನೂ (ಧನ) ಒಪ್ಪಿಸಬೇಕೆಂದೂ ಶಿವಶರಣರ ವಚನಗಳಲ್ಲಿ ಬಹಳವಾಗಿ ಹೇಳಲ್ಪಟ್ಟಿದೆ.

## ೧೬. ಮಾಹೇಶ್ವರ ಸ್ಥಲ

ಗುರುವಿನ ಪಾದಕಮಲದ ಆರಾಧನೆಯಲ್ಲಿಯೂ ಲಿಂಗಪೂಜೆಯಲ್ಲಿಯೂ ಜಂಗಮರಲ್ಲಿ ಭಕ್ತಿ ಪರಿಚರ್ಯೆಯಲ್ಲಿಯೂ ಪ್ರಸಾದದಲ್ಲಿ ದೃಢವಿಶ್ವಾಸದಲ್ಲಿಯೂ ಇರಲು ಆತನು ಮಾಹೇಶ್ವರನಾಗುತ್ತಾನೆ. ಓಂಕಾರವೇ ಗುರುವಿನ ತನುರೂಪವು. ಪರಮಾತ್ಮ ರೂಪವಾದ ಅಕ್ಷಯವಾದ ಘನಲಿಂಗ ಸ್ವರೂಪ ಜೀವನೇ ಗುರುವು. ಸಮಸ್ತ ಅಕ್ಷರಗಳೇ ಪಂಚೇಂದ್ರಿಯಗಳು. ಸ್ವರರಹಿತವಾದ ಹಕಾರವೇ ಕಾರಣ ತನುವು ವಿಕಲಾಕ್ಷರಗಳಿಂದ ( ಸ್ವರಗಳು ) ಕೂಡಿದ ಬಿಂದುವೇ ಸೂಕ್ಷ್ಮಾಂಗವು. ವ್ಯಾಪಕ ವರ್ಣಗಳಿಂದ (ವ್ಯಂಜನಗಳು) ಕೂಡಿದ ಕಲೆಯು ಲಕ್ಷಣವುಳ್ಳವುಗಳೇ ಅವಯವಗಳು. ಹೀಗೇ ಮಾಹೇಶ್ವರನ ಅಂಗವನ್ನು ತಿಳಿಯಬೇಕು. △ ಇಂತು ಮಾಹೇಶ್ವರನ ಸ್ಥಲವು.

## ೧೭. ಪ್ರಸಾದಿಸ್ಥಲ

ಲೋಕದ ಜನರಂತೆ ಉಣ್ಣುವದನ್ನು ಆಹಾರ ಪದಾರ್ಥವೆಂದು ತಿಳಿಯದೆ ಅಳತೆಗೆ ಸಿಕ್ಕದಿರುವ ವಸ್ತುವಿನ ಎಂದರೆ ಲಿಂಗದ ಪದಾರ್ಥವೆಂದು ತಿಳಿದು ಅದನ್ನು ಮಂತ್ರದೊಡನೆ ಲಿಂಗಕ್ಕರ್ಪಿಸಿ ಹಾಗೆ ಅರ್ಪಿಸಿದ ಪ್ರಸಾದವನ್ನು ಅನುಭವಿಸುವಾತನೇ ಪ್ರಸಾದಿಯಾಗುತ್ತಾನೆ. ಸಮಸ್ತ ಶುದ್ಧ ಪ್ರಸಾದವನ್ನು ( ರೂಪು ಪ್ರಸಾದವನರ್ಪಿಸಿದುದನ್ನು ) ಇಷ್ಟಪ್ರಾಣ ಭಾವಲಿಂಗಕ್ಕೆ ಸಮರ್ಪಣೆ ಮಾಡಿ ಆ ಪ್ರಸಾದವನ್ನು ಅಂಗಲಿಂಗ ಭಿನ್ನವಲ್ಲವೆಂದು ತಿಳಿದು ಉಪಭೋಗಿಸಲು ಆ ಪ್ರಸಾದವು ಸಿದ್ಧಿಯಾಗಿ ಮನಸ್ಸು ಪ್ರಾಣ ತನು ಇಂದ್ರಿಯಗಳು ಕರಣಗಳು ಎಲ್ಲವೂ ಘನಲಿಂಗ ಪ್ರಸಾದವಾಗಿ ( ಅವುಗಳ ವರ್ತನ ವಿಕಾರವು ನಾಶವಾಗಿ ಹೃದಯವು ನಿರ್ಮಲವಾಗುವುದಕ್ಕೆ ಲಿಂಗ ರೂಪವಾಗಲು ಕಾರಣವಾಗಿ ) ಇರುತ್ತದೆ. ಃ ಇಂತು ಪ್ರಸಾದಿಸ್ಥಲವು.

---

△ ಟಿಪ್ಪಣಿ ೧ :– ವೀರಶೈವರಲ್ಲಿ ಸಾಮಾನ್ಯ ವಿಶೇಷ ನಿರಾಭಾರಿ ಎಂಬ ಮೂರು ವರ್ಗಗಳಿವೆ ಮೊದಲಿನ ವರ್ಗದವರು ಭಕ್ತರೆಂದೂ ವಿಶೇಷವರ್ಗದವರು ಮಾಹೇಶ್ವರರೆಂದೂ ನಿರಾಭಾರಿ ವರ್ಗದವರು ವಿರಕ್ತಸ್ವಾಮಿಗಳೆಂದೂ ತಿಳಿಯಲ್ಪಡುತ್ತಾರೆ ಇವರಲ್ಲಿ ವಿಶೇಷವರ್ಗದವರು ಈ ಮಾಹೇಶ್ವರ ಲಕ್ಷಣದಲ್ಲಿ ಇರತಕ್ಕವರಾಗಿದ್ದಾರೆ.

(೨) ಃ ದೇವಾಲಯದಲ್ಲಿ ಮೂರ್ತಿಗಳಿಗೆ ಲೌಕಿಕಪದಾರ್ಥಗಳನ್ನು ನಿವೇದಿಸಿ (ತೋರಿಸಿ) ಅವನ್ನು ಪ್ರಸಾದವೆಂದು ಕೆಲವರು ಹೇಳುತ್ತಾರೆ ಅದು ಸರಿಯಲ್ಲ ಹೀಗೆ ತೋರಿಸಿದುದು 'ನೈವೇದ್ಯ' ವಾಗುತ್ತದೆ. ಶಿವ ಮತ್ತು ಜೀವ ಈ ಉಭಯದ ( ಲಿಂಗಾಂಗ ) ಸಂಬಂಧದ ತೃಪ್ತಿಯಿಂದ ಪಡೆದುದು ಪ್ರಸಾದವಾಗುತ್ತದೆ. ಪ್ರಸಾದವೆಂದರೆ ಪ್ರಸನ್ನತಾ ಭಾವವುಳ್ಳದ ಎಂದರ್ಥ. ಇಲ್ಲಿ ಪದಾರ್ಥವೂ ಲಿಂಗವಾಗಿ ಉಪಭೋಗಿಸುವ ಇಂದ್ರಿಯಾದಿಗಳು ಲಿಂಗ ರೂಪವಾಗುವುದರಿಂದ ಲಿಂಗದ ಪ್ರತ್ಯಕ್ಷತೆ (ಪ್ರಸನ ಭಾವ) ಚನ್ನಾಗಿ ವ್ಯಕ್ತವಾಗುತ್ತದೆ.

## ೧೮. ಪ್ರಾಣಲಿಂಗಿ ಸ್ಥಲ

ಪ್ರಾಣವು ಲೌಕಿಕ ಮಾನವರಲ್ಲಿ ಮಾಡುತ್ತಿರುವ ಹೊರಗಿನ ಕಾರ್ಯವನ್ನು ಪ್ರಾಣದ ಕೆಲಸವೆಂದು ತಿಳಿಯದೆ ಲಿಂಗವೇ ಪ್ರಾಣವೆಂದು ತಿಳಿಯುವ ಲಿಂಗ ಪ್ರಾಣಿಯಾಗಿ ಇಂದ್ರಿಯ ಗುಣವಿಲ್ಲದ ಪ್ರಾಣಲಿಂಗದ ಅನುಸಂಧಾನದಲ್ಲಿ ಆಸಕ್ತಿ ಯುಳ್ಳವನೇ ಪ್ರಾಣಲಿಂಗಿಯಾಗುತ್ತಾನೆ. ಶಿವಭಕ್ತಿಯಿಂದ ನಡೆಯುವವರಿಗೂ ಸಮಸ್ತರಿಗೂ ಪ್ರಸಾದವೇ ಬಹು ಮುಖ್ಯವು ಪ್ರಸಾದವಿಲ್ಲದವರಿಗೆ ಭಿನ್ನವಿಲ್ಲದ (ಸಾಮರಸ್ಯವುಳ್ಳ) ಭಕ್ತಿಯು ದೊರಕೊಳ್ಳುತ್ತದೆಯೇನು? (ಇಲ್ಲ) ವಿಚಾರಿಸಿ ನೋಡಿದರೆ ತನು ಮೊದಲಾದವುಗಳನ್ನು ಲಿಂಗಾಂಗ ಸಂಬಂಧವಾಗಿ ಭಾವಿಸಿರಲು ಸಮಸ್ತವೂ ಶಿವಮಯವಾಗಿರುವುದು ಆ ಶಿವಮಯ ಭಾವನೆಯುಳ್ಳ ಪ್ರಸಾದಿಯೇ ಲೋಕದವರು ಮಾಡುವ ಕರ್ಮವನ್ನು ಬಿಟ್ಟವನಾಗಿ ಪ್ರಾಣಲಿಂಗಿಯಾಗುತ್ತಾನೆ. ಹೀಗೆ ಲಿಂಗಪ್ರಾಣಿಯಾದವನಿಗೆ ಭಕ್ತ, ಮಾಹೇಶ್ವರ, ಪ್ರಸಾದಿ ಸ್ಥಲಗಳಲ್ಲಿ ಹೇಳಲ್ಪಟ್ಟ ಜ್ಞಾನಾಚರಣೆಯು ಲಿಂಗದ ಚೈತನ್ಯದ ಸ್ವರೂಪವಾಗಿ ಪ್ರಾಣದಲ್ಲಿ ವ್ಯಾಪಿಸಿರುವುದರಿಂದ ಆ ಲಿಂಗದೊಡನೆ ಕೂಡಿದ ಪ್ರಾಣವೇ ಲಿಂಗವಾಗಿ ಪ್ರಾಣ ಲಿಂಗಿಯಾಗಿರುತ್ತಾನೆ. ಈ ದೆಸೆಯಿಂದ ಆತನು ಘನಲಿಂಗ ಯೋಗೀಶ್ವರನೆಂದು ನಿರ್ಣಯಿಸಲ್ಪಟ್ಟಿದ್ದಾನೆ. ಅಂತಃಕರಣಗಳ ಪ್ರವೃತ್ತಿಯಂತೆ ನಡೆದು ಯಾವಾಗಲೂ ದೇಹದ ಕರ್ಮಗಳಿಗೆ ವಶನಾಗಿ ಮತ್ತು ಯಾವಾಗಲೂ ಮಾಯೆಯಿಂದ ಕೂಡಿದ ದೇಹದಲ್ಲಿ ಅಣುಪ್ರಾಣವಾಯು (ಆಣವ) ರೂಪದಿಂದ ದೇಹಿಯು ಎನಿಸಿಕೊಂಡು ಭ್ರಮೆಯಿಂದ ಸಂಸಾರವೆಂಬ ಅಡವಿಯಲ್ಲಿ ದಿಕ್ಕುಗಾಣದೆ ಯಾವಾಗಲೂ ಸಂಚರಿ ಸುತ್ತಿರುವ ಜೀವನು ಪ್ರಾಣಲಿಂಗಿಯಾಗಿ ಹೇಗೆ ಆಗುತ್ತಾನೆ? (ಆಗುವುದಿಲ್ಲ) ದಕ್ಷಿಣದಿಙ್ಮುಖವಾಗಿ ಹೊರಟವನು ಮೇರು ಪರ್ವತವನ್ನು ಕಾಣುತ್ತಾನೆಯೇ? ಎಲೆ ಮರುಳೆ ಹೇಳು, ಎಂಬ ಈ ಸಂಧಿಯಲ್ಲಿಯ ಅಭಿಪ್ರಾಯಗಳಿಂದ ಶಿವಭಾವನಾ ಯುಕ್ತ ಯೋಗೀಶ್ವರನೇ ಪ್ರಾಣಲಿಂಗಿಯೆಂದು ವ್ಯಕ್ತವಾಗುತ್ತದೆ ಇಂತು ಪ್ರಾಣಲಿಂಗಿ ಸ್ಥಲವು.

## ೧೯. ಶರಣ ಸ್ಥಲ

ಲಿಂಗದಲ್ಲಿ ನಿರ್ಮಲವಾದ (ತೆರಹಿಲ್ಲದ) ಭಕ್ತಿ ಮತ್ತು ಜ್ಞಾನ ಇವುಗಳ ಸಮರಸದಿಂದ ಲಿಂಗದಲ್ಲಿ ಬೆರೆದಿರುವ ಸುಖವನ್ನು ಲೋಕದ ಸತಿಯು ತನ್ನ ಪತಿಗೆ ಅರ್ಪಿಸುವಂತೆ ಸುಬುದ್ಧಿಯೆಂಬ ಗುರುಲಿಂಗದ ಸಂಬಂಧದಿಂದ ಲಿಂಗಕ್ಕೆ ಅರ್ಪಿಸಿ ಶರಣನೆನೆಸಿಕೊಂಡಿದ್ದಾನೆ. ಜ್ಞಾನವು (ತಿಳಿವಳಿಕೆ) ಲಿಂಗರೂಪವು ಜ್ಞೇಯವು (ತಿಳಿಯಲ್ಪಡುವ ವಸ್ತು) ಲಿಂಗರೂಪವು ಇದು ಒಪ್ಪಿಗೆಯಾದ ಸಂಗತಿ. ಜ್ಞಾತೃವೇ ಜ್ಞಾನಜ್ಞೇಯಗಳ ಯೋಗಾನು ಸಂಧಾನುವುಳ್ಳವನು ಈ ಮೂರು

## ೧೬. ಮಾಹೇಶ್ವರ ಸ್ಥಲ

ಗುರುವಿನ ಪಾದಕಮಲದ ಆರಾಧನೆಯಲ್ಲಿಯೂ ಲಿಂಗಪೂಜೆಯಲ್ಲಿಯೂ ಜಂಗಮರಲ್ಲಿ ಭಕ್ತಿ ಪರಿಚರ್ಯೆಯಲ್ಲಿಯೂ ಪ್ರಸಾದದಲ್ಲಿ ದೃಢವಿಶ್ವಾಸದಲ್ಲಿಯೂ ಇರಲು ಆತನು ಮಾಹೇಶ್ವರನಾಗುತ್ತಾನೆ. ಓಂಕಾರವೇ ಗುರುವಿನ ತನುರೂಪವು. ಪರಮಾತ್ಮ ರೂಪವಾದ ಅಕ್ಷಯವಾದ ಘನಲಿಂಗ ಸ್ವರೂಪ ಜೀವನೇ ಗುರುವು. ಸಮಸ್ತ ಅಕ್ಷರಗಳೇ ಪಂಚೇಂದ್ರಿಯಗಳು. ಸ್ವರರಹಿತವಾದ ಹಕಾರವೇ ಕಾರಣ ತನುವು ವಿಕಲಾಕ್ಷರಗಳಿಂದ ( ಸ್ವರಗಳು ) ಕೂಡಿದ ಬಿಂದುವೇ ಸೂಕ್ಷ್ಮಾಂಗವು. ವ್ಯಾಪಕ ವರ್ಣಗಳಿಂದ (ವ್ಯಂಜನಗಳು) ಕೂಡಿದ ಕಲೆಯ ಲಕ್ಷಣವುಳ್ಳವುಗಳೇ ಅವಯವಗಳು. ಹೀಗೇ ಮಾಹೇಶ್ವರನ ಅಂಗವನ್ನು ತಿಳಿಯಬೇಕು. △ ಇಂತು ಮಾಹೇಶ್ವರನ ಸ್ಥಲವು.

## ೧೭. ಪ್ರಸಾದಿಸ್ಥಲ

ಲೋಕದ ಜನರಂತೆ ಉಣ್ಣುವದನ್ನು ಆಹಾರ ಪದಾರ್ಥವೆಂದು ತಿಳಿಯದೆ ಅಳತೆಗೆ ಸಿಕ್ಕದಿರುವ ವಸ್ತುವಿನ ಎಂದರೆ ಲಿಂಗದ ಪದಾರ್ಥವೆಂದು ತಿಳಿದು ಅದನ್ನು ಮಂತ್ರದೊಡನೆ ಲಿಂಗಕ್ಕರ್ಪಿಸಿ ಹಾಗೆ ಅರ್ಪಿಸಿದ ಪ್ರಸಾದವನ್ನು ಅನುಭವಿಸುವಾತನೇ ಪ್ರಸಾದಿಯಾಗುತ್ತಾನೆ. ಸಮಸ್ತ ಶುದ್ಧ ಪ್ರಸಾದವನ್ನು ( ರೂಪು ಪ್ರಸಾದವನರ್ಪಿಸಿದುದನ್ನು ) ಇಷ್ಟಪ್ರಾಣ ಭಾವಲಿಂಗಕ್ಕೆ ಸಮರ್ಪಣೆ ಮಾಡಿ ಆ ಪ್ರಸಾದವನ್ನು ಅಂಗಲಿಂಗ ಭಿನ್ನವಲ್ಲವೆಂದು ತಿಳಿದು ಉಪಭೋಗಿಸಲು ಆ ಪ್ರಸಾದವು ಸಿದ್ಧಿಯಾಗಿ ಮನಸ್ಸು ಪ್ರಾಣ ತನು ಇಂದ್ರಿಯಗಳು ಕರಣಗಳು ಎಲ್ಲವೂ ಘನಲಿಂಗ ಪ್ರಸಾದವಾಗಿ ( ಅವುಗಳ ವರ್ತನ ವಿಕಾರವು ನಾಶವಾಗಿ ಹೃದಯವು ನಿರ್ಮಲವಾಗುವುದಕ್ಕೆ ಲಿಂಗ ರೂಪವಾಗಲು ಕಾರಣವಾಗಿ ) ಇರುತ್ತದೆ. ಃ ಇಂತು ಪ್ರಸಾದಿಸ್ಥಲವು.

---

△ ಟಿಪ್ಪಣಿ ೧ :– ವೀರಶೈವರಲ್ಲಿ ಸಾಮಾನ್ಯ ವಿಶೇಷ ನಿರಾಭಾರಿ ಎಂಬ ಮೂರು ವರ್ಗಗಳಿವೆ ಮೊದಲಿನ ವರ್ಗದವರು ಭಕ್ತರೆಂದೂ ವಿಶೇಷವರ್ಗದವರು ಮಾಹೇಶ್ವರರೆಂದೂ ನಿರಾಭಾರಿ ವರ್ಗದವರು ವಿರಕ್ತಸ್ವಾಮಿಗಳೆಂದೂ ತಿಳಿಯಲ್ಪಡುತ್ತಾರೆ ಇವರಲ್ಲಿ ವಿಶೇಷವರ್ಗದವರು ಈ ಮಾಹೇಶ್ವರ ಲಕ್ಷಣದಲ್ಲಿ ಇರತಕ್ಕವರಾಗಿದ್ದಾರೆ.

(೨) ಃ ದೇವಾಲಯದಲ್ಲಿ ಮೂರ್ತಿಗಳಿಗೆ ಲೌಕಿಕಪದಾರ್ಥಗಳನ್ನು ನಿವೇದಿಸಿ (ತೋರಿಸಿ) ಅದನ್ನು ಪ್ರಸಾದವೆಂದು ಕೆಲವರು ಹೇಳುತ್ತಾರೆ ಅದು ಸರಿಯಲ್ಲ ಹೀಗೆ ತೋರಿಸಿದುದು 'ನೈವೇದ್ಯ' ವಾಗುತ್ತದೆ. ಶಿವ ಮತ್ತು ಜೀವ ಈ ಉಭಯದ ( ಲಿಂಗಾಂಗ ) ಸಂಬಂಧದ ತೃಪ್ತಿಯಿಂದ ಪಡೆದುದು ಪ್ರಸಾದವಾಗುತ್ತದೆ. ಪ್ರಸಾದವೆಂದರೆ ಪ್ರಸನ್ನತಾ ಭಾವವುಳ್ಳದ ಎಂದರ್ಥ. ಇಲ್ಲಿ ಪದಾರ್ಥವೂ ಲಿಂಗವಾಗಿ ಉಪಭೋಗಿಸುವ ಇಂದ್ರಿಯಾದಿಗಳು ಲಿಂಗ ರೂಪವಾಗುವುದರಿಂದ ಲಿಂಗದ ಪ್ರತ್ಯಕ್ಷತೆ (ಪ್ರಸನ್ನ ಭಾವ) ಚನ್ನಾಗಿ ವ್ಯಕ್ತವಾಗುತ್ತದೆ.

## ೧೮. ಪ್ರಾಣಲಿಂಗಿ ಸ್ಥಲ

ಪ್ರಾಣವು ಲೌಕಿಕ ಮಾನವರಲ್ಲಿ ಮಾಡುತ್ತಿರುವ ಹೊರಗಿನ ಕಾರ್ಯವನ್ನು ಪ್ರಾಣದ ಕೆಲಸವೆಂದು ತಿಳಿಯದೆ ಲಿಂಗವೇ ಪ್ರಾಣವೆಂದು ತಿಳಿಯುವ ಲಿಂಗ ಪ್ರಾಣಿಯಾಗಿ ಇಂದ್ರಿಯ ಗುಣವಿಲ್ಲದ ಪ್ರಾಣಲಿಂಗದ ಅನುಸಂಧಾನದಲ್ಲಿ ಆಸಕ್ತಿ ಯುಳ್ಳವನೇ ಪ್ರಾಣಲಿಂಗಿಯಾಗುತ್ತಾನೆ. ಶಿವಭಕ್ತಿಯಿಂದ ನಡೆಯುವವರಿಗೂ ಸಮಸ್ತರಿಗೂ ಪ್ರಸಾದವೇ ಬಹು ಮುಖ್ಯವು ಪ್ರಸಾದವಿಲ್ಲದವರಿಗೆ ಭಿನ್ನವಿಲ್ಲದ (ಸಾಮರಸ್ಯವುಳ್ಳ) ಭಕ್ತಿಯು ದೊರಕೊಳ್ಳುತ್ತದೆಯೇನು? (ಇಲ್ಲ) ವಿಚಾರಿಸಿ ನೋಡಿದರೆ ತನು ಮೊದಲಾದವುಗಳನ್ನು ಲಿಂಗಾಂಗ ಸಂಬಂಧವಾಗಿ ಭಾವಿಸಿರಲು ಸಮಸ್ತವೂ ಶಿವಮಯವಾಗಿರುವುದು ಆ ಶಿವಮಯ ಭಾವನೆಯುಳ್ಳ ಪ್ರಸಾದಿಯೇ ಲೋಕದವರು ಮಾಡುವ ಕರ್ಮವನ್ನು ಬಿಟ್ಟವನಾಗಿ ಪ್ರಾಣಲಿಂಗಿಯಾಗುತ್ತಾನೆ. ಹೀಗೆ ಲಿಂಗಪ್ರಾಣಿಯಾದವನಿಗೆ ಭಕ್ತ, ಮಾಹೇಶ್ವರ, ಪ್ರಸಾದಿ ಸ್ಥಲಗಳಲ್ಲಿ ಹೇಳಲ್ಪಟ್ಟ ಜ್ಞಾನಾಚರಣೆಯು ಲಿಂಗದ ಚೈತನ್ಯದ ಸ್ವರೂಪವಾಗಿ ಪ್ರಾಣದಲ್ಲಿ ವ್ಯಾಪಿಸಿರುವುದರಿಂದ ಆ ಲಿಂಗದೊಡನೆ ಕೂಡಿದ ಪ್ರಾಣವೇ ಲಿಂಗವಾಗಿ ಪ್ರಾಣ ಲಿಂಗಿಯಾಗಿರುತ್ತಾನೆ. ಈ ದೆಸೆಯಿಂದ ಆತನು ಘನಲಿಂಗ ಯೋಗೀಶ್ವರನೆಂದು ನಿರ್ಣಯಿಸಲ್ಪಟ್ಟಿದ್ದಾನೆ. ಅಂತಃಕರಣಗಳ ಪ್ರವೃತ್ತಿಯಂತೆ ನಡೆದು ಯಾವಾಗಲೂ ದೇಹದ ಕರ್ಮಗಳಿಗೆ ವಶನಾಗಿ ಮತ್ತು ಯಾವಾಗಲೂ ಮಾಯೆಯಿಂದ ಕೂಡಿದ ದೇಹದಲ್ಲಿ ಅಣುಪ್ರಾಣವಾಯು (ಆಣವ) ರೂಪದಿಂದ ದೇಹಿಯು ಎನಿಸಿಕೊಂಡು ಭ್ರಮೆಯಿಂದ ಸಂಸಾರವೆಂಬ ಅಡವಿಯಲ್ಲಿ ದಿಕ್ಕುಗಾಣದೆ ಯಾವಾಗಲೂ ಸಂಚರಿ ಸುತ್ತಿರುವ ಜೀವನು ಪ್ರಾಣಲಿಂಗಿಯಾಗಿ ಹೇಗೆ ಆಗುತ್ತಾನೆ? (ಆಗುವುದಿಲ್ಲ) ದಕ್ಷಿಣದಿಙ್ಮುಖವಾಗಿ ಹೊರಟವನು ಮೇರು ಪರ್ವತವನ್ನು ಕಾಣುತ್ತಾನೆಯೇ? ಎಲೆ ಮರುಳೆ ಹೇಳು, ಎಂಬ ಈ ಸಂಧಿಯಲ್ಲಿಯ ಅಭಿಪ್ರಾಯಗಳಿಂದ ಶಿವಭಾವನಾ ಯುಕ್ತ ಯೋಗೀಶ್ವರನೇ ಪ್ರಾಣಲಿಂಗಿಯೆಂದು ವ್ಯಕ್ತವಾಗುತ್ತದೆ ಇಂತು ಪ್ರಾಣಲಿಂಗಿ ಸ್ಥಲವು.

## ೧೯. ಶರಣ ಸ್ಥಲ

ಲಿಂಗದಲ್ಲಿ ನಿರ್ಮಲವಾದ (ತೆರಹಿಲ್ಲದ) ಭಕ್ತಿ ಮತ್ತು ಜ್ಞಾನ ಇವುಗಳ ಸಮರಸದಿಂದ ಲಿಂಗದಲ್ಲಿ ಬೆರೆದಿರುವ ಸುಖವನ್ನು ಲೋಕದ ಸತಿಯು ತನ್ನ ಪತಿಗೆ ಅರ್ಪಿಸುವಂತೆ ಸುಬುದ್ಧಿಯೆಂಬ ಗುರುಲಿಂಗದ ಸಂಬಂಧದಿಂದ ಲಿಂಗಕ್ಕೆ ಅರ್ಪಿಸಿ ಶರಣನೆನಿಸಿಕೊಂಡಿದ್ದಾನೆ. ಜ್ಞಾನವು (ತಿಳಿವಳಿಕೆ) ಲಿಂಗರೂಪವು ಜ್ಞೇಯವು (ತಿಳಿಯಲ್ಪಡುವ ವಸ್ತು) ಲಿಂಗರೂಪವು ಇದು ಒಪ್ಪಿಗೆಯಾದ ಸಂಗತಿ. ಜ್ಞಾತೃವೇ ಜ್ಞಾನಜ್ಞೇಯಗಳ ಯೋಗಾನು ಸಂಧಾನುವುಳ್ಳವನು ಈ ಮೂರು

ವಿಧವಾದ ತ್ರಿಪುಟೀರೂಪವು ಒಂದೇಆಗಿ ಘನಲಿಂಗದ ಧ್ಯಾನ ಮತ್ತು ಅನುಸಂಧಾನ ಇವುಗಳಲ್ಲಿ ಆಸಕ್ತನಾದ ಅನುಭವವುಳ್ಳವನೇ ಪ್ರಾಣಲಿಂಗಿಯಾಗಿರುತ್ತಾನೆ. ಈ ಪ್ರಾಣ ಲಿಂಗಿಯು ತಾನೇ ಕೇವಲ ಲಿಂಗರೂಪನು. (ಸ್ವಯಂಭುಲಿಂಗ) ಹೀಗೆ ತಾನೇ ಲಿಂಗರೂಪನಾದವನು ಲಿಂಗಸಮರಸ ಸುಖವನ್ನು ಸತಿ ಪತಿಗಳಂತೆ. ಅಂಗಲಿಂಗಾನು ಭಾವದಿಂದ ಲಿಂಗಕ್ಕರ್ಪಿಸಿ ಅನುಸಂಧಾನ ಮಾಡಬೇಕು ○ ಇಂತು ಶರಣ ಸ್ಥಲವು.

## ೨೦. ಐಕ್ಯಸ್ಥಲ

ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಈ ಐದು ಸ್ಥಲಗಳಲ್ಲಿ ಆಚರಿಸಿ ಅವ್ಯಕ್ತನಾದ ಪರಶಿವನಲ್ಲಿ ಐಕ್ಯ ( ಸಮರಸ ) ಭಕ್ತಿಯುಳ್ಳವನಾಗಿ ಕ್ರಿಯೆಗಳನ್ನೆಲ್ಲ ಬಿಟ್ಟು ಬೆರಸಿದವನು ಐಕ್ಯಸ್ಥಲಿಕನು ಆಗುತ್ತಾನೆ. ಬೆರಸಿರುವಲ್ಲಿ ಕ್ರಿಯೆಯೂ ಅವ್ಯಕ್ತವಾಗಿರಬೇಕು. ಘನವಾದ ಶಿವತತ್ತ್ವದ ಐಕ್ಯ (ಸಮರಸ) ಭಾವನೆಯು ಕೂಡಿಬರಲು ಅವಿದ್ಯೆಯಿಂದ ತೋರುವ ಹಿತವಲ್ಲದ ತನು ಕರಣ ಇಂದ್ರಿಯಗಳೇ ಮೊದಲಾದ ಸರ್ವ ಸಾಧನವೂ ವಿಶೇಷ ಹಿತವಾಗಿದೆ. ಎಂದು ಆಸೆಪಟ್ಟು ಆ ಕಡೆಗೆ ಗಮನ ಕೊಟ್ಟು ಒಳ್ಳೆಯಹಿತದಲ್ಲಿವೆ, ಎಂಬ ಭಾವವುಳ್ಳವ ನಾಗಿರಲು ಆತನಿಗೆ ನಿರ್ಭಾವವು ಎಲ್ಲಿಂದ ಬರುತ್ತದೆ? ನಿರ್ಭಾವವಿಲ್ಲದಿದ್ದರೆ ಐಕ್ಯಸ್ಥಲ ಪ್ರಾಪ್ತಿಯಿಲ್ಲ. ತನುಕರಣೇಂದ್ರಿಯಾದಿ ಸುಖ ಭಾವನೆ ಎಲ್ಲವೂ ಅರತು (ಬತ್ತಿ-ಕರಗಿ) ಹೋಗುವುದೇ ನಿರ್ಭಾವವು ಇದೇ ಐಕ್ಯಸ್ಥಲವು.

## ೨೧. ಸ್ವಲೀಲಾನಂದ ಭಕ್ತಿಸ್ಥಲ

ಲಿಂಗದಲ್ಲಿ ಸಮರಸನಾಗಿ ಕೂಡಿ ಚಿದ್‌ಘನ ಲಿಂಗರೂಪವನ್ನು ತಾಳಿ ಸ್ವತಂತ್ರ ತೆಯಿಂದ ಅಂಗವನ್ನು ಮರೆದು ಭಾವಿಸದೆ ತನ್ನನ್ನು ತಾನು ಪೂಜಿಸಿಕೊಳ್ಳುತ್ತಿರು ವುದೇ ಸ್ವಲೀಲಾನಂದ ಭಕ್ತಿಸ್ಥಲವು. ‡ ಇಂತು ಸ್ವಲೀಲಾನಂದ ಭಕ್ತಿಸ್ಥಲವು.

---

○ ಟಿಪ್ಪಣಿ :– "ರುದ್ರೋ ಭೂತ್ವಾ ಯಜೇದ್ರುದ್ರಂ "ನಾಶಿವಃ ಶಿವ ಯರ್ಚಯೇತ್" ಎಂಬ ಪ್ರಮಾಣಗಳಿಗೆ ಅನುಸಾರವಾದ ಕ್ರಿಯೆಯನ್ನು ತೋರಿಸುವ ಸ್ಥಲವಿದು " ಲಿಂಗ ಪೂಜೆಯ ಮಾಡುವದೇತಕಯ್ಯಾ ತನ್ನತಾನರಿವುದಕ್ಕೆ" ಎಂಬುದಾಗಿ ಶಿವಶರಣರ ವಚನವೂ ಇದೆ ಇಂತಹ ಆಚರಣೆಯೇ ಅಂಗಲಿಂಗದ ಅನುಸಂಧಾನವು ಎಂದರೆ ಲಿಂಗವೇ ಅಂಗವಾಗಿ ಲಿಂಗವೇ ಲಿಂಗವಾಗಿ ಪರಸ್ಪರ ಪೂಜೆಮಾಡುವ ಮತ್ತು ಪೂಜೆಯನ್ನು ಕೈಕೊಳ್ಳುವ ಸಾಮರಸ್ಯವುಳ್ಳ ಸ್ಥಿತಿಯುಳ್ಳುದೇ ಶರಣಸ್ಥಲವು.

‡ ಟಿಪ್ಪಣಿ:- ಈ ಗ್ರಂಥದ ಪ್ರಥಮ ಪ್ರಕರಣದಲ್ಲಿ ನಿರ್ದೇಶಿಸಲ್ಪಟ್ಟ ವಸ್ತುವೇ ಲಿಂಗವು ಆ ಲಿಂಗದ ಅನುಭಾವದಿಂದ ತನ್ನ ಮನಃ ಕರಣಾದಿಗಳು ಜಗತ್ತುಸಹ ಲಿಂಗರೂಪಗಳೇ ಆಗಿರುವವೆಂಬ ಅನುಸಂಧಾನದಿಂದ ಕೇವಲ ಲಿಂಗರೂಪನೇ ಆಗಿ ವರ್ತಿಸುವುದೇ ಸ್ವತಂತ್ರತೆಯು ಇಂತಹ ಧಾರ್ಮಿಕ ಸ್ವಾತಂತ್ರ್ಯವುಳ್ಳಾತನು ತನ್ನನ್ನು ತಾನೇ ಅರ್ಚಿಸಿಕೊಳ್ಳುವವನಾಗುತ್ತಾನೆ.

## ಸಾರಾಂಶ

ಈ ಗ್ರಂಥದಿಂದ ತಿಳಿದುಬರುವ ಮುಖ್ಯಾಂಶಗಳನ್ನು ಈ ರೀತಿಯಲ್ಲಿ ಸಂಗ್ರಹಿಸ ಲಿಕ್ಕೆ ಬರುವಂತೆ ಇದೆ:— ಲೋಕಕ್ಕೆಲ್ಲ ಒಬ್ಬನೇದೇವನಾದವನು ನಿರಾಕಾರ ಪರ ವಸ್ತುವು ಅವನು ನಿರುಪಮ ನಿರಾಕಾರ ನಿರ್ಗುಣ ನಿರವಯ ನಿರಂಜನ ನಿರಾಮಯ ಮೊದಲಾದ ಪದಗಳಿಂದ ಬೋಧ್ಯನಾಗಿದ್ದಾನೆ (ಸಂಧಿ ೧ ಪದ್ಯ ೬-೯ ನೋಡಿರಿ). ಈ ಒಬ್ಬನೇ ಒಬ್ಬನಾದ ಮಹಾದೇವನಿಂದ ಈ ಜಗತ್ತು ಸೂರ್ಯನಕ್ಷತ್ರಾದಿಗಳಿಂದ ಕೂಡಿದ ಬ್ರಹ್ಮಾಂಡವು ಮತ್ತು ಇದರ ಮೂಲರೂಪವಾದವಿಶ್ವವು ಉಗಮವಾಗಿದೆ. ಎಂದು ಎರಡನೆಯ ಸಂಧಿಯಲ್ಲಿ ಪ್ರತಿಪಾದಿತವಾಗಿದೆ. ಮೂರನೆಯಸಂಧಿಯಲ್ಲಿ ಈ ವಿಶ್ವದಲ್ಲಿ ಮಾನವನು ಶುದ್ಧವಾದ ಅಂತಃಕರಣವುಳ್ಳ ಜೀವಿಯಾಗಿ ಪಿಂಡನೆಂದು ಕರೆಯಲ್ಪಡುತ್ತಾನೆ ೪ನೆಯ ಸಂಧಿಯಲ್ಲಿ ಇವನು ಈ ವಿಶ್ವದಲ್ಲಿ ಸದ್ರೂಪ ಅಸದ್ರೂಪ ಎಂಬ ಎರಡು ಭೇದಗಳನ್ನು ವಿಚಾರಿಸಿ ತಿಳಿದುಕೊಂಡು ನಿತ್ಯಾನಿತ್ಯ ವಸ್ತುವಿವೇಕದಿಂದ ಅನಿತ್ಯವಾದುದನ್ನು ಬಿಟ್ಟು ನಿತ್ಯನಾದ ಬ್ರಹ್ಮನನ್ನೇ ತಿಳಿಯಬೇಕೆಂದು ಜ್ಞಾನದೃಷ್ಟಿಯುಳ್ಳವನಾಗಿರಬೇಕು. ಇದೇ ಪಿಂಡಜ್ಞಾನವು (ಈ ಜ್ಞಾನವೇ ಈಗಿನ ಅದ್ವೈತಿಗಳು ತಿಳಿಯುವ ಜ್ಞಾನ ವಾಗಿದೆ) ೫ನೆಯ ಸಂಧಿಯಲ್ಲಿ ಹೀಗೆ ಜ್ಞಾನಿಯಾಗಿದ್ದರೂ ಮಾನವನು ಈ ಲೋಕ ದಲ್ಲಿ ನಡೆಯುವ ವರ್ತನವು ಸಂಸಾರವೆನಿಸಿಕೊಂಡು ಆ ಸಂಸಾರದಲ್ಲಿಯೇ ಇತರ ಪ್ರಾಣಿಗಳಂತೆ ನಡೆಯಬೇಕಾಗುತ್ತದೆ. ಈ ವರ್ತನವೇ ಕರ್ಮವೆನಿಸಿಕೊಂಡಿದೆ. ಒಬ್ಬ ಮನುಷ್ಯನು "ನಾನು ಮಹಾದೇವನಿಗಿಂತ ಭಿನ್ನನಾಗಿ ದೇವನ ಪೂಜೆಯನ್ನು ಮಾಡುತ್ತೇನೆ" ಎಂದು ದೇವನ ಪೂಜೆ ಮಾಡುವುದೂ ಸಹಾ ಪುಣ್ಯ ಕರ್ಮವಾಗಿದೆ. ೬ನೆಯ ಸಂಧಿಯಲ್ಲಿ ಈ ಕರ್ಮದಲ್ಲಿ ಎಷ್ಟು ಕಾಲ (ಲಕ್ಷಗಟ್ಟಲೆ ವರ್ಷ) ನಡೆದರೂ ನನಗೆ ಮಹಾದೇವನ ಸಮರಸವಿಲ್ಲವೆಂದು ತಿಳಿದು ಆ ಸಂಸಾರ ಕರ್ಮದಲ್ಲಿ ಅಸಹ್ಯ ಪಟ್ಟು ಅಂತಹ ಕರ್ಮಬದ್ಧವಾದ ಸಂಸಾರವನ್ನು ತ್ಯಜಿಸಬೇಕು ಇದೇ ಸಂಸಾರಹೇಯ ಸ್ಥಲ. ೭ನೆಯ ಸಂಧಿಯಲ್ಲಿ ಈ ಕರ್ಮಬದ್ಧ ಸಂಸಾರವನ್ನು ತಪ್ಪಿಸುವುದಕ್ಕೆ ನಿರಾಕಾರ ಪರವಸ್ತುವನ್ನು ನಂಬಬೇಕು. ಆ ನಿರಾಕಾರ ವಸ್ತುವು ತನ್ನ ನಿರಾಕಾರ ರೂಪದಿಂದ ಲಿಂಗದ ಆಕಾರವಾಗಿ (ಗೋಳಾಕಾರ) ದೃಷ್ಟಿಗೆ ಗೋಚರನಾಗುತ್ತಾನೆ.

---

ಈ ಸ್ಥಲದಲ್ಲಿ ವರ್ತಿಸುವವರ ರೀತಿಯು ಹೀಗೆ ಇದೆ "ಅದ್ವೈತ" ಜ್ಞಾನದಿಂದ ಮೋಕ್ಷವಾಗುತ್ತದೆ ಜ್ಞಾನ ಮತ್ತು ಮೋಕ್ಷ ಇವುಗಳಿಗೆ ಮೀರಿದ್ದಾಗಿ ಶಾಂಭವ ಭಕ್ತಿಯು (ಲಿಂಗಭಕ್ತಿ) ಇರುತ್ತದೆ. ಈ ಭಕ್ತಿಯ ವೈಭವದಲ್ಲಿ ತನಷ್ಟಕ್ಕೆತಾನೇ ತನ್ನ ಅನುಭವದ ಬಿಡುವಿಲ್ಲದ ಮಹಾ ಪ್ರಕಾಶ ದಲ್ಲಿ ತಾನು 'ನಿಜೈಕ್ಯಾದ್ವೈತ' ರೀತಿಯ ವರ್ತನೆಯಲ್ಲಿ ಅನುಪಮನಾಗಿ ಪರವಸ್ತುವಿನ ಪ್ರಸನ್ನತೆಯ ಆನಂದದಿಂದ ಇರುತ್ತಾನೆ. ಎಂದರೆ ಪರವಸ್ತುವೇ ತಾನೆಂಬ ಸಹಜಾನಂದ ವನು ಭವಿಸುವ ಲೀಲೆಯುವನಾಗಿ ಇರುತ್ತಾನೆ ಈ ಸ್ವಲೀಲಾನಂದದಲ್ಲಿ ನಡೆಯುವದು ಭಕ್ತಿಯು ಎಂದರೆ ಭಕ್ತಸ್ಥಲದ ಪರಿಣಾಮ ಪದವಿಯಾಗಿರುವದರಿಂದ ಇದಕ್ಕೆ 'ಸ್ವಲೀಲಾನಂದ ಭಕ್ತಿ ಸ್ಥಲವು' ಎಂದು ಹೆಸರು ಬಂದಿದೆ ಇವನ ಈ ಸ್ವತಂತ್ರವರ್ತನೆಯೇ ಲೀಲೆಯು.

ಅದೇ ಲಿಂಗದ ರೂಪ. ಈ ಲಿಂಗದ ಅನುಸಂಧಾನವನ್ನೇ ಮಾಡಬೇಕು. ಇದೇ ಪರವಸ್ತುವಿನ ನಿಜರೂಪದ ಸ್ಥಾಪನೆ. ೮ನೆಯ ಸಂಧಿಯಲ್ಲಿ ಹೀಗೆ ಪರವಸ್ತುವಿನ ನಿಜರೂಪವಾದ ಲಿಂಗವನ್ನು ಹೇಗೆ ಪಡೆಯಬೇಕೆಂದು ವಿಚಾರವುಳ್ಳವನಾಗಿ ಲಿಂಗಾಂಗ ಸಮರಸವುಳ್ಳ ಗುರುವನ್ನು ಹೊಂದಿ ಲಿಂಗವನ್ನು ಪಡೆದು ಧರಿಸಬೇಕೆಂಬೀದಾಗಿ ಗುರುವಿನ ಬಳಿಗೆ ಹೋಗಿ ಬೇಡಿಕೊಳ್ಳಲು ಆ ಗುರುವು ಬೇಡಿಕೊಂಡ ಶಿಷ್ಯನ ಮೇಲೆ ಕರುಣವಿಟ್ಟು "ಆಗಲಿ" ಎಂದು ಒಪ್ಪಿಕೊಳ್ಳುತ್ತಾನೆ. ೯ನೆಯ ಸಂಧಿಯಲ್ಲಿ ಮುಂದೆ ಆ ಗುರುವು ಶಿಷ್ಯನಿಗೆ ಲಿಂಗಾಂಗ ಸಮರಸದ ದೀಕ್ಷೆಯನ್ನು ಮಾಡಬೇಕಾಗಿದೆ. ಅದಕ್ಕಾಗಿ ೧೦ನೆಯ ಸಂಧಿಯಲ್ಲಿ ಮುಂದೆ ಆ ಲಿಂಗದೊಡನೆ ಲೋಕದಲ್ಲಿ ವರ್ತಿಸುವ ಆಚಾರವನ್ನು ಯೋಗರೂಪದಲ್ಲಿ ಉಪದೇಶಿಸುತ್ತಾನೆ. ಇದೇ ಜ್ಞಾನಾಚಾರ ಬೋಧೆಯಸ್ಥಲ. ೧೧ನೆಯ ಸಂಧಿಯಲ್ಲಿ ಆ ಉಪದೇಶವನ್ನು ಶಿಷ್ಯನು ಗ್ರಹಿಸಿದ ಮೇಲೆ ಗುರುವು ಶಿಷ್ಯನಿಗೆ ಲಿಂಗಧಾರಣೆಯನ್ನು ಮಾಡುತ್ತಾನೆ. ೧೨ರಿಂದ ೧೪ನೆಯ ಸಂಧಿಗಳಲ್ಲಿ ಭಸ್ಮ, ರುದ್ರಾಕ್ಷ, ಮಂತ್ರ ಇವುಗಳ ಅವಶ್ಯಕತೆಯನ್ನು ತಿಳಿಸಿ ಅವುಗಳನ್ನು ಲಿಂಗಧಾರಿಯ ಆಚರಣೆಗೆ ಸರಿಯಾಗಿ ನಡೆಯುವಂತೆ ತಿಳಿಸಿಕೊಡುತ್ತಾನೆ. ಭಸ್ಮವು ಆತ್ಮಜ್ಯೋತಿಯಾಗಿದೆ. ರುದ್ರಾಕ್ಷವು ಇಂದ್ರಿಯಗಳ ಶಿವರೂಪವನ್ನು ತೋರಿಸುತ್ತದೆ. ಮಂತ್ರವು ಮಹಾದೇವನೊಡನೆ ಸೇರಬೇಕೆಂಬ ಪ್ರಾರ್ಥನೆಯನ್ನು ಹಾಗೆ ಸೇರಿದೆನೆಂಬ ಭಾವನೆಯನ್ನು ಉಂಟುಮಾಡಿಕೊಡುತ್ತದೆ ಎಂಬುದರ ವಿವರವು ಇದೆ. ೧೫ನೆಯ ಸಂಧಿಯಲ್ಲಿ ಈ ಕ್ರಮದಲ್ಲಿ ಲಿಂಗಧಾರಿಯಾದವನು ಶಿವರೂಪನೆಂದು ತಿಳಿದುಕೊಂಡ ತನ್ನ ತನು ಮನ ಧನ (ಅಭಿಮಾನ ವಸ್ತು) ಇವುಗಳನ್ನು ಗುರುಲಿಂಗ ಜಂಗಮಕ್ಕೆ ಒಪ್ಪಿಸಬೇಕು ಎಂಬುದೇ ಭಕ್ತಸ್ಥಲ ೧೬ನೆಯ ಸಂಧಿಯಲ್ಲಿ ಅನ್ಯರ ದ್ರವ್ಯವೇ ಮೊದಲಾದವುಗಳನ್ನು ತೆಗೆದುಕೊಳ್ಳಬಾರದು ಎಂಬ ಮಾಹೇಶ್ವರಸ್ಥಲ ೧೭ನೆಯ ಸಂಧಿಯಲ್ಲಿ ಹೀಗೆ ತನ್ನದೆಲ್ಲವನ್ನೂ ಕೊಟ್ಟು ಪರರವಸ್ತುವನ್ನೇನೂ ಗ್ರಹಿಸದೆ ಗುರು ಲಿಂಗ ಜಂಗಮದಿಂದ ಬಂದ ಪ್ರಸಾದವನ್ನೇ ತಗೆದುಕೊಂಡು ತೃಪ್ತನಾಗಬೇಕು ಇದೇ ಸಮಾಜದೊಡನೆ ನಡೆಯುವ ಸಹವರ್ತನಭಾವ ೧೮ ನೆಯ ಸಂಧಿಯಲ್ಲಿ ಮುಂದೆ ತನ್ನ ಪ್ರಾಣವೆ ಲಿಂಗವೆಂದು ಲಿಂಗ ಪ್ರಾಣಿಯಾಗಿ ನಡೆಯಬೇಕೆಂಬ ಪ್ರಾಣಲಿಂಗಿಸ್ಥಲ ೧೯ನೆಯ ಸಂಧಿಯಲ್ಲಿ ತಾನು ಲಿಂಗವಾದೆನೆಂಬ ಅಹಂಭಾವನೆಯ ಸುಖವನ್ನು ಲಿಂಗವೇ ಅಂಗವಾಗಿ ಲಿಂಗವನ್ನು ಪೂಜಿಸುತ್ತದೆ, ಎಂಬ ದಾಸೋಹಂಭಾವವುಳ್ಳವನಾಗಿ ಸತಿ ಪತಿ ಭಾವದಲ್ಲಿ ನಡೆಸಬೇಕೆಂಬುದೇ ಶರಣಸ್ಥಲ ೨೦ನೆಯ ಸಂಧಿಯಲ್ಲಿ ಮುಂದೆ ಲಿಂಗ ಮತ್ತು ಅಂಗಗಳ ಭೇದವನ್ನಿಡದೆ ಲಿಂಗಾಂಗದ ವರ್ತನವೂ ಇಲ್ಲದೆ ಕೇವಲ ಲಿಂಗರೂಪನಾಗಿ ವರ್ತನಮಾಡುವುದೇ ಐಕ್ಯಸ್ಥಲ ಈ ಸ್ಥಲದಲ್ಲಿ ಕೇವಲ ಲಿಂಗರೂಪನಾಗಿಯೇ ವರ್ತಿಸುವುದರ ವಿವರವಿದೆ ಲಿಂಗಾಂಗಗಳ ವರ್ತನದ ಕ್ರಿಯೆಯ ಮುಖ್ಯತ್ವವಿಲ್ಲ.

ಅದ್ವೈತಭಕ್ತಿಯುಕ್ತಸ್ಯ ಯೋಗಿನಃ ಸಕಲಾಕ್ರಿಯಾ
ಆಸ್ತೇದಗ್ಧಪಟನ್ಯಾಯಾತ್ ಕ್ರಿಯಾಮಾತ್ರಂ ಹಿನಕ್ರಿಯಾ

ಇಲ್ಲಿ ಹೇಳಿದಂತೆ ಐಕ್ಯನು ಆಚರಿಸುವ ಕ್ರಿಯೆಯು ಸುಟ್ಟುಹೋದವಸ್ತ್ರವು ಸೂತ್ರದಲ್ಲಿ ಇಳಿಬಿಟ್ಟುದು ನಿಜವಾದಂತೆ ಕಂಡರೂ ವಸ್ತ್ರವಾಗಿ ಉಪಯೋಗಕ್ಕೆ ಹೇಗೆ ಬರುವುದಿಲ್ಲವೋ ಹಾಗೆ ಐಕ್ಯನಾಚರಿಸುವ ಕ್ರಿಯೆಯು ತೋರಿಕೆಗೆಮಾತ್ರ ಇರುತ್ತದೆ ಇದೇ ಶಿವಾದ್ವೈತಭಕ್ತಿಯ ಯೋಗದ ಮುಖ್ಯಲಕ್ಷಣವಾಗಿದೆ. ೨೧ ನೆಯ ಸಂಧಿಯಲ್ಲಿ ಮುಂದೆ ಕೇವಲ ಲಿಂಗರೂಪನಾದವನು ಧಾರ್ಮಿಕದಲ್ಲಿ ಸ್ವತಂತ್ರನಾಗಿ ತನ್ನಲೀಲೆ ಯಂತೆ ವರ್ತಿಸುತ್ತಾನೆ. ಅದೂ ಒಂದುವಿಧವಾದ ಭಕ್ತಿಸ್ಥಲವೇ ಆಗಿದೆ ಈ ಭಕ್ತಿ ಸ್ಥಲದಲ್ಲಿಯೇ ಬಸವೇಶ್ವರನು ನಡೆದಿದ್ದಾನೆ ಎಂದು ತಿಳಿಯಲಿಕ್ಕೆ ಬರುವಂತೆ ಇದೆ. ಈ ಲೀಲೆಯಲ್ಲಿ ನಡಸಿದ ವರ್ತನವೆಲ್ಲವೂ ಲೀಲಾನಂದದ ಲಕ್ಷಣವೇ ಆಗಿದೆ ಇಂತಹ ಲೀಲಾಭಕ್ತನಿಗೆ ಲೌಕಿಕದ ಅಂಟುವಿಕೆಯು ಕಸಕಸಿಯ ಕಾಳಿನಷ್ಟು ಅಣುಮಾತ್ರ ವಾದರೂ ಇಲ್ಲ ಇದೇ ಸ್ವಲೀಲಾನಂದ ಭಕ್ತಿಸ್ಥಲ.

ಈ ಪ್ರಸ್ತಾವನೆಯ ನಾಲ್ಕನೆಯ ಪುಟದಲ್ಲಿ ಕಂಡ ಕಠೋಪನಿಷತ್ತಿನಲ್ಲಿನ "ಅವ್ಯಕ್ತಾತ್ತು ಪರಃ ಪುರುಷೋ ವ್ಯಾಪಕೋಽ ಲಿಂಗ ಏವಚ" ಎಂಬ ಪ್ರಮಾಣ ದಿಂದ ಪುರುಷನು ಅಲಿಂಗನು (ಚಿಹ್ನೆ ಇಲ್ಲದವನು) ಎಂದು ಹೇಳುವುದಾದರೆ ಆ ಅಭಿಪ್ರಾಯವೂ ಸಹಾ ಲಯಗಮನಾತ್ಮಕ ಸ್ವರೂಪ ಲಿಂಗದಲ್ಲಿಯೇ ಪರಿಣಮಿಸತ್ತದೆ. ಲಿಂಗವು ಅಲಿಂಗವೆಂದು ವೀರಶೈವ ಗ್ರಂಥಗಳಲ್ಲಿಯೂ ಸ್ಪಷ್ಟವಾಗಿ ಹೇಳಲ್ಪಟ್ಟಿದೆ.

ಈ ಲೇಖನದ ಏಳನೆಯ ಪುಟದಲ್ಲಿ ಧನಕಣದ (ಶಿವತತ್ವ) ಆಧಾರದಿಂದ ಋಣಕಣವು (ಶಕ್ತಿತತ್ವ) ನಡೆಯುತ್ತದೆ ಎಂಬ ಹೇಳಿಕೆಗೆ ಅನುಸಾರವಾಗಿ ಪಾರಮೇ ಶ್ವರ ತಂತ್ರದಲ್ಲಿ ಪ್ರಕೃತಿಯು ತಾನು ಸ್ವತಂತ್ರದಿಂದ ನಡೆಯುತ್ತಿದ್ದರೂ ಬೇರೆ ಬೇರೆ ರೂಪಗಳನ್ನು ತಾಳಿದರೂ ಶಿವನಿಗೆ ಅಧೀನವಾಗಿಯೇ ಆ ಕಾರ್ಯಗಳನ್ನು ನಡಸುತ್ತಿದೆ ಎಂದು ಹೇಳಲ್ಪಟ್ಟಿದೆ ಈ ದೆಸೆಯಿಂದ ಈಗಿನ ವಿಜ್ಞಾನಿಗಳ ಅಭಿಪ್ರಾಯವೂ ಪೂರ್ವಿಕ ಆಗಮದ ಅಭಿಪ್ರಾಯವೂ ಒಂದೇಸಮನಾಗಿ ಇದೆ ಎಂಬುದು ಸ್ಪಷ್ಟಪಡುತ್ತದೆ.

ಸಿದ್ಧಾಂತಶಾಸ್ತ್ರವಾದ ೨೮ ಆಗಮಗಳ ಹೆಸರು ಮತ್ತು ಅವುಗಳ ಶಾಖೆ ಮೊದ ಲಾದವುಗಳನ್ನು ತಿಳಿಸುವ "ತತ್ವಪಟಲ" ಎಂಬುದರ ಆ ದಿಭಾಗದಲ್ಲಿ "ವಂದೇ ಶಂಕರ ಮಾಪ್ತಮಾದ್ಯಮಮಲಂ" ಎಂಬುದಾಗಿ ಸರ್ವಾಂತರಸ್ಥನಾದ ಈಶ್ವರ ಅಥವ ಶಿವನನ್ನು ಸ್ತುತಿಸಿದ್ದಾರೆ. ಭಗವದ್ಗೀತೆಯಲ್ಲಿಯೂ ಸರ್ವಾಂತರಸ್ಥನಾಗಿ ಈಶ್ವರ ನಿದ್ದಾನೆ ಎಂದು ಹೇಳಲ್ಪಟ್ಟಿದೆ. (೧೩ನೆಯ ಅಧ್ಯಾಯ) ಕಠೋಪನಿಷತ್ತಿನಲ್ಲಿಯೂ "ಈಶಾನೋ ಭೂತ ಭವ್ಯಸ್ಯ ಸ ಏವಾದ್ಯಃ" ಎಂದಿದೆ. ಈ ದೆಸೆಯಿಂದ ಸರ್ವಾಂತರಸ್ಥ ನಾದ ನಿರಾಕಾರ ಶಿವನನ್ನೇ ಆದ್ಯದೇವನೆಂದು ಅತ್ಯಂತ ಪ್ರಾಚೀನ ಕಾಲದಲ್ಲಿ ಭಾವಿಸುತ್ತಿದ್ದರೆಂದು ಸ್ಪಷ್ಟಪಡುತ್ತದೆ ಈ ಶಿವನೇ ಲಿಂಗರೂಪನಾಗಿ, ವಿಶ್ವದ ಲಯಗ ಮನಗಳಿಗೆ ಮೂಲಾಧಾರನಾಗಿ, ತೋರಿಸಲ್ಪಟ್ಟವನಾಗಿದ್ದಾನೆ. ಈ ಶಿವನನ್ನೇ

ವೀರಶೈವರು ಪರವಸ್ತು (ಶ್ರೇಷ್ಠದೈವ) ಎಂದು ನಂಬಿದ್ದಾರೆ. ಈ ಪರವಸ್ತುವೇ ಗುರು, ಲಿಂಗ, ಜಂಗಮ, ಎಂಬ ಸಾಂಕೇತಿಕ ಪದಗಳಿಂದ ಕರೆಯಲ್ಪಟ್ಟು ಮೂರು ರೂಪಗಳಾಗಿ ವೀರಶೈವರಿಗೆ ಪೂಜ್ಯರಾಗಿದ್ದಾರೆ. ಇದು ಶಿವಾದ್ವೈತ ಭಾವನೆಯುಳ್ಳದ್ದೇ ಆಗಿದೆ.

ಇದೇ ಗ್ರಂಥದ ಕೊನೆಯ ಸಂಧಿಯ ಕಡೆಯ ಭಾಗದ ಒಂದು ಪದ್ಯದಲ್ಲಿ "ಸನ್ನಿಧೀಶ್ವರ ವದನ ಶಿವಶಕ್ತ್ಯನ್ವಯ ಸುಧಾಕರರ ಸಂಖ್ಯೆಯೊಳುನ್ನತ ಕ್ಷೇತ್ರಜ್ಞ ಸುಮನೋವಾದ ಪದ ಬಂಧಂ" ಎಂದು ಹೇಳಲ್ಪಟ್ಟಿರುವುದರಿಂದ ಈ ಗ್ರಂಥವು ಶಾಲಿವಾಹನ ಶಕ ೧೩೩೫ ಅಥವ ಕ್ರಿ. ಶ. 1413 ನೆಯ ವರ್ಷದಲ್ಲಿ ರಚಿಸಲ್ಪಟ್ಟಂತೆ ವ್ಯಕ್ತವಾಗುತ್ತದೆ. ಶಿವ ಅಥವ ಈಶ ಎಂಬ ಶಬ್ದಕ್ಕೆ ಈಶತ್ರಯ ಎಂಬದಾಗಿ ಮೂರು ಎಂಬ ಸಂಖೆಯನ್ನು ಲೆಕ್ಕಿಸುವ ರೂಢಿ ಇರುವುದಾಗಿ ಗೊತ್ತಾಗಿದೆ "ಸಿದ್ಧೇಶ್ವರ ವಚನ" ಎಂಬ ಗ್ರಂಥವು ಶ್ರೀ ನಿ. ಜ. ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳವರಿಂದ ರಚಿಸಲ್ಪಟ್ಟಿರುವುದರಲ್ಲಿ ೮ನೆಯ ವಚನದಲ್ಲಿ ಆ ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳವರ ಗುರುಗಳು ಶ್ರೀ ನಿ. ಜ. ಚನ್ನಬಸವೇಶ್ವರರೆಂದು ನಿರೂಪಿಸಿರುವುದರಿಂದ ಆ ಚನ್ನಬಸವೇಶ್ವರರೇ ಈ ಗ್ರಂಥ ಕರ್ತರೆಂದು ನಿರ್ಣಯಿಸಲಿಕ್ಕೆ ಬರುತ್ತದೆ. ತುಮಕೂರು ಡಿಸ್ಟ್ರಿಕ್ಟ್ ಎಡೆಯೂರಲ್ಲಿ ಸಮಾಧಿಸ್ಥರಾಗಿರುವ ಆ ಸಿದ್ಧಲಿಂಗಸ್ವಾಮಿಗಳವರ ಕಾಲವು ಕ್ರಿ. ಶ. 1470 ಎಂದು ಸಾಮಾನ್ಯವಾಗಿ ತಿಳಿಯಲ್ಪಟ್ಟಿರುವುದರಿಂದ ಅವರಿಗಿಂತ ಹಿಂದಿನವರು ಈ ಷಟ್‌ಸ್ಥಲ ಸಾರ್ವಭೌಮರಾದ (ಜಗದ್ಗುರು) ಈ ಚನ್ನಬಸವೇಶ್ವರ ಸ್ವಾಮಿಗಳೆಂದು ತಿಳಿಯಲನುಮಾನವಾರಿಗೂ ಬರಲಾರದು. ಅದೇ ತುಮಕೂರು ಡಿಸ್ಟ್ರಿಕ್ಟಿನ ಗುಬ್ಬಿ ಎಂಬ ಸ್ಥಳದಲ್ಲಿ ಈ ಚನ್ನಬಸವೇಶ್ವರರ ಸಮಾಧಿ ಇದೆ.

ಈ ಸ್ಥಲಗಳನ್ನೆಲ್ಲ ವಿಚಾರಿಸಿ ನೋಡಿಸಿದರೆ ಲೋಕದಲ್ಲಿ ಮಾನವರು ನಡೆಯುವಂತೆ ಕರ್ಮಮಾರ್ಗದಲ್ಲಿ ನಡೆಯುವ ಪದ್ಧತಿಯು ೪ನೆಯ ಪಿಂಡಜ್ಞಾನ ಸ್ಥಲದ ಆಚರಣೆಯ ವರೆವಿಗೆ ಗ್ರಹಿಸಲ್ಪಡಬೇಕಾಗುತ್ತದೆ. ಮುಂದೆ ನಾನು ಬ್ರಹ್ಮನೆಂಬ ಜ್ಞಾನವು ಉಂಟಾದರೂ ಕರ್ಮದಲ್ಲಿ ಮನುಷ್ಯನೆಂಬ ಭಾವನೆ ಬರುವುದನ್ನು ತಪ್ಪಿಸಬೇಕಾಗುತ್ತದೆ. ಹಾಗೆ ತಪ್ಪಿಸಿಕೊಂಡು ಲಿಂಗವನ್ನು ಧರಿಸುವಾಗ ಲಿಂಗ ಸ್ವರೂಪನೇ ಆಗುತ್ತಾನೆ. ಹೀಗೆ ಮಾನವನನ್ನು ದೇವನನ್ನಾಗಿ ಮಾಡುವ ವಿಚಿತ್ರವಾದ ರೀತಿಯು ವೀರಶೈವ ಧರ್ಮದಲ್ಲಿ ಹೇಳಲ್ಪಟ್ಟಿದೆ. ಈ ಧರ್ಮವನ್ನು ಯಾರಾದರೂ ಹೊಂದಬಹುದೆಂಬ ಸರ್ವಸಮತ್ವವೂ ಇದರಲ್ಲಿ ಅಡಗಿದೆ. ಒಬ್ಬನು ದುಡಿದುದು ಸರ್ವರಿಗೂ ವ್ಯಾಪಿಸುವುದೆಂಬ ಸಮಾಜ ಕಲ್ಯಾಣ ಗುಣವೂ ಇದರಲ್ಲಿ ತುಂಬಿದೆ. ಅಹಿಂಸೆ ದಯೆ ಮೊದಲಾದ ಪರೋಪಕಾರ ಗುಣಗಳು ಯಥೇಚ್ಛೆಯಾಗಿ

ತುಂಬಿವೆ ಈಗಿನ ಶಾಸ್ತ್ರವಿಜ್ಞಾನಿಯೂ ಒಂದು ವಿದ್ಯುದಣುವೇ ಎಲ್ಲ ವಸ್ತುಗಳಾಗಿ ಇರುವುದೆಂದು ಪ್ರಯೋಗದಿಂದ ತೋರಿಸುವಂತೆ ಪ್ರಾಣಿಯಾದ ಒಬ್ಬ ಮನುಷ್ಯನೂ ಪರವಸ್ತು ಅಥವಾ ಮೂಲವಸ್ತುವಾದ ಮಹಾದೇವನೇ ಆಗಿದ್ದಾನೆ, ಎಂದು ತೋರಿಸುವ ಧರ್ಮವೇ ಇದಾಗಿದೆ ಆದುದರಿಂದಲೇ ಈ ಶ್ರೇಷ್ಠವಾದ ಧರ್ಮವು ಜಗನ್ಮಾನ್ಯವೆಂದು ಗ್ರಹಿಸಬೇಕಾಗಿದೆ.

ಶ್ರೀಚನ್ನಮಲ್ಲಿಕಾರ್ಜುನ
ಪ್ರಕಾಶಕ ಸದ್ಧರ್ಮದೀಪಿಕೆ ಮೈಸೂರ

|| ಓಂ ಸಿದ್ಧಲಿಂಗ ಪರಬ್ರಹ್ಮಣೇ ನಮಃ ||

# ಮುನ್ನುಡಿಯು

"ಕ್ಷೇತ್ರಜ್ಞ ಸುಮನೋವಾದಂ" ಎಂಬ ಗ್ರಂಥದ ಮುನ್ನುಡಿಯನ್ನು ಬರೆಯುವ ಪೂರ್ವದಲ್ಲಿ ಅದರ ಹಿನ್ನೆಲೆಯನ್ನು ಸ್ವಲ್ಪ ವಿವರಿಸುವ. ಮೈಸೂರ ಓರಿಯೆಂಟಲ ಲಾಯಬ್ರರಿಯಿಂದ ಶ್ರೀ ಚೆನ್ನಮಲ್ಲಿಕಾರ್ಜುನರು ಸಂಪಾದಕ ಸದ್ಧರ್ಮ ದೀಪಿಕಾ ಇವರ ದ್ವಾರಾ ಬರೆಯಿಸಿ ತರಿಸಿದ ಈ ಪುಸ್ತಕವನ್ನು ಶ್ರೀಮನ್ನಿರಂಜನ ಜಗದ್ಗುರು ಗುರುಸಿದ್ಧರಾಜಯೋಗೀಂದ್ರ ಮಹಾಸ್ವಾಮಿಗಳವರು ಮೂರುಸಾವಿರಮಠ ಹುಬ್ಬಳ್ಳಿ ಅವರು ೧೯೫೭ ರಲ್ಲಿ ಈ ಗ್ರಂಥವು ಮುದ್ರಣ ಮಾಡಿಸಲಿಕ್ಕೆ ಯೋಗ್ಯವಿದೆಯೋ ಹೇಗೆ ಎಂಬುದನ್ನು ನಿರ್ಧರಿಸಲಿಕ್ಕಾಗಿ ನನ್ನ ಕಡೆಗೆ ಕೊಟ್ಟರು. ಈ ಪುಸ್ತಕದಲ್ಲಿ ಅಲ್ಲಲ್ಲಿ ಕೇವಲಾದ್ವೈತಿಗಳ ವಿಷಯವನ್ನು ಪೂರ್ವ ಪಕ್ಷವಾಗಿ ತೆಗೆದುಕೊಂಡು ಅದಕ್ಕೆ ಯುಕ್ತಿಪ್ರಮಾಣಾನುಭವಗಳಿಂದ ಸಮರ್ಪಕವಾಗಿ ಉತ್ತರಕೊಡುತ್ತ ಗ್ರಂಥಕಾರನು ಹೋಗಿರುವದರಿಂದಲೂ, ಪೂರ್ವಪಕ್ಷ ಸಿದ್ಧಾಂತಪಕ್ಷಗಳು ಬಹು ಸೂಕ್ಷ್ಮವಾಗಿ ಸೂತ್ರಗಳಿದ್ದಂತೆ ಇರುವುದರಿಂದಲೂ, ವೇದಾಂತ (ಕೇವಲಾದ್ವೈತ) ಮತ್ತು ಷಟ್‌ಸ್ಥಲಸಿದ್ಧಾಂತ ಈ ಮಾರ್ಗಗಳ ಯಥಾರ್ಥಾನುಭವವುಳ್ಳವರಿಗೆ ಮಾತ್ರ ಸುಲಭವಾಗಿ ಪೂರ್ವಪಕ್ಷ ಸಿದ್ಧಾಂತಪಕ್ಷಗಳು ಗೋಚರವಾಗುವವೇ ಹೊರತು ಸರ್ವಸಾಮಾನ್ಯರಿಗೆ ಗ್ರಂಥಕಾರನ ಸಿದ್ಧಾಂತವು ಸ್ಫುಟವಾಗಿ ತಿಳಿಯಲಾರದು. ಇದಲ್ಲದೇ ಆ ಸಮಯದಲ್ಲಿ ಶಂಕರಾಚಾರ್ಯರ ಕೇವಲಾದ್ವೈತವೂ, ವೀರಶೈವರ ಶಿವಾದ್ವೈತವೂ ಎರಡೂ ಒಂದೇ ಎಂಬ ವಾದವನ್ನು ಕೆಲವು ಪತ್ರಿಕಾಕರ್ತರು ತಮ್ಮ ಮಾಸಿಕಗಳಲ್ಲಿ ಜೋರಾಗಿ ಪ್ರಚಾರ ಮಾಡಲಿಕ್ಕೆ ಹತ್ತಿದ್ದರು. ಈ ಪತ್ರಿಕಾ ಕರ್ತರ ಅಪಸಿದ್ಧಾಂತವನ್ನು ವೀರಶೈವ ಪಂಡಿತರು ನಾನಾ ಮುಖವಾಗಿ ಖಂಡಿಸುತ್ತ ಬಂದಿದ್ದರೂ ಸಹ "ಅಜ್ಞಃ ಸುಖಮಾರಾಧ್ಯಃ ಸುಖತರ ಮರಾಧ್ಯತೇ ವಿಶೇಷಜ್ಞಃ। ಜ್ಞಾನಲವದುರ್ವಿದಗ್ಧಂ ಬ್ರಹ್ಮಾಪಿ ನರಂ ನ ರಂಜಯತಿ" ಎಂಬ ಅತ್ಯಂತ ನುರಿತ ಅನುಭವಿಯಾದ ಕವಿಯ ಮಾತಿನಂತೆ ಈ ಪತ್ರಿಕಾಕರ್ತರ ಪ್ರಚಾರವು ನಡೆದೇ ಇತ್ತು. ಇಂತಹ ಅಪಸಿದ್ಧಾಂತ ಪ್ರಚಾರಕರ ಕಾರ್ಯಕ್ಕೆ ಈ ಕ್ಷೇತ್ರಜ್ಞ ಸುಮನೋವಾದದ ಮುದ್ರಣದಿಂದ ಸಹಾಯವಾಗಬಹುದೋ ಎಂಬ ಸಂದೇಹವು ಶ್ರೀ ಜಗದ್ಗುರುಗಳವರ ಮನದಲ್ಲಿ ಸ್ವಲ್ಪ ಅಂಕುರಿಸಿತ್ತು ಆದುದರಿಂದಲೇ ಈ ಗ್ರಂಥವನ್ನು ಚನ್ನಾಗಿ ವಿಮರ್ಶೆಮಾಡಿಸಿ ವೀರಶೈವ ಸಿದ್ಧಾಂತಕ್ಕೆ ಇದರಿಂದ

ಬಾಧೆ ಬರಲಾರದೆಂಬುದನ್ನು ಪೂರ್ಣ ಮನಗಂಡು ಮುದ್ರಣ ಮಾಡಿಸಬೇಕೆಂಬುವ ಉದ್ದೇಶದಿಂದಲೇ ಇದನ್ನು ನನ್ನ ಕಡೆಗೆ ಕೊಟ್ಟಿದ್ದರು. ಈ ಗ್ರಂಥದ ಕೆಲವು ಕೆಲವು ಭಾಗಗಳನ್ನು ನಾನು ಗದುಗಿನಲ್ಲಿದ್ದೇ ವಿಮರ್ಶೆಮಾಡುತ್ತಲಿದ್ದೆನು.

ಸನ್ ೧೯೫೪ ಜುಲೈ ತಿಂಗಳಿಂದ ಶ್ರೀ ಜಗದ್ಗುರು ಮೂರುಸಾವಿರ ಮಠದಲ್ಲಿ ಧರ್ಮ ಗ್ರಂಥ ಸಂಶೋಧನ ಕಾರ್ಯವನ್ನೂ ಮತ್ತು ಸಂಸ್ಕೃತ ಕಾಲೇಜಿನ ಪಾಠ ಕ್ರಮವನ್ನು ನಡೆಯಿಸುವ ನಿಮಿತ್ತವಾಗಿ ನಾನು ನಿಯೋಜಿತನಾದ ಬಳಿಕ ಈಗಿನ ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾ ಸ್ವಾಮಿಗಳವರು ಹಿಂದಿನ ಜಗದ್ಗುರುಗಳಿಗೆ ಅತ್ಯಂತ ಪ್ರಿಯವಾದ ಕ್ಷೇತ್ರಜ್ಞ ಸುಮನೋವಾದದ ಮುದ್ರಣವೇ ಧರ್ಮಗ್ರಂಥ ಪ್ರಚಾರಕ ಮಂಡಲದ ಮೊದಲನೆಯ ಕಾರ್ಯವಾಗಬೇಕೆಂದು ಅಪ್ಪಣೆ ಮಾಡಿದರು. ಆಗ ಇದರ ಸಂಶೋಧನ ಕಾರ್ಯವು ಪ್ರಾರಂಭವಾಯಿತು.

ಯಾವುದಾದರೊಂದು ಗ್ರಂಥವನ್ನು ಸಂಶೋಧನೆ ಮಾಡಬೇಕಾದರೆ ಆ ಗ್ರಂಥದ ಮೂರು ನಾಲ್ಕು ಪ್ರತಿಗಳನ್ನು ಬೇರೆ ಬೇರೆ ಭಾಗಗಳಿಂದ ಸಂಗ್ರಹಿಸಿ ಎಲ್ಲವನ್ನು ಮುಂದಿಟ್ಟುಕೊಂಡು ಇಬ್ಬರು ಮೂವರು ಸೇರಿ ಸಂಶೋಧಿಸುವ ಪದ್ಧತಿಯುಂಟು. ಆದರೆ ಈ ಕ್ಷೇತ್ರಜ್ಞ ಸುಮನೋವಾದದ ಸಂಶೋಧನೆಯಲ್ಲಿ ಬೇರೆ ಬೇರೆ ಪ್ರತಿಗಳು ದೊರೆಯಲೇ ಇಲ್ಲ. ಇದ್ದುದೊಂದು ಕೈಬರಹದ ಪ್ರತಿಯಾದರೂ ಮೂಲ ಓಲೆಗರಿಯ ಪ್ರತಿಯು ಬಹಳ ಜೀರ್ಣವಾದುದಿರುವದರಿಂದ ಅಲ್ಲಲ್ಲಿ ತ್ರುಟಿತ (ಮುರಿದ)ವಾಗಿದ್ದುದ ರಿಂದಲೂ, ಅದನ್ನು ಪ್ರತಿ ಮಾಡಿದ ಬರಹಗಾರನಿಗೆ ಅರ್ಥಜ್ಞಾನವಿಲ್ಲದುದರಿಂದಲೂ, ನೈಸರ್ಗಿಕವಾದ ಮಾನವನ ದೃಷ್ಟಿದೋಷ ಮತ್ತು ಹಸ್ತದೋಷದಿಂದಲೂ ಬಹಳ ಕಡೆಗೆ ಅನೇಕ ಲೋಪ ದೋಷಗಳಿಂದ ಕೂಡಿದ್ದುದಾಗಿರುತ್ತದೆ. ಇಂತಹ ಪರಿಸ್ಥಿತಿ ಯಲ್ಲಿ ಸಂಸ್ಕೃತದ ವೀರಶೈವಾನಂದ ಚಂದ್ರಿಕೆ ಮುಂತಾದ ಗ್ರಂಥಗಳಂತೆ ಪೂರ್ವ ಪಕ್ಷ ಉತ್ತರ ಪಕ್ಷಗಳಿಂದ ಪರಸಿದ್ಧಾಂತವನ್ನು ಖಂಡಿಸಿ ಸ್ವಸಿದ್ಧಾಂತವನ್ನು ಮಂಡಿಸು ವಂತಹ ಅಪ್ರತಿಮವಾದ ಪ್ರೌಢ ಗ್ರಂಥವು ಕನ್ನಡದಲ್ಲಿ ಇದೊಂದೇ ಎಂದು ನನಗೆ ಮಾತ್ರಭಾಸವಾದುದರಿಂದ ಈ ಗ್ರಂಥವನ್ನು ಅಚ್ಚುಕಟ್ಟಾಗಿಯೂ ಸುಂದರವಾಗಿಯೂ ಪರಿಶುದ್ಧವಾಗಿಯೂ ಮುದ್ರಿಸಬೇಕೆಂಬ ಕುತೂಹಲದಿಂದ ಇದರ ಸಂಶೋಧನೆಯನ್ನು ಒಬ್ಬರೆ ಮಾಡುವದು ಸರಿಯಾದುದಾಗಲಾರದೆಂದು ಭಾವಿಸಿ ಮುದ್ರಣವು ಪ್ರಾರಂಭ ವಾಗುವದಕ್ಕಿಂತಲೂ ಪೂರ್ವದಲ್ಲಿ ಶ್ರೀ ನಿ. ಪ್ರ. ಶಿವಬಸವ ಸ್ವಾಮಿಗಳು ಹೊಸಮಠ ಹುಬ್ಬಳ್ಳಿ ಶ್ರೀ ಚನ್ನಮಲ್ಲಿಕಾರ್ಜುನರು ಸದ್ಧರ್ಮದೀಪಿಕಾ ಸಂಪಾದಕರು ಮೈಸೂರು ಮತ್ತು ನಾನು ಮೂರು ಜನರು ಒಂದು ಕಡೆಗೆ ಸೇರಿ ಗ್ರಂಥವನ್ನು ನೋಡಲಿಕ್ಕೆ ಪ್ರಾರಂಭಿಸಿದೆವು. ಖಂಡನ ಮಂಡನವುಳ್ಳ ವಾದಗ್ರಸ್ತಭಾಗಗಳನ್ನು ಸರಿಮಾಡಿ

ಕೊಂಡರೆ ಸ್ವಸಿದ್ಧಾಂತ ಪ್ರತಿಪಾದಕವಾದ ಭಾಗವು ತಾನಾಗಿಯೇ ಗೋಚರವಾಗುವದೆಂದು ಭಾವಿಸಿ ಕೆಲವು ಭಾಗಗಳನ್ನು ಮಾತ್ರ ಕೆಲವು ದಿನಗಳ ವರಗೆ ನೋಡೋಣವಾಯಿತು. ಇದಲ್ಲದೆ ನಮ್ಮಲ್ಲಿದ್ದ ಕೈಬರಹದ ಪ್ರತಿಯನ್ನೇ ನೋಡಿ ನಾಲ್ಕಾರು ಪ್ರತಿಗಳನ್ನು ಬರೆಯಿಸಿ ಕನ್ನಡದಲ್ಲಿ ತಜ್ಞರೆಂದು ಹೆಸರುವಾಸಿಗಳಾದ ಕೆಲವು ಪ್ರಮುಖ ಜನರ ಕಡೆಗೆ ಪ್ರತ್ಯೇಕ ರಜಿಷ್ಟರ ಮಾಡಿ ಕಳುಹಿಸಿಕೊಟ್ಟು ಸಾಧ್ಯವಾದ ಮಟ್ಟಿಗೆ ಇದರಲ್ಲಿಯ ಲೋಪದೋಷಗಳನ್ನು ಸರಿಮಾಡಿ ಕಳಿಸಬೇಕೆಂದು ಬಿನ್ನವಿಸಲಾಯಿತು. ಇವರಲ್ಲಿ ಪಂ. ವೈ. ನಾಗೇಶಶಾಸ್ತ್ರಿಗಳು ಬಳ್ಳಾರಿ ಇವರೊಬ್ಬರನ್ನು ಬಿಟ್ಟು ಉಳಿದ ಯಾರಿಂದಲೂ ಪ್ರತಿಫಲವು ದೊರೆಯಲಿಲ್ಲವಾದುದರಿಂದ ಅವರ ಹೆಸರನ್ನು ಪ್ರಕಟಿಸಲು ಬಯಸುವದಿಲ್ಲ. ಬಳ್ಳಾರಿ ಪಂ. ವೈ. ನಾಗೇಶಶಾಸ್ತ್ರಿಗಳ ಸಲಹೆ ಸೂಚನೆಗಳು ಮಾತ್ರ ಆಗಾಗ ದೊರೆಯುತ್ತಲಿದ್ದವು ಅವರ ಉಪಕಾರವು ಚಿರಸ್ಮರಣೆಯವಾಗಿದೆ. ಒಂದೆ ಕಡೆಗೆ ಸೇರಿ ಗ್ರಂಥಾವಲೋಕನ ಮಾಡಿದ ನಮ್ಮ ಮೂವರಲ್ಲಿ ಶ್ರೀ ಚನ್ನಮಲ್ಲಿಕಾರ್ಜುನರು "ಗ್ರಂಥಕಾರನು ಯಾವ ಶಬ್ದಗಳನ್ನೇ ಪ್ರಯೋಗಿಸಿರಲಿ ಬರಹಗಾರನ ದೋಷದಿಂದ ಅದು ಸರಿಇಲ್ಲವೆಂದು ಕಂಡು ಬಂದರೆ ಪ್ರಕೃತ ಸಂದರ್ಭದಲ್ಲಿ ಅರ್ಥಕ್ಕೆ ಅನುಗುಣವಾಗಿ ಶಬ್ದಗಳನ್ನು ಬದಲಾಯಿಸಿ ಕೊಳ್ಳಬೇಕು. ಅಕಸ್ಮಾತ್ ಪ್ರಾಸಿಗೆ ಲೋಪವಾದರೂ ಅಡ್ಡಿಯಿಲ್ಲ ಅರ್ಥಸರಿ ಹೋದರೆ ತೀರಿತು" ಎಂಬ ಅಭಿಪ್ರಾಯವುಳ್ಳವರು. ಇದು ನನಗೆ ಸಮ್ಮತವಾದ ಮಾರ್ಗವಾಗಿ ತೋರಲಿಲ್ಲ. "ಅ ಪ್ರ ತಿ ಮ ತತ್ತ್ವವೇತ್ತನಾದ ಗ್ರಂಥಕಾರನು ಪ್ರಯೋಗಿಸಿದ ಶಬ್ದಗಳನ್ನು ಅಲಕ್ಷಿಸುವದು ನ್ಯಾಯವಾದುದಲ್ಲ. ಬರಹಗಾರನ ದೋಷದಿಂದ ಅರ್ಥವು ಸರಿಯಾಗಿ ಭಾಸವಾಗದಿದ್ದಾಗ ಪ್ರಯೋಗಿಸಿದ ಮೂಲ ಶಬ್ದಗಳಿಂದಲೇ ಅರ್ಥವನ್ನು ಸರಿಪಡಿಸಿಕೊಳ್ಳಬೇಕು;, ಎಂಬುದು ನನ್ನ ಮತವು. ಆದುದರಿಂದ ಮುದ್ರಣವು ಪ್ರಾರಂಭವಾದನಂತರ ಸಂದೇಹ ಬಂದ ಪದ್ಯಗಳನ್ನು ಆರಿಸಿ ತೆಗೆದು ಮೂಲಪ್ರತಿಯಿರುವ ಮೈಸೂರ ಓರಿಯಂಟಲ್ ಲಾಯಬ್ರರಿಯ ರಿಸರ್ಚ ಅಧಿಕಾರಿಗಳಿಗೇನೇ ಬಿನ್ನವಿಸಿಕೊಂಡು ಮೂಲಪ್ರತಿಯಲ್ಲಿದ್ದಂತೆ ಪದ್ಯಗಳನ್ನು ಬರೆಯಿಸಿ ತರಿಸಿರುತ್ತೇನೆ. ಈ ಕಾರ್ಯದಲ್ಲಿ ನಮಗೆ ಶ್ರೀ ವಿದ್ವಾನ್ ಎಮ್. ಎಸ್. ಬಸವರಾಜಯ್ಯ ರಿಸರ್ಚ ಅಸಿಸ್ಟೆಂಟ ಓರಿಯಂಟಲ್ ಲಾಯಬ್ರರಿ ಮೈಸೂರ ವಿಶ್ವವಿದ್ಯಾಲಯ ಮೈಸೂರು ಇವರು ತುಂಬಾ ಸಹಾಯಕರಾಗಿದ್ದಾರೆ. ನಾವು ಕೇಳಿದ ಸಮಯದಲ್ಲೆಲ್ಲ ಸ್ವಲ್ಪೂ ಅಲಕ್ಷ ಮಾಡದೇ ಯಾವ ಪ್ರತಿಫಲಾಪೇಕ್ಷೆ ಇಲ್ಲದೆ ನಾನು ಸೂಚಿಸಿದ ಪ್ರತಿಯೊಂದು ಪದ್ಯವನ್ನು ಮೂಲ ಪ್ರತಿಯಿಂದ ಬರೆಯಿಸಿ ತ್ರುಟಿತ ಭಾಗಗಳ ಬಗ್ಗೆ ಕೆಲವು ಸಲಹೆ ಸೂಚನೆಗಳನ್ನು ಮಾಡಿ ಕಳುಹಿಸುತ್ತಾ ಬಂದಿರುವರು. ಅನಿಮಿತ್ತ ಬಂಧುಗಳಾದ ಇವರ ಅನನ್ಯ ಸದೃಶವಾದ ಅಕೃತ್ರಿಮ ಪ್ರೇಮವು ಸದಾಸಂಸ್ಮರಣೀಯವಾಗಿದೆ.

## ಗ್ರಂಥದ ಮಹತ್ವ

ವೀರಶೈವ ಸಿದ್ಧಾಂತವನ್ನು ಪರಮತನಿರಾಕರಣ ಪೂರ್ವಕವಾಗಿ ಯುಕ್ತಿ ಪ್ರಮಾಣಾನುಭವಗಳಿಂದ ಬಹು ಸೂಕ್ಷ್ಮವಾಗಿ ಪ್ರತಿಪಾದಿಸುವ ಈ ಗ್ರಂಥಕ್ಕೆ "ಕ್ಷೇತ್ರಜ್ಞ ಸುಮನೋವಾದಂ" ಎಂದು ಗ್ರಂಥಕಾರರು ಹೆಸರಿಟ್ಟಿರುವರು. ಕ್ಷೇತ್ರಜ್ಞನೆಂದರೆ ಯಾರು ಸುಮನನೆಂದರೆ ಯಾರು ಎಂಬುದನ್ನು ಗ್ರಂಥಕಾರರು ಒಂದನೆ ಮತ್ತು ಎರಡನೆಯ ಸಂಧಿಯಲ್ಲಿ ವಿಸ್ತಾರವಾಗಿ ವಿವರಿಸುವರು. ಅದರ ಸಾರವನ್ನೇ ವಾಚಕರ ಅವಗಾಹನೆಗಾಗಿ ಕೆಳಗೆ ತೋರಿಸಿರುವೆವು.

## ತಾತ್ವಿಕ ವಿಭಾಗ

ಆತ್ಮರು

ಶಿವ(ಅಂತರಾತ್ಮ)ಕ್ಷೇತ್ರಜ್ಞ, ಕರ್ತಾರ, ಭಾವ, ಚೈತನ್ಯ ಅಂತರ್ಯಾಮಿ

ಭೂತಗಳು

ಆತ್ಮ ಆಕಾಶ ವಾಯು ಅಗ್ನಿ ಅಪ್ ಪೃಥಿವೀ

ಅಂತಃಕರಣ

ಸದ್ಭಾವ ಸುಜ್ಞಾನ ಸುಮನ ನಿರಹಂಕಾರ ಸುಬುದ್ಧಿ ಸುಚಿತ್ತ

ವಿಷಯ

ತೃಪ್ತಿ ಶಬ್ದ ಸ್ಪರ್ಶ ರೂಪ ರಸ ಗಂಧ

ಜ್ಞಾನೇಂದ್ರಿಯ

ಹೃದಯ ಶ್ರವಣ ತ್ವಕ್ ಚಕ್ಷು ರಸನಾ ಘ್ರಾಣ

ಕರ್ಮೇಂದ್ರಿಯ

ಮನನ ವಾಕ್ ಪಾಣಿ ಪಾದ ಗುಹ್ಯ ಗುದ

ಲಿಂಗಗಳು

ಮಹಾಲಿಂಗ ಪ್ರಸಾದಲಿಂಗ ಜಂಗಮಲಿಂಗ ಶಿವಲಿಂಗ ಗುರುಲಿಂಗ ಆಚಾರಲಿಂಗ

ಅಂಗಗಳು

ಐಕ್ಯ ಶರಣ ಪ್ರಾಣಲಿಂಗಿ ಪ್ರಸಾದಿ ಮಹೇಶ್ವರ ಭಕ್ತ

ಶಕ್ತಿಗಳು

ಚಿಚ್ಛಕ್ತಿ ಪರಾಶಕ್ತಿ ಆದಿಶಕ್ತಿ ಇಚ್ಛಾಶಕ್ತಿ ಜ್ಞಾನಶಕ್ತಿ ಕ್ರಿಯಾಶಕ್ತಿ

ಭಕ್ತಿಗಳು

ಸಮರಸಭಕ್ತಿ ಆನಂದಭಕ್ತಿ ಅನುಭವಭಕ್ತಿ ಸಾವಧಾನಭಕ್ತಿ ನಿಷ್ಠಾಭಕ್ತಿ ಶ್ರದ್ಧಾಭಕ್ತಿ

ಇತ್ಯಾದಿಯಾದ ಈ ತಾತ್ವಿಕ ವಿಭಾಗದಿಂದ ಕಂಡು ಬರುವದೇನಂದರೆ ಐಕ್ಯಸ್ಥಲದಲ್ಲಿರುವ ಆತ್ಮನು ತಾನೇ ತಾನಾಗಿರುವದರಿಂದ ಬೋಧಕನಾಗಿ ಬೋಧಿಸುವದು ಸಾಧ್ಯವಿಲ್ಲ ಆದ್ದರಿಂದ ಶರಣಸ್ಥಲದಲ್ಲಿರುವ ಆತ್ಮನು ಬೋಧಕನಾಗಿರುವನು. ಶರಣಸ್ಥಲ ಮತ್ತು ಆಕಾಶ ತತ್ವ ಇವಕ್ಕೆ ಸಂಬಂಧಪಟ್ಟ ಆತ್ಮನೇ ಕ್ಷೇತ್ರಜ್ಞನು. ಆಕಾಶದಿಂದುದಯವಾದ ವಾಯುತತ್ವಕ್ಕೆ ಸಂಬಂಧಪಟ್ಟ ಅಂತಃಕರಣವೇ ಸುಮನವು. ಕ್ಷೇತ್ರಜ್ಞ (ಕಾಯದ ಜೀವದ ಹೊಲಿಗೆಯನ್ನು ಬಲ್ಲ) ಮಹಾಜ್ಞಾನಿಯಾದ ಗುರುವು, ಜನ್ಮ ಜನ್ಮಾಂತರದಲ್ಲಿ ಮಾಡಿದ ಪುಣ್ಯದರಾಶಿಯಿಂದ ಶುದ್ಧಾಂತಃಕರಣನಾದ ಸುಮನನಿಗೆ ತತ್ವಬೋಧೆಯನ್ನು ಪ್ರಶ್ನೋತ್ತರ ರೂಪದಿಂದ ಮಾಡಿದುದು ಎಂಬರ್ಥವು ಕ್ಷೇತ್ರಜ್ಞ ಸುಮನೋವಾದಂ ಎಂಬ ಹೆಸರಿನಿಂದ ಪ್ರಕಟವಾಗುತ್ತದೆ. ಅರ್ಥಾತ್ ಕಾಯದ ಜೀವದ ಹೊಲಿಗೆಯನ್ನು ಬಿಡಿಸಬಲ್ಲ ಮಹಾನುಭಾವಿಯಾದವನಿಗೂ ಪರಿಶುದ್ಧವಾದ ತನ್ನ ಮನಸ್ಸಿನಲ್ಲಿಯೂ ಸಹ ಒಮ್ಮೊಮ್ಮೆ ಆವಿರ್ಭವಿಸುವ ಬೇರೆ ಬೇರೆ ಸಿದ್ಧಾಂತಗಳ ಸಂಕಲನದಿಂದುಂಟಾಗುವ ಸಂದೇಹಗಳನ್ನು ತಾನೇ ಪರಿಹರಿಸಿಕೊಂಡಿರುವನೆಂದು ಗ್ರಹಿಸಿದರೂ ತಪ್ಪಾಗಲಾರದು. ಅಂತೆಯೇ ಕವಿಯು ಒಂದೊಂದು ಕಡೆಯಲ್ಲಿ ಕ್ಷೇತ್ರಜ್ಞ ಸುಮನಃ ಕದನದೊಳು ಎಂದು ಕದನ ಶಬ್ದವನ್ನು ಪ್ರಯೋಗಿಸಿರುವನು. ಇದರಿಂದ ಆತ್ಮನು ತನ್ನ ಮನಸ್ಸಿನೊಡನೆ ಹೊಡೆದಾಡಿದ್ದು ಎಂಬ ಅರ್ಥವು ಸ್ಫುಟವಾಗಿ ತೋರುವದು.

## ತತ್ವಶಾಸ್ತ್ರದ ಉಗಮ

ಆತ್ಮನು ಮನಸ್ಸಿನೊಡನೆ ಹೊಡೆದಾಡಲಿಕ್ಕೆ ಕಾರಣವು ನಾನಾ ಮುಖವಾಗಿ ಮುಂದೆ ಬಂದು ನಿಲ್ಲುತ್ತದೆ. ಹೇಗೆಂದರೆ ಜೀವಾತ್ಮರೆಲ್ಲರೂ "ನಾನು ನಾನು" ಎಂದು ವ್ಯವಹರಿಸುತ್ತಿರುವರಲ್ಲಾ ಈ ನಾನು ಎಂಬ ಶಬ್ದದಿಂದ ಕರೆಯಿಸಿಕೊಳ್ಳುವ ಜೀವನು ತನ್ನ ಸ್ವರೂಪವೇನು ತಾನು ಎಲ್ಲಿಂದ ಬಂದವನು ಮತ್ತು ಎಲ್ಲಿಗೆ ಹೋಗುತ್ತಿರುವವನು ಇತ್ಯಾದಿಯಾದ ತನ್ನ ನೆಲೆಯನ್ನು ತಾನು ತಿಳಿಯದೆ ವ್ಯವಹಾರದಲ್ಲಿ ನುಗ್ಗಿಬಿಟ್ಟರೆ ಅವನ ವ್ಯವಹಾರವೆಲ್ಲ ಗಟ್ಟಿಯಾದ ತಳಹದಿ ಇಲ್ಲದೆ ಕಟ್ಟುತ್ತಿರುವ ಮಂದಿರದಂತೆ ತ್ವರಿತದಲ್ಲಿಯೇ ನಷ್ಟವಾಗುತ್ತ ನಿರಾಶೆಯನ್ನುಂಟು ಮಾಡುವದು. ಇದಲ್ಲದೆ ನಮಗೆ ಕಾಣುವ ಈ ಜಗತ್ತು ಯಾವಾಗಲೂ ಒಂದೇ ರೂಪದಲ್ಲಿಲ್ಲದೆ ಒಮ್ಮೆ ಸುಖ ರೂಪವನ್ನು ಮತ್ತೊಮ್ಮೆ ದುಃಖ ರೂಪವನ್ನೂ ತಾಳುವುದೇಕೆಂಬುದನ್ನು ನಾವು ಎಂದಾದರೂ ವಿಮರ್ಶಿಸಿ ಈ ಜಗತ್ತಿನ ಆಗು ಹೋಗುಗಳನ್ನೆಲ್ಲಾ ತೂಕಕ್ಕೆ ಹಾಕಿ ನೋಡಿರುವೆವೋ ? ನಮ್ಮ ಸ್ಥಿತಿಯು ಗಿಲೀಟಿನ ಒಡವೆಗಳನ್ನೇ ನಿಜವಾದ ಆಭರಣಗಳೆಂದು ತಿಳಿದು ನಡೆಯುವವನ ಗತಿಯಂತೆ ಆಗಿರುವದೆಂದು ನಮ್ಮ ಮನಸ್ಸು ಪದೇ ಪದೇ ಎಚ್ಚರಿಸುತ್ತಲೇ ಇರುವದು.

ಹೀಗೆ ಜೀವ ಮತ್ತು ಜಗತ್ತಿನ ವಿಷಯವನ್ನು ವಿಚಾರಿಸುತ್ತಿರುವಾಗ ಇನ್ನೊಂದರ ವಿಚಾರವು ಮುಂದೆ ಬಂದು ನಿಲ್ಲುತ್ತದೆ. ಅದೇನಂದರೆ ಇಂತಹ ಚಿತ್ರ ವಿಚಿತ್ರವಾದ ಜಗತ್ತು ಯಾರಿಂದ ನಿರ್ಮಾಣವಾಯಿತು ಎಂದಿನಿಂದ ಪ್ರಕಟವಾಯಿತು. ಇದನ್ನು ನಿರ್ಮಾಣ ಮಾಡುವ ಕಾರಣವೇನು— ಕುಂಬಾರನು ಮಣ್ಣಿನಿಂದ ಗಡಿಗಿ ಮಡಿಕೆಗಳನ್ನು ಮಾಡುವಂತೆ ಜಗತ್ಕರ್ತೃವು ಈ ಜಗತ್ತನ್ನು ಯಾವ ಸಾಧನ ಸಾಮುಗ್ರಿಗಳಿಂದ ನಿರ್ಮಿಸಿರುವನು. ಅವನ ಸ್ವರೂಪವೇನು ಅವನನ್ನು ಕಾಣುವ ಬಗೆ ಹೇಗೆ? ಇತ್ಯಾದಿ ವಿಚಾರ ತರಂಗಗಳು ದೇವರ ವಿಷಯದಲ್ಲಿ ಉಂಟಾಗುತ್ತವೆ.

ಜೀವ, ಜಗತ್ತು, ಮತ್ತು ಈಶ್ವರ ಈ ಮೂರರ ಯಥಾರ್ಥ ಜ್ಞಾನವನ್ನು ಮಾಡಿಕೊಳ್ಳುವದು ಪ್ರತಿಯೊಬ್ಬ ಮಾನವನ ಮುಖ್ಯ ಕರ್ತವ್ಯವಾಗಿದೆ. ಆದರೆ ಮಾನವನು ತನ್ನ ಬುದ್ಧಿ ಬಲದಿಂದ ಈ ಮೂರರ ಸತ್ಯಸ್ವರೂಪವನ್ನು ಅರಿತುಕೊಳ್ಳುವನೆಂಬುದು ಸಾಧ್ಯವಾಗದ ಮಾತು. ಏಕೆಂದರೆ ಇಂದ್ರಿಯಗಳಿಗೆ ಗೋಚರವಾಗುವ ವಿಷಯದಲ್ಲಿ ಬುದ್ಧಿಯು ತನ್ನ ಸಾಮರ್ಥ್ಯವನ್ನು ಸ್ವಲ್ಪ ತೋರಿಸಬಹುದು. ಮೇಲಿನ ಮೂರರಲ್ಲಿ ಜೀವ ಮತ್ತು ಈಶ್ವರ ಎಂಬೆರಡು ಅಂಥವುಗಳಲ್ಲವೇ ಅಲ್ಲ. ಜೀವನಿರುವ ಶರೀರವು ಕಣ್ಣೆದುರಿಗೆ ಕಾಣಬಹುದು. ಆದರೆ ಅದು ಜೀವನ ಸ್ವರೂಪವಲ್ಲ. ಶರೀರಕ್ಕೆ ಶಕ್ತಿಯನ್ನು ಕೊಡುತ್ತ ಶಾರೀರಿಕ ಕ್ರಿಯೆಗಳನ್ನೆಲ್ಲಾ ಮಾಡಿಸುವಂಥ ಒಳಗಿರುವ ಚೈತನ್ಯವೇ ಜೀವನ ಸ್ವರೂಪವು. ತನ್ನನ್ನು ತಾನು ಕಾಣಲರಿಯದ ಕಣ್ಣು ತನ್ನ ಬೆನ್ನ ಹಿಂದಿರುವ ಜೀವನನ್ನು ಹೇಗೆ ಕಾಣಬಲ್ಲದು. ಈಶ್ವರನಂತು ಕೇವಲ ಪುರಾಣದ ವ್ಯಕ್ತಿಯಾಗಿರುವನೇ ಹೊರತು ಎಲ್ಲಿಯೂ ಯಾರ ಕಣ್ಣೆದುರಿಗೂ ಬಂದು ವ್ಯವಹಾರಮಾಡಿದ್ದು ಕಂಡು ಬಂದಿಲ್ಲ. ಹೀಗೆ ಇಂದ್ರಿಯಗಳಿಗೆ ಗೋಚರವಾಗದ ಜೀವ ಮತ್ತು ಈಶ್ವರ ಎಂಬೆರಡು ವಸ್ತುಗಳ ಬಗ್ಗೆ ಬುದ್ಧಿಯ ಆಟವು ನಡೆಯಲಾರದು. ಜಗತ್ತೆಂಬುದು ಇಂದ್ರಿಯಗಳಿಗೆ ಕಾಣತಕ್ಕದ್ದೇನೋ ನಿಜ ಆದರೆ ಇಷ್ಟರಿಂದಲೇ ಬುದ್ದಿಯು ಜಗತ್ತನ್ನು ತೂಕಕ್ಕೆ ಹಾಕಿ ಎತ್ತಿ ಹಿಡಿಯಲಾರದು. ಏಕೆಂದರೆ ಜಗತ್ತಿನಲ್ಲಿಯೇ ಅಂತರ್ಗತವಾಗಿರುವ ಮಾನವನ ಇರುವಿಕೆಯು ಮಹಾಕಾಶದಲ್ಲಿ ತೇಲಾಡುವ ಪರಮಾಣುವಿನಂತೆ ಅಲ್ಪವಾಗಿರುವದು. ಇಂಥ ಅಲ್ಪವಾದ ಮಾನವನ ಶಕ್ತಿಯು ಜಗತ್ತನ್ನು ತೂಗಲು ಹೇಗೆ ಸಮರ್ಥವಾದೀತು. ಜಗತ್ತು ಹುಟ್ಟಿದಮೇಲೆ ತಲೆ ಎತ್ತಿರುವ ಮಾನವನ ಬುದ್ಧಿಯು ಜಗತ್ತು ಹುಟ್ಟುವದಕ್ಕಿಂತ ಮುಂಚೆ ಇದ್ದ ಸ್ಥಿತಿಯನ್ನು ನಿರ್ಧರಿಸಲು ತಾನೊಂದೇ ಪ್ರಯತ್ನ ಮಾಡುವದು ಸಾಹಸದ ಮಾತೇ ಸರಿ.

ಓಹೋ ನಿಲ್ಲಿರಿ ಈ ಇಪ್ಪತ್ತನೆಯ ಶತಮಾನದಲ್ಲಿ ಅನೇಕ ಭೌತಿಕ ಶಾಸ್ತ್ರಜ್ಞರು ಇಂದ್ರಿಯಗಳಿಗೆ ಗೋಚರವಾಗುವ ಈ ಜಗತ್ತಿನ ಹಾಸುಹೊಕ್ಕು

ಗಳನ್ನೆಲ್ಲಾ ಕಾಣುವ ಕಾರ್ಯಕ್ಕೆ ಕೈಹಾಕಿ ಎಷ್ಟೋದೂರ ಮುಂದುವರಿದಿರುವರಲ್ಲಾ ಎಂದು ಯಾರಾದರೂ ಕೇಳಬಹುದು, ಈ ಪ್ರಶ್ನೆಗೆ ಇದೊಂದೇ ಉತ್ತರವು. ಅನಂತಾನಂತ ಶಕ್ತಿಗಳನ್ನು ತಮ್ಮೊಳಗೆ ಅಡಿಗಿಸಿಕೊಂಡಿರುವ ಪೃಥಿವೀ ಆಪ್, ತೇಜ, ವಾಯು, ಆಕಾಶ ಎಂಬ ಪಂಚಭೂತಗಳಲ್ಲಿ ಪೃಥ್ವಿಯಲ್ಲಿ ಸುಪ್ತವಾಗಿದ್ದ ಸಸ್ಯಸಂವರ್ಧನಾದಿ ಶಕ್ತಿಯನ್ನು ಜಲದಲ್ಲಿ ಲೀನವಾಗಿದ್ದ ವಿದ್ಯುತ್ತಾದಿಯನ್ನು, ನೀರು ಬೆಂಕಿಗಳಲ್ಲಿ ಅಡಕವಾಗಿದ್ದ ಯಂತ್ರಚಾಲನ (ಇಂಜನ್ ನಡೆಸುವ) ಶಕ್ತಿಯನ್ನು, ವಾಯುವಿನಲ್ಲಿದ್ದ ಆಕಾಶಗಮನಾದಿ ಶಕ್ತಿಯನ್ನು, ಈ ವಾಯು ಆಕಾಶಗಳಲ್ಲಿ ಅಡಗಿದ್ದ ದೂರಶ್ರವಣ (ರೇಡಿಯೋ) ಮುಂತಾದ ಶಕ್ತಿಯನ್ನು ಕಂಡು ಹಿಡಿಯುವದರಲ್ಲೇ ಈ ವಿಜ್ಞಾನಿಗಳ ಸಾಮರ್ಥ್ಯವು ಕೊನೆಗೊಂಡಿರುವದಲ್ಲದೆ ಈ ಪಂಚಭೂತಗಳ ತಳಬೇರನ್ನು ಶೋಧಿಸುವ (ಪಂಚಭೂತಗಳು ಹೇಗೆ ಹುಟ್ಟಿದವು ಇವು ಶಾಶ್ವತವೋ ಅಶಾಶ್ವತವೋ ಇತ್ಯಾದಿ) ವಿಚಾರಗೊಂದಲಕ್ಕೆ ಇದುವರೆಗೆ ಯಾವ ವಿಜ್ಞಾನಿಯೂ ಹೋಗಿರುವದಿಲ್ಲ ಮುಂದೆಯೂ ಹೋಗಲಾರನು. ಆಗಾಗ ಬದಲಾಗುತ್ತಿರುವ ಪಂಚಭೂತಗಳ ಸಾಮಾನ್ಯ ಸ್ವರೂಪವನ್ನು ವಿಜ್ಞಾನಿಗಳು ಸಂಶೋಧಿಸಬಹುದು ಆದುದರಿಂದ ಜೀವ, ಜಗತ್ತು, ಈಶ್ವರ ಈ ಮೂರರ ನಿಜವಾದ ಸ್ವರೂಪವನ್ನು ತಿಳಿಸಿಕೊಡಲು ತತ್ವಶಾಸ್ತ್ರವೇ ಸಮರ್ಥವಾದುದು.

## ಜೀವ, ಜಗತ್ತು, ಈಶ್ವರರ ಯಥಾರ್ಥಜ್ಞಾನಕ್ಕೆ ದರ್ಶನಶಾಸ್ತ್ರವೇಗತಿ

ವೇದಗಳ ಅಂತಿಮ ಭಾಗದಲ್ಲಿ (ಉಪನಿಷತ್ತುಗಳಲ್ಲಿ) ಅಡಕವಾಗಿರುವ ಈ ತತ್ವವನ್ನು ನೂರಾರು ವರ್ಷಗಳವರೆಗೆ ಉಗ್ರವಾದ ತಪಸ್ಸನ್ನಾಚರಿಸಿ ಮಹರ್ಷಿಗಳು, ಮಹಾಚಾರ್ಯರೂ ಕಂಡುಕೊಂಡಿರುವರು. ಈ ತತ್ವವನ್ನು ಕಂಡುಕೊಳ್ಳುವಾಗ, ಕಂಡದ್ದನ್ನು ಅನುಭವಕ್ಕೆ ಅಳವಡಿಸಿಕೊಳ್ಳುವಾಗ ಅವರವರ ಬುದ್ಧಿ ಪ್ರತಿಭಾದಿಗಳಿಗೆ ತಕ್ಕಂತೆ ತತ್ವವು ಭಿನ್ನಭಿನ್ನವಾಗಿ ತೋರಿರುವದು. ಆದುದರಿಂದಲೇ ದರ್ಶನಗಳು ಅನೇಕವಾಗಿರುತ್ತವೆ. ಈ ಉಪನಿಷತ್ ಸಿದ್ಧಾಂತದಲ್ಲಿಯೂ ಪರಸ್ಪರ ವಿರೋಧವು ಕಂಡುಬಂದುದನ್ನು ನೋಡಿ ಆ ವಿರೋಧ ಪರಿಹಾರಕ್ಕಾಗಿಯೇ ಶ್ರೀ ಬಾದರಾಯಣ ಮುನಿಯು ಆ ಉಪನಿಷದ್ವಾಕ್ಯಗಳ ಸಾರವನ್ನೇ ಸಂಗ್ರಹಿಸಿ ಸೂತ್ರಗಳನ್ನು ಬರೆದನು ಅವು ಮುಖ್ಯವಾಗಿ ಬ್ರಹ್ಮಪ್ರತಿಪಾದಕಳಾಗಿರುವದರಿಂದ ಅವಕ್ಕೆ ಬ್ರಹ್ಮ ಸೂತ್ರವೆಂದು ಹೆಸರಾಗಿರುವದು. ಈ ಬ್ರಹ್ಮಸೂತ್ರನಿರ್ಮಾಣವಾದ ನಂತರ ದಲ್ಲಿಯೂ ಭಿನ್ನಾಭಿಪ್ರಾಯವು ಹೋಗಲಿಲ್ಲ. ಏಕೆಂದರೆ ಆ ಬ್ರಹ್ಮ ಸೂತ್ರದಮೇಲೆ ಇಂದಿಗೆ ಹನ್ನೊಂದುಜನರು ಭಾಷ್ಯಗಳನ್ನು ಬರೆದಿರುವರು. ಅನೇಕ ಜನರುಭಾಷ್ಯಗಳನ್ನು ಬರೆಯಬೇಕಾದರೆ ಭಿನ್ನಾಭಿಪ್ರಾಯದಿಂದಲೇ ಬರೆಯಬೇಕಾಗುತ್ತದೆ. ಹೀಗಾಗಿ ಉಪನಿಷತ್ಪ್ರತಿಪಾದಿತ ಸಿದ್ಧಾಂತದಲ್ಲಿಯೇ ದ್ವೈತ, ಅದ್ವೈತ, ವಿಶಿಷ್ಟಾದ್ವೈತ,

ಶಕ್ತಿವಿಶಿಷ್ಟಾದ್ವೈತ ಎಂಬ ನಾಲ್ಕು ಸಿದ್ಧಾಂತಗಳು ತಲೆಯೆತ್ತಿ ನಿಂತಿರುವವು. ಔಪನಿಷದ ಸಿದ್ಧಾಂತಾತಿರಿಕ್ತಗಳಾದ ಬೌದ್ಧ, ಸೌಗತಾದಿ ನಾನಾದರ್ಶನಗಳು ಪ್ರಚಲಿತವಾಗಿರುತ್ತವೆ. ಉಪನಿಷದುಕ್ತ ಸಿದ್ಧಾಂತಾವಲಂಬಿಗಳಾದ ಮೇಲೆ ತೋರಿಸಿದ ನಾಲ್ಕು ಸಿದ್ಧಾಂತಗಳಲ್ಲಿ ಒಂದು ದ್ವೈತ, ಇನ್ನುಳಿದ ಮೂರರಲ್ಲಿಯೂ ಅದ್ವೈತ ಶಬ್ದ ಪ್ರಯೋಗವಿರುವುದರಿಂದ ಇವು ಮೂರು ಸ್ವಲ್ಪ ಹೆಚ್ಚು ಕಡಿಮೆ ಸಮಾನಗಳೇನೋ ಎನ್ನುವಂತೆ ಭಾಸವಾಗುತ್ತದೆ. ಪರಂತು ಈ ಮೂರರಲ್ಲಿ ವಿಶಿಷ್ಟಾದ್ವೈತವೆಂಬ ಶ್ರೀ ರಾಮಾನುಚಾರ್ಯರ ಸಿದ್ಧಾಂತದ ತಳಬೇರನ್ನು ಚನ್ನಾಗಿ ಶೋಧಿಸಿದರೆ ಅಲ್ಲಿ ಅದ್ವೈತವೆಂಬುದು ಇಲ್ಲವೇ ಇಲ್ಲ. ಇದನ್ನೆಲ್ಲಾ ವಾಚಕರಿಗೆ ಮನನಮಾಡಿಕೊಡಬೇಕಾದರೆ ಬಹುವಿಸ್ತಾರವಾಗಿ ಬರೆಯಬೇಕಾಗುತ್ತದೆ ಅದು ಅಪ್ರಕೃತವಾಗುವದು. ಆದುದರಿಂದ ರೇಖಾರೂಪವಾಗಿ ಮಾರ್ಗದರ್ಶನ ಮಾಡಿ ಕೊಡುವೆವು. ವಿಶಿಷ್ಟಾದ್ವೈತದ ಅಂತಿಮ ಸ್ಥಿತಿಯನ್ನು ನೋಡೋಣ ಈ ಸಿದ್ಧಾಂತದಲ್ಲಿ ಜಗತ್ತು ಜಗದಂತರ್ಗತ ಸಕಲ ಜೀವಿರಾಶಿಗಳು ಬ್ರಹ್ಮನಿಗಿಂತಲೂ ಭಿನ್ನವಾದವುಗಳು ಮತ್ತು ನಿತ್ಯವಾದವುಗಳು ಇರುತ್ತವೆ. ಜೀವವು ಒಂದೇ ಅಲ್ಲ ಅವು ಪರಸ್ಪರ ಭಿನ್ನವಾದವುಗಳು. ಇದರಿಂದ ಜೀವ, ಜಗತ್ತು, ಈಶ್ವರ ಹೀಗೆ ಮೂರು ಪದಾರ್ಥಗಳು ಕೊನೆಯವರೆಗೂ ನಿತ್ಯವಾಗಿರುತ್ತವೆ. ಇತರ ಮತದಂತೆ ಒಂದೇ ವಸ್ತು ಆಗುವದೇ ಇಲ್ಲ. ಹಾಗಾದರೆ ಅದ್ವೈತವೆಂದು ಹೇಗೆ ಹೇಳುವದು? ಈ ಪ್ರಶ್ನೆಗೆ ಅವರ ಉತ್ತರವಿಷ್ಟೇ ಪ್ರಳಯ ಕಾಲದಲ್ಲಿ ಅಥವಾ ಮೋಕ್ಷ ಕಾಲದಲ್ಲಿ ಅವರವರ ಸಂಚಿತಪ್ರಾರಬ್ಧಾದಿ ಕರ್ಮಾನುಸಾರವಾಗಿ ನಾನಾ ಭೇದವುಳ್ಳ ಜೀವರು ಮತ್ತು ಜಗತ್ತು ಸೂಕ್ಷ್ಮರೂಪವನ್ನು ಹೊಂದಿ ದೇವರ ಉದರದಲ್ಲಿ ಸೇರಿಕೊಳ್ಳುತ್ತವೆ ಈ ಜೀವ, ಜಗತ್ತನ್ನು ತನ್ನೊಳಡಗಿಸಿಕೊಂಡ ದೇವರು ಒಬ್ಬನೇ ಹೊರಗೆ ಕಾಣುವನು, ಜೀವ ಜಗದ್ವಿಶಿಷ್ಟ ದೇವನೊಬ್ಬನಾದ್ದರಿಂದ ಅದ್ವೈತ ಎಂದು ಹೇಳುವರು. ಅರ್ಥಾತ್ ಒಂದು ಹೆಣ್ಣು ಪ್ರಾಣಿಯ ಹೊಟ್ಟೆಯಲ್ಲಿ ಬೇರೆ ಬೇರೆ ಬಣ್ಣ, ಗುಣ, ಆಕೃತಿ, ಸ್ತ್ರೀ-ಪುರುಷ ಚಿನ್ಹ, ಸ್ವಭಾವ ಇತ್ಯಾದಿ ನಾನಾ ಭೇದವುಳ್ಳ ಅನೇಕ ಮರಿಗಳಿರುತ್ತಿದ್ದರೂ ನೋಡುವವರಿಗೆ ಗರ್ಭಿಣಿಯಾದ ಆ ಹೆಣ್ಣು ಪ್ರಾಣಿಯು ಒಂದೇ ಹೇಗೆ ಕಾಣುವದೋ ಅದರಂತೆ ಇವರ ದೇವರು ಇದ್ದ ಹಾಗೆ ಆಯಿತು. ಆದುದರಿಂದ ನಿಜವಾದ ಅದ್ವೈತವು ಇಲ್ಲವೇ ಇಲ್ಲ.

ಇನ್ನುಳಿದವು, ಶಂಕರಾಚಾರ್ಯರ ನಿರ್ವಿಶೇಷಾದ್ವೈತ ಮತ್ತು ವೀರಶೈವರ ಶಿವಾದ್ವೈತ, ಇವುಗಳಲ್ಲಿ ಅದ್ವೈತವೇನೋ ಒಂದೇ ವಿಧವಾಗಿಯೂ ನಿಜವಾದು ದಾಗಿಯೂ ಇರುತ್ತದೆ. ಸ್ಥೂಲದೃಷ್ಟಿಯಿಂದ ಎರಡೂ ಅದ್ವೈತಗಳು ಸಮಾನವೆಂದು ಕಂಡರು ಇವುಗಳಲ್ಲಿ ಭೂಮ್ಯಾಕಾಶದಷ್ಟು ಅಂತರವಿರುವದು. ಸ್ಥೂಲಮಾನದಿಂದ ಇವೆರಡರ ತರತಮ ಭಾವವನ್ನು ಅರಿತುಕೊಂಡರೆ ಕ್ಷೇತ್ರಜ್ಞ ಸುಮನೋವಾದ

ಗ್ರಂಥವು ವಾಚಕರಿಗೆ ಸುಗಮವಾಗಿ ತಿಳಿಯಬಹುದೆಂದು ಭಾವಿಸಿ ಆ ಎರಡು ಸಿದ್ಧಾಂತಗಳ ಸಂಕ್ಷಿಪ್ತ ಸ್ವರೂಪವನ್ನು ವಿವರಿಸುವೆವು.

## ಶಾಂಕರ ಸಿದ್ಧಾಂತ

"ಬ್ರಹ್ಮ ಸತ್ಯಂ ಜಗನ್ಮಿಥ್ಯಾ ಜೀವೋ ಬ್ರಹ್ಮೈವ ನಾ ಪರಃ" ಬ್ರಹ್ಮವೊಂದೇ ಸತ್ಯವಾದುದು, ಜಗತ್ತು ಮಿಥ್ಯವಾದುದು, ಜೀವಾತ್ಮನು ಪರಮಾತ್ಮನೇ ಭಿನ್ನನಲ್ಲ ಎಂಬುದು ಶಾಂಕರಮತದ ಮುಖ್ಯ ಸಾರವು. ಪರಂತು ಇಲ್ಲಿ "ಅಹಂ, ನಾನು" ಎಂಬ ಅನುಭವವು ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ ಎಂಬ ಅರಿಷಡ್ವರ್ಗ ದಿಂದಲೂ, ಹಸಿವು, ತೃಷೆ, (ಬಾಯಾರಿಕೆ) ಶೋಕ, ಮೋಹ, ಜರೆ, ಮೃತ್ಯು ಎಂಬ ಷಡೂರ್ಮಿಗಳಿಂದಲೂ, ಉತ್ಪತ್ತಿ, ಸ್ಥಿತಿ, ಪರಿಣಾಮ, ವೃದ್ಧಿ, ಅಪಕ್ಷಯ, ವಿನಾಶ ಎಂಬ ಷಡ್ಭಾವ ವಿಕಾರಗಳಿಂದಲೂ, ಗರ್ಭ, ಜನ್ಮ, ಬಾಲ್ಯ, ಯೌವನ, ವಾರ್ಧಕ್ಯ, ಮರಣ, ಸ್ವರ್ಗ ನರಕಾದಿ ಎಂಬ ಸಪ್ತಾವಸ್ಥೆಗಳಿಂದಲೂ ಆವರಿಸಲ್ಪಟ್ಟಿರುವ ಆತ್ಮ ತತ್ವವನ್ನು ತೋರಿಸುವದು. ಇಂತಹ ಜೀವಾತ್ಮನು ನಿತ್ಯ, ಶುದ್ಧ, ಬುದ್ಧ, ನಿರ್ಗುಣ, ನಿರಂಜ ನಾದಿ ಸ್ವರೂಪವುಳ್ಳ ಪರಮಾತ್ಮನೇ ಹೇಗೆ ಆದಾನು ಎಂಬ ಸಂದೇಹವು ಮುಂದೆ ಬಂದಾಗ ಶಂಕರಾನುಯಾಯಿಗಳು ಇದೆಲ್ಲವೂ ಮಾಯೆಯಿಂದ ಸಿದ್ಧವಾಗುವದೆಂದು ಹೇಳುವರು. ಶಾಂಕರ ಮತದಲ್ಲಿ ಮಾಯಾ ಮತ್ತು ಅವಿದ್ಯಾ ಎಂಬ ಎರಡು ಶಬ್ದಗಳು ಪ್ರಾಯಃ ಪರ್ಯಾಯ ವಾಚಕಗಳಿರುತ್ತವೆ. ಇಲ್ಲಿ ಕೇವಲಾದ್ವೈತಿಗಳಿಗೆ, ಸಚ್ಚಿದಾ ನಂದ ಸ್ವರೂಪವಾಗಿರುವ ಶುದ್ಧ ಬ್ರಹ್ಮಕ್ಕೆ ಪ್ರಪಂಚ ಭ್ರಾಂತಿಯೂ, ಸಂಸಾರ ಬಂಧವೂ ಹೇಗೆ ಉಂಟಾಯಿತೆಂದು ಕೇಳಿದರೆ, ಅನಾದಿಯಾದ ಅವಿದ್ಯಾ ಪ್ರಭಾವ ದಿಂದಲೇ ಉಂಟಾಯಿತೆಂದೂ, ಸೂರ್ಯ ಮಂಡಲದಲ್ಲಿ ಕತ್ತಲೆಯು ಹೇಗೆ ಪ್ರವೇಶಿಸ ಲಾರದೋ ಅದರಂತೆ ಶುದ್ಧಜ್ಞಾನೈಕಸ್ವರೂಪವಾದ ಬ್ರಹ್ಮದಲ್ಲಿ ಅಜ್ಞಾನವು ಪ್ರವೇಶಿಸಲಾರದಲ್ಲಾ ಎಂದು ಕೇಳಿದರೆ, ಅವಿದ್ಯಾ ಪ್ರಭಾವದಿಂದ ಅದೂ ಪ್ರವೇಶಿಸ ಬಹುದೆಂದೂ, ಅಜ್ಞಾನದ ಬಾಯಿಗೆ ತುತ್ತಾದ ಈ ಬ್ರಹ್ಮವು ತನ್ನನ್ನು ಅಜ್ಞಾನದಿಂದ ದೂರ ಮಾಡಿಕೊಂಡು ಸಂಸಾರ ಬಂಧನದಿಂದ ಬಿಡುಗಡೆಯಾಗುವ ಬಗೆ ಹೇಗೆ ಎಂದು ಕೇಳಿದರೆ, ವೇದಾಂತವಾಕ್ಯ ಜನ್ಯವಾದ ಆತ್ಮೈಕತ್ವ ಜ್ಞಾನದಿಂದ ಬಿಡುಗಡೆಯಾಗುವ ದೆಂದೂ, ಬಿಡುಗಡೆಯನ್ನು ಸಾಧಿಸಿಕೊಡಬಲ್ಲುದಾದ ಆತ್ಮೈಕತ್ವ ಜ್ಞಾನಕ್ಕೆ ಮುಖ್ಯ ಸಾಧನವಾಗಿರುವ ವೇದಾಂತವಾಕ್ಯವು ಹೇಗೆ ಆವಿರ್ಭವಿಸಿತು ಎಂದು ಕೇಳಿದರೆ, ಅವಿದ್ಯಾಪ್ರಭಾವದಿಂದಲೇ ವೇದಾಂತವಾಕ್ಯವೂ ಆವಿರ್ಭವಿಸಿತೆಂದೂ, ಓಹೋ ಹಾಗಾದರೆ ಅವಿದ್ಯಾಕಲ್ಪಿತವಾದ ಪ್ರಪಂಚದಂತೆ ಅವಿದ್ಯಾಕಲ್ಪಿತವಾದ ವೇದಾಂತ ವಾಕ್ಯವೂ ಮಿಥ್ಯೆಯಾಗಬೇಕಾಗಿರುವಲ್ಲಿ ಇದು ಸತ್ಯ ಭೂತವೆಂದೂ ಪ್ರಮಾಣವೆಂದೂ ಹೇಳಿಸಿಕೊಳ್ಳುವ ಬಗೆ ಹೇಗೆ ಎಂದು ಕೇಳಿದರೆ, ಆತ್ಮೈಕತ್ವ ಜ್ಞಾನೋತ್ಪತ್ತಿಯ ಅನಂತರದಲ್ಲಿ ಇದು ಮಿಥ್ಯೆಯೆನಿಸಿಕೊಳ್ಳುವದಾಗಿದ್ದರೂ, ಜ್ಞಾನೋತ್ಪತ್ತಿಯ ವರೆಗೆ

ಸತ್ಯವೆನಿಸಿಕೊಳ್ಳುವದಕ್ಕೂ ಪ್ರಮಾಣವೆನಿಸಿಕೊಳ್ಳುವದಕ್ಕೂ ಅವಿದ್ಯಾಪ್ರಭಾವವೇ ಕಾರಣವಾಗಿರುವದೆಂದೂ ಅರ್ಧಜರತೀಯ ನ್ಯಾಯವನ್ನು ಒಪ್ಪಿಕೊಳ್ಳುವರು ಅಂತೂ ಯಾವ ಅನುಪಪನ್ನವಾದ ಅರ್ಥವನ್ನೂ ಉಪಪನ್ನವೆಂದು ತೋರಿಸುವದಕ್ಕೆ ಅವಿದ್ಯೆಯೆಂಬ ಒಂದೇ ಒಂದು ಸಾಧನವು ಈ ಅದ್ವೈತಿಗಳಿಗೆ ಬ್ರಹ್ಮಾಸ್ತ್ರ ತುಲ್ಯವಾಗಿರುವದು. "ಸರ್ವಂಸಿದ್ಧ್ಯತ್ಯವಿದ್ಯಯಾ,, ಎಂಬ ಎಂಟು ಅಕ್ಷರಗಳು ಈ ಅದ್ವೈತಿಗಳಿಗೆ ಮೂಲಮಂತ್ರವಾಗಿರುವದು. ಬೇಸರಿಕೆ ಇಲ್ಲದೆ ಪುನಃ ಪುನಃ ಅದನ್ನೇ ಹೇಳುತ್ತಿರುವರು.

## ಜೀವ ಸ್ವರೂಪ

ವಸ್ತುತಃ ಬ್ರಹ್ಮವು ನಿರ್ಗುಣವಾದುದು ಪರಂತು ಮಾಯೆಯ ಸಂಬಂಧದಿಂದ ಅದೇ ಬ್ರಹ್ಮ ಸಗುಣವಾಗಿ ತೋರುತ್ತಿದೆ. ಉಪಾಸನಾ ದೃಷ್ಟಿಯಿಂದ ಅದೇ ಸಗುಣರೂಪ (ಈಶ್ವರನರೂಪ) ವನ್ನು ಧಾರಣ ಮಾಡುತ್ತದೆ. ಹೀಗೆ ಜೀವ ಬ್ರಹ್ಮರಲ್ಲಿ ಯಾವ ವಿಧವಾದ. ಭೇದವಿರುವದಿಲ್ಲ. ಆದರೆ ಅಂತಃಕರಣರೂಪೋ ಪಾಧಿಯಿಂದ ಕೂಡಿಕೊಳ್ಳುವದರಿಂದ ಅದೇ ಬ್ರಹ್ಮ ಜೀವವೆನಿಸಿಕೊಳ್ಳುತ್ತದೆ. ಈಶ್ವರನು ಮಾಯಾವಚ್ಛಿನ್ನ ಚೈತನ್ಯನಿದ್ದರೆ ಜೀವನು ಅಂತಃಕರಣಾವ ಚ್ಛಿನ್ನ ಚೈತನ್ಯನಿರುವನು; ಇಬ್ಬರೂ ಚೈತನ್ಯ ರೂಪರಿರುತ್ತಾರೆ. ಮಾಯೆಯೇ ಇವರಿಬ್ಬರನ್ನು ಬ್ರಹ್ಮನಿಗಿಂತಲೂ ಭಿನ್ನರನ್ನಾಗಿ ಮಾಡುತ್ತದೆ ಈ ಅವಿದ್ಯೆಯು ಅನಿರ್ವಚನೀಯವಾಗಿರುತ್ತದೆ. ಈ ಅವಿದ್ಯೆಯೇ ಜಗತ್ತಿಗೆ ಉಪಾದಾನ ಕಾರಣ ವಾಗಿರುತ್ತದೆ. ಬ್ರಹ್ಮವು ಕೇವಲ ನಿಮಿತ್ತಕಾರಣವಾಗಿರುವುದು. ಬ್ರಹ್ಮಕ್ಕೆ ಉಪಾದಾನಕಾರಣತ್ವವನ್ನು ಹೇಳಿದರೆ ಅದು ವಿಕಾರಿಯಾಗಬೇಕಾಗುತ್ತದೆ

## ವಿವರ್ತವಾದ

ನಿಮಿತ್ತ ಕಾರಣವಾದ ಬ್ರಹ್ಮ ಒಂದೇ ಸತ್ಯವಾದುದು ಕಾರ್ಯಗಳ ರೂಪದಲ್ಲಿ ಕಾಣುವ ಪರಿವರ್ತನವು ಅಧ್ಯಾಸವಾಗಿರುವದು ವಾಸ್ತವವಾದುದಲ್ಲ. ಕಾರಣದ ಪರಿವರ್ತನವೇ ವಿವರ್ತವೆನಿಸಿಕೊಳ್ಳುತ್ತದೆ. ನಿಜವಾದ ಹಗ್ಗವು ಮಬ್ಬು ಗತ್ತಲೆಯಲ್ಲಿ ಹಾವಾಗಿ ತೋರುವದು, ಅದಲ್ಲದುದರಲ್ಲಿ ಅದೆಂಬ ಭ್ರಾಂತಿಯುಂಟಾ ಗುವದು ವಿವರ್ತವು. ಉಪಾದಾನಕಾರಣದಲ್ಲಿ ಪರಿಣಾಮೋಪಾದಾನ, ವಿವರ್ತೋ ಪಾದಾನ ಎಂದು ಎರಡು ಭಾಗ ಮಾಡಿ ಬ್ರಹ್ಮವು ಜಗತ್ತಿಗೆ ವಿವರ್ತೋಪಾದಾನ ಕಾರಣವಾಗಿರುವದೆಂದು ಹೇಳುವದರಿಂದ ವಿವರ್ತವಾದವೇ ಕೇವಲಾದ್ವೈತಿಗಳಿಗೆ ಇಷ್ಟವಾಗಿರುವುದಲ್ಲದೆ ಪರಿಣಾಮವಾದವು ಇಷ್ಟವಾಗಿಲ್ಲ ಏಕೆಂದರೆ ಹಾಲಿದ್ದುದು ಮೊಸರಾಗುವದಕ್ಕೆ ಪರಿಣಾಮವೆನ್ನುತ್ತಾರೆ. ಇಲ್ಲಿ ಹಾಲಿನಲ್ಲಿ

ಹುಳಿಯ ಸಂಬಂಧದಿಂದ ವಿಕಾರ ಉತ್ಪನ್ನವಾಗಿ ಹಾಲಿನ ಸ್ವರೂಪವು ಪೂರ್ಣ ನಷ್ಟವಾಗಿ ವಿಕಾರದ ಪರಿಣಾಮ ರೂಪವಾದ ಮೊಸರೆಂಬ ಒಂದು ಸ್ವತಂತ್ರ ಪದಾರ್ಥವು ಉಂಟಾಗುತ್ತದೆ. ಹಾಲು, ಮೊಸರು ಎರಡೂ ಸ್ವತಂತ್ರವಾದವುಗಳೂ, ಸತ್ಯವಾದವುಗಳೂ ಇರುತ್ತವೆ. ಇದರಂತೆ ಸತ್ಯವಾದ ಬ್ರಹ್ಮದ ಪರಿಣಾಮವೇ ಜಗತ್ತಾದರೆ ಬ್ರಹ್ಮದಲ್ಲಿ ವಿಕಾರಿತ್ವವು ಜಗತ್ತಿನಲ್ಲಿ ಸತ್ಯತ್ವವೂ ಪ್ರಾಪ್ತವಾಗುತ್ತದೆ. ಆದುದರಿಂದ ಪರಿಣಾಮವಾದವನ್ನು ಹೇಳುವಂತಿಲ್ಲ. ಮತ್ತು ಜಗನ್ಮಿಥ್ಯಾ ಎಂಬಲ್ಲಿ ಮಿಥ್ಯಾ ಶಬ್ದದ ಅರ್ಥವು ಅನಿರ್ವಚನೀಯವೆಂದಿರುತ್ತದೆ. ಜಗತ್ತು ಅನಿರ್ವಚನೀಯ ವೆಂದು ಹೇಳುವ ಅದ್ವೈತಿಗಳಿಗೆ ರಜ್ಜು ಸರ್ಪಾದಿಗಳಂತೆ ಜಗತ್ತು ಉಪಾದೇಯ ವಾಗಲಾರದಲ್ಲಾ ಎಂಬ ಸಂದೇಹ ಬಂದಾಗ ಅದರ ಪರಿಹಾರಕ್ಕಾಗಿ ಮೂರು ಸತ್ತಾಗಳನ್ನು ಅಂಗೀಕರಿಸುವರು. ೧-ಪ್ರಾತಿಭಾಸಿಕ ಸತ್ತಾ-ರಜ್ಜು ಸರ್ಪಾದಿಗಳಲ್ಲಿ, ೨-ವ್ಯಾವಹಾರಿಕ ಸತ್ತಾ ಜಗತ್ತಿನಲ್ಲಿ, ೩-ಪಾರಮಾರ್ಥಿಕ ಸತ್ತಾ-ಬ್ರಹ್ಮದಲ್ಲಿ ಇರುತ್ತದೆಂದು ಹೇಳುವರು. ಶಂಕರಾಚಾರ್ಯರಿಗಿಂತ ಪೂರ್ವದಲ್ಲಿ ನೀರು, ಗಾಳಿ, ಭೂಮಿ ಹಾವು, ಮೊದಲಾದವುಗಳಿಗೇ ದೇವರೆಂದು ನಂಬಿದ್ದವರು ಕೆಲವರಿದ್ದರು ಬರಮಪ್ಪ, ಬೀರಪ್ಪ, ಮಾರುತಿ ಮೊದಲಾದವರನ್ನು ದೇವರೆಂದು ನಂಬಿದವರು ಕೆಲವರು, ಶಕ್ತಿಯೇ ಮೂಲ ವಸ್ತುವೆಂದು ಕೆಲವರು, ವೈಕುಂಠಾಧಿಪತಿಯಾದ ವಿಷ್ಣುವೇ ( ನಾರಾಯಣನೇ ) ಮೂಲವಸ್ತುವೆಂದು ಕೆಲವರು, ಕೈಲಾಸಾಧಿಪತಿಯಾದ ಶಿವನೇ ಮೂಲವಸ್ತುವೆಂದು ಕೆಲವರು ಹೇಳುತ್ತಿದ್ದರು. ಆಗ ಶಂಕರಾಚಾರ್ಯರು ಈ ಬ್ರಹ್ಮ ವಿಷ್ಣು, ರುದ್ರ, ಈಶ್ವರ, ಶಕ್ತಿ ಇತ್ಯಾದಿಗಳೆಲ್ಲರೂ ಕಾರ್ಯಕೋಟಿಯೊಳಗಿ ನವರು. ಇವರೆಲ್ಲರಿಗೂ ಮೂಲವಾದ ವಸ್ತುವು ಮತ್ತೊಂದಿದೆ ಅದಕ್ಕೆ ಪರಬ್ರಹ್ಮವೆನಬೇಕು. ಅದು ಸತ್, ಚಿತ್, ಆನಂದ, ನಿತ್ಯ, ಪರಿಪೂರ್ಣ ಎಂಬ ಪಂಚಲಕ್ಷಣ ಲಕ್ಷಿತವಾಗಿಯೂ. ನಿರ್ವಿಶೇಷವಾಗಿಯೂ ಇರುತ್ತದೆ. ಎಂದು ಸಿದ್ಧಮಾಡಿರುವರು. ಕ್ರಿಯಾಜ್ಞಾನಗಳು ಅವಶ್ಯವಾಗಿಬೇಕು ಆದರೆ ಇವುಗಳಲ್ಲಿ ಕ್ರಮಸಮುಚ್ಚಯವಿರುತ್ತದೆಯಲ್ಲದೆ ಸಮಸಮುಚ್ಚಯವಿರುವದಿಲ್ಲ ಅಂದರೆ ಮೊದ ಲಿಗೆ ಸಾತ್ವಿಕ ಕ್ರಿಯೆಗಳು ಅವಶ್ಯವಾಗಿ ಬೇಕು. ಆ ಸಾತ್ವಿಕ ಕ್ರಿಯೆಗಳಿಂದ ಜ್ಞಾನೋದಯವಾದ ಬಳಿಕ ಕ್ರಿಯೆಯು ಅನಾವಶ್ಯಕ ಜ್ಞಾನದಿಂದಲೇ ಮೋಕ್ಷವಾಗು ವದು. ಇತ್ಯಾದಿ, ಶಾಂಕರಮತದ ರೂಪ ರೇಖೆಯು.

## ವೀರಶೈವ ಸಿದ್ಧಾಂತ

ವೀರಶೈವ ಸಿದ್ಧಾಂತದಲ್ಲಿ ಪರಬ್ರಹ್ಮವು ಸವಿಶೇಷವಾಗಿರುತ್ತದೆ. ಶಾಂಕರ ಮತದಂತೆ ನಿರ್ವಿಶೇಷವಾದುದಲ್ಲ. ಪರಬ್ರಹ್ಮದಲ್ಲಿ ವಿಮರ್ಶಶಕ್ತಿಯು ಅವಿನಾಭಾವ ಸಂಬಂಧದಿಂದ ಯಾವಾಗಲೂ ಇರುವುದರಿಂದ ಅದು ಸವಿಶೇಷವೆನಿಸಿಕೊಳ್ಳುತ್ತಿದೆ.

## ಪರಶಿವನು ಶಕ್ತಿ ವಿಶಿಷ್ಟನೆಂಬ ಬಗ್ಗೆ ಅನುಭವ ಪ್ರದರ್ಶನ

ಶಕ್ತಿ ವಿಶಿಷ್ಟ ಬ್ರಹ್ಮದಿಂದಲೇ ಚರಾಚರಾತ್ಮಕವಾದ ಜಗತ್ತಿನ ಉತ್ಪತ್ತಿಯಾಗಿ ರುತ್ತದೆ. ಶಕ್ತಿ ವಿಶಿಷ್ಟ ಬ್ರಹ್ಮದಿಂದುತ್ಪನ್ನವಾದ ಜಗತ್ತೂ ಸಹ ಶಕ್ತಿ ವಿಶಿಷ್ಟವಾಗಿರು ವದು. ಈ ಜಗತ್ತಿನಲ್ಲಿರತಕ್ಕ ಪ್ರತಿಯೊಂದು ಪದಾರ್ಥವನ್ನೂ ವಿಮರ್ಶೆ ಮಾಡಿದ್ದಾದರೆ ಪ್ರತಿಯೊಂದರಲ್ಲಿಯೂ ಒಂದೊಂದು ವಿಧವಾದ ಶಕ್ತಿಯಿರುವದಾಗಿ ಕಂಡು ಬರುತ್ತಿದೆ. ಹೇಗೆಂದರೆ ಪೃಥುವಿಯಲ್ಲಿ ಧಾರಣಶಕ್ತಿಯೂ, ಜಲದಲ್ಲಿ ಆಪ್ಯಾಯನ ಶಕ್ತಿಯೂ, ತೇಜಸ್ಸಿನಲ್ಲಿ ಪ್ರಜ್ವನಶಕ್ತಿಯೂ, ವಾಯುವಿನಲ್ಲಿ ಸ್ಪಂದನಶಕ್ತಿಯೂ, ಆಕಾಶದಲ್ಲಿ ವ್ಯಾಪನಶಕ್ತಿಯೂ, ಆತ್ಮನಲ್ಲಿ ಬುದ್ಧಿಶಕ್ತಿಯೂ ಇದರಂತೆ ವೃಕ್ಷಾದಿಗಳಲ್ಲಿ ಜಲಾಕರ್ಷಣ ಶಕ್ತಿಯೂ, ವನಸ್ಪತಿಗಳಲ್ಲಿ ಮಹಾ ಮಹಾ ರೋಗ ನಿವಾರಣಶಕ್ತಿಯೂ, ವಜ್ರದಲ್ಲಿ ಕಲ್ಲುಗಳನ್ನು ಭೇದಿಸುವ ಶಕ್ತಿಯೂ, ಮಣಿ ಮಂತ್ರಾದಿಗಳಲ್ಲಿ ವಿಷ, ಭೂತ ಪ್ರೇತ ಪಿಶಾಚಾದಿ ಬಾಧಾ ನಿವಾರಣಶಕ್ತಿಯು, ಸೂಜಿಗಲ್ಲಿನಲ್ಲಿ ಸೂಜಿಯನ್ನು ಆಕರ್ಷಣ ಮಾಡುವ ಶಕ್ತಿಯೂ, ಇರುವೆಗಳಲ್ಲಿ ಗಿಡದ ಮೂಲವನ್ನು ಘ್ರಾಣಿಸಿ ಗಿಡದ ತುದಿ ಯಲ್ಲಿರುವ ಫಲವನ್ನು ಕಂಡುಹಿಡಿಯುವ ಶಕ್ತಿಯೂ, ಒಂಟೆಯಲ್ಲಿ ಉಸಿರಿನಿಂದ ಹಾವನ್ನು ಆಕರ್ಷಿಸುವ ಶಕ್ತಿಯೂ ಇರುವದು ಲೋಕದಲ್ಲಿ ಪ್ರತಿಯೊಬ್ಬರಿಗೂ ಪ್ರತ್ಯಕ್ಷವಾಗಿ ಕಂಡು ಬರುತ್ತಿದೆ. ಅರ್ಥಾತ್ ಚರಾಚರಾತ್ಮಕವಾದ ಸಕಲ ಜಗತ್ತು ಶಕ್ತಿವಿಶಿಷ್ಟವಾಗಿರುವುದರಿಂದ ಇಂಥ ಶಕ್ತಿ ವಿಶಿಷ್ಟ ಜಗತ್ತನ್ನು ನಿರ್ಮಿಸಿದಂಥ ಬ್ರಹ್ಮವು ಶಕ್ತಿ ವಿಶಿಷ್ಟವಾದುದೆಂಬುದು ಸರ್ವರ ಅನುಭವದ ಮಾತಾಗಿರುತ್ತದೆ.

## ಪರಶಿವನು ಶಕ್ತಿವಿಶಿಷ್ಟನೆಂಬ ಬಗ್ಗೆ ಯುಕ್ತಿ ಪ್ರದರ್ಶನ

ಸತ್–ಚಿತ್ ಆನಂದ ಸ್ವರೂಪವಾದ ಬ್ರಹ್ಮವು “ಅಸ್ಮಿ— ನಾನು ಇದ್ದೇನೆ, ಪ್ರಕಾಶೇ— ನಾನು ಪ್ರಕಾಶಿಸುತ್ತೇನೆ, ನಂದಾಮಿ— ನಾನು ಆನಂದಿಸುತ್ತೇನೆ” ಎಂಬ ಅನುಭವದಿಂದ ಕೂಡಿರುತ್ತದೆ. ಈ ಅನುಭವವೇ ಪರಬ್ರಹ್ಮದ ವಿಮರ್ಶ ಶಕ್ತಿಯು, ಈ ಅನುಭವವು ಆ ಬ್ರಹ್ಮದಲ್ಲಿರದಿದ್ದರೆ ಆ ಬ್ರಹ್ಮಕ್ಕೆ ಪ್ರಕಾಶರೂಪವಾದ ಸ್ಫಟಿಕಶಿಲೆಯಂತೆ ಜಡವಾದುದೆಂದು ಹೇಳಬೇಕಾದ ಪ್ರಸಂಗವು ಬರುವದು. ಸುಂದರನಾದ ಕುರುಡನಿಗೆ ತನ್ನ ಸೌಂದರ್ಯವನ್ನು ತಿಳಿಯುವ ಶಕ್ತಿಯಿಲ್ಲದಿರು ವುದರಿಂದ ಅವನಿಗೆ ಆವನ ಸೌಂದರ್ಯವು ವ್ಯರ್ಥವಾಗುವಂತೆ, ಪರಬ್ರಹ್ಮಕ್ಕೆ ತನ್ನ ಸಚ್ಚಿದಾನಂದ ಸ್ವರೂಪವನ್ನು ತಿಳಿಯುವ ಶಕ್ತಿಯಿಲ್ಲದಿದ್ದರೆ ತನ್ನಲ್ಲಿರುವ ಸಚ್ಚಿದಾನಂದ ಸ್ವರೂಪವು ವ್ಯರ್ಥವಾಗುವದು. ಆದುದರಿಂದ ಪರಬ್ರಹ್ಮದಲ್ಲಿ ಸಚ್ಚಿದಾನಂದಾನುಭವರೂಪ ಶಕ್ತಿಯನ್ನು ಒಪ್ಪಲೇಬೇಕು. ಇದರಿಂದ ಪರಬ್ರಹ್ಮವು ಶಕ್ತಿ ವಿಶಿಷ್ಟವಾಗಿರುವದೆಂದು ಯುಕ್ತಿಯಿಂದಲೂ ಸಿದ್ಧವಾದಂತಾಯಿತು. ಇನ್ನು ಶ್ರುತ್ಯಾಗಮಾದಿ ಪ್ರಮಾಣಗಳಿಂದ ವಿಚಾರಿಸೋಣ.

## ಪರಶಿವನು ಶಕ್ತಿವಿಶಿಷ್ಟನೆಂಬ ಬಗ್ಗೆ ಶ್ರುತ್ಯಾಗಮಾದಿ ಪ್ರಮಾಣ ಪ್ರದರ್ಶನ

ಶ್ವೇತಾಶ್ವತರಶ್ರುತಿಯು—

ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ |೬-೮| ಎಂಬ ವಾಕ್ಯದಿಂದ ಅಸ್ಯ ಪರಶಿವನ ಸ್ವಾಭಾವಿಕೀ ಅವಿನಾಭಾವ ಸಂಬಂಧದಿಂದ ನಿತ್ಯಸಂಬದ್ಧವಾದ ಶಕ್ತಿಃ ಶಕ್ತಿಯು ಪರಾ, ಜ್ಞಾನಬಲಕ್ರಿಯಾ ಚ ಇತಿ ಪರಾಶಕ್ತಿ ಜ್ಞಾನಶಕ್ತಿ - ಕ್ರಿಯಾಶಕ್ತಿ ಇತ್ಯಾದಿ ವಿವಿಧೈವ ನಾನಾಪ್ರಕಾರವಾಗಿರುವದೆಂದು ಶ್ರೂಯತೇ ಶ್ರುತಿ ಸಿದ್ಧವಾಗಿರುತ್ತದೆ. ಇಲ್ಲಿ "ಸ್ವಾಭಾವಿಕೀ" ಎಂಬ ಪದವು ಶಕ್ತಿಯ ನಿತ್ಯತ್ವವನ್ನು ಚನ್ನಾಗಿ ಪ್ರತಿಪಾದಿಸುವದು. ಮತ್ತು ಇದೇ ಶ್ವೇತಾಶ್ವತರ ಶ್ರುತಿಯಲ್ಲಿ

ಯದಾ ತಮಸ್ತನ್ನ ದಿವಾ ನ ರಾತ್ರಿರ್ನಸನ್ನಚಾಸ ಚ್ಛಿವ ಏವಕೇವಲಃ,
ತದಕ್ಷರಂ ತತ್ಸವಿತುರ್ವರೇಣ್ಯಂ ಪ್ರಜ್ಞಾಚ ತಸ್ಮಾತ್ ಪ್ರಸೃತಾ ಪುರಾಣೀ |೪-೧೮

ಯಾವ ಸಮಯದಲ್ಲಿ ಕತ್ತಲು ಬೆಳಕು ಹಗಲು ರಾತ್ರಿ ಸತ್ - ಅಸತ್ ಇತ್ಯಾದಿ ಯಾವದೂ ಇದ್ದಿಲ್ಲವೋ ನಾಶರಹಿತನಾದ ಸರ್ವಶ್ರೇಷ್ಠನಾದ ಪರಶಿವನೊಬ್ಬನೇ ಇದ್ದನೋ ತಸ್ಮಾತ್—ಅಂಥಾ ಪರಶಿವಬ್ರಹ್ಮದಿಂದ ಪುರಾಣೀ—ಅನಾದಿಸಂಸಿದ್ಧ ವಾದ ಪ್ರಜ್ಞಾ—ಚಿಚ್ಛಕ್ತಿಯು ಪ್ರಸೃತಾ— ಕ್ರಿಯಾಶಕ್ತ್ಯಾದ್ಯನಂತರೂಪದಿಂದ ಪ್ರಸಾರವಾಯಿತು ಎಂಬ ವಿಷಯವು ಸ್ಫುಟವಾಗಿ ತೋರುತ್ತದೆ.

ಯಜುರ್ವೇದ ತೈತ್ತಿರೀಯ ಸಂಹಿತೆಯಲ್ಲಿ
ಆಖುಸ್ತೇರುದ್ರ ಪಶುಸ್ತಂ ಜುಷಸ್ವೈಷ ತೇ ರುದ್ರಭಾಗಃ
ಸಹ ಸ್ವಸ್ರಾಂಬಿಕಯಾ ತಂ ಜುಷಸ್ವ| ೧-೮-೬ ||

ಎಂಬ ಮಂತ್ರವು ಶಕ್ತಿಯ ನಿತ್ಯತ್ವವನ್ನು ಪ್ರತಿಪಾದಿಸುತ್ತಿರುವದು ಈ ಮಂತ್ರದಲ್ಲಿ ರುವ "ಸ್ವಸ್ರಾ-ಅಂಬಿಕಯಾ" ಎಂಬ ಪದಗಳನ್ನು ಪರ್ಯಾಲೋಚಿಸಿದರೆ ಪರಶಿವನಲ್ಲಿ ಶಕ್ತಿಯು ಸ್ವಭಾವ ಸಿದ್ಧವಾಗಿ ಯಾವಾಗಲೂ ಇರುವದೆಂದು ಸಿದ್ಧವಾಗುತ್ತದೆ.

"ನಮಃ ಸೋಮಾಯಚ ರುದ್ರಾಯಚ" |೫-೫-೮ ||

ಎಂಬ ತೈತ್ತಿರೀಯ ಸಂಹಿತೆಯ ಶ್ರೀ ರುದ್ರ ಮಂತ್ರದಿಂದಲೂ ಪರಶಿವನು ಉಮಾರೂಪ ಶಕ್ತಿಯುಕ್ತನಾಗಿರುವನೆಂದು ಸಿದ್ಧವಾಗುತ್ತದೆ. ಇದೇ ಅಭಿಪ್ರಾಯವನ್ನು ಕೈವಲ್ಯಶ್ರುತಿಯು— "ಉಮಾಸಹಾಯಂ ಪರಮೇಶ್ವರಂಪ್ರಭುಂ" | ೧-೭- || ಎಂಬ ಮಂತ್ರದಿಂದ ಪ್ರತಿಪಾದಿಸುತ್ತಿರುವದು.

ಮಾಯಾಂತು ಪ್ರಕೃತಿಂ ವಿದ್ಯಾನ್ಮಾಯಿನಂತು ಮಹೇಶ್ವರಂ ||೪-೧೦||
ಎಂಬ ಮಂತ್ರವೂ ಸಹ ಪರಶಿವನು ಶಕ್ತಿವಿಶಿಷ್ಟನಾಗಿರುವನೆಂದು ಬೋಧಿಸುತ್ತಿರುವದು. ಇಲ್ಲಿ ಮಾಯಾ ಶಬ್ದವನ್ನು ಕೇಳಿ ಕೇವಲಾದ್ವೈತಿಗಳು ಸಂತೋಷಪಡುವ ಕಾರಣವಿಲ್ಲ ಏಕೆಂದರೆ ಈ ಮಂತ್ರದಲ್ಲಿರುವ ಮಾಯಾ ಶಬ್ದದ ಅರ್ಥವು ಕೇವಲಾದ್ವೈತಿಗಳು ಹೇಳುವಂತೆ ಮೂಲಾವಿದ್ಯಾರೂಪ ಮಾಯೆಯಾಗಿರದೆ "ಮಂ ಶಿವಂ ಅಯತಿ-ಸ್ವಭಾವತಃ ಪ್ರಾಪ್ನೋತೀತಿ ಮಾಯಾ ಎಂದು" ವಿಗ್ರಹವಿರುವದರಿಂದ ವಿಮರ್ಶ ಶಕ್ತಿರೂಪ ಮಾಯೆಯಾಗಿರುತ್ತದೆ. ಈ ಮಂತ್ರಕ್ಕೆ ಇದೇ ಅರ್ಥವಿದೆಂಬುದನ್ನು ಸಿದ್ಧಾಗಮವು.

ಮಂ ಶಿವಂ ಪರಮಂ ಬ್ರಹ್ಮ ಪ್ರಾಪ್ನೋತೀತಿ ಸ್ವಭಾವತಃ |
ಮಾಯೇತಿಪ್ರೋಚ್ಯತೇಲೋಕೇ ಬ್ರಹ್ಮನಿಷ್ಠಾ ಸನಾತನೀ ||

ಎಂದು ಸ್ಫುಟವಾಗಿ ಘೋಷಿಸುತ್ತಿರುವದು- ಇದೇ ರೀತಿಯಾಗಿ ಇನ್ನೂ ಅನೇಕ ಶ್ರುತಿಗಳು ಶಕ್ತಿಯ ನಿತ್ಯತ್ವವನ್ನೂ ಪರಶಿವ ಸಮವೇತತ್ವವನ್ನೂ ಪ್ರತಿಪಾದಿಸುತ್ತಿರುವವು. ಇದೇ ಅಭಿಪ್ರಾಯವನ್ನೇ ಸಿದ್ಧಾಂತಶಿಖಾಮಣಿಯು

ಯಥಾ ಚಂದ್ರೇ ಸ್ಥಿರಾ ಜ್ಯೋತ್ಸ್ನಾ ವಿಶ್ವವಸ್ತುಪ್ರಕಾಶಿನೀ |
ತಥಾ ಶಕ್ತಿರ್ವಿಮರ್ಶಾಖ್ಯಾ ಪ್ರಕಾಶೇ ಬ್ರಹ್ಮಣಿ ಸ್ಥಿರಾ ||೩೨||

ಸಮಸ್ತ ವಸ್ತುಗಳನ್ನು ಪ್ರಕಾಶಪಡಿಸುವ ಚಂದ್ರಿಕೆಯು (ಬೆಳದಿಂಗಳು) ಚಂದ್ರನಲ್ಲಿ ಹೇಗೆ ಸ್ಥಿರವಾಗಿರುವದೋ, ಹಾಗೆಯೇ ಚರಾಚರಾತ್ಮಕವಾದ ಸಕಲ ಪದಾರ್ಥಗಳನ್ನು ಪ್ರಕಾಶಪಡಿಸುವ ವಿಮರ್ಶಶಕ್ತಿಯು ಪ್ರಕಾಶಸ್ವರೂಪನಾದ ಪರಶಿವನಲ್ಲಿ ಸ್ಥಿರವಾಗಿರುವದೆಂದು ಪ್ರತಿಪಾದಿಸುತ್ತಿರುವದು.

ವೀರಶೈವ ದರ್ಶನಕಾರರು ಮೂಲಾವಿದ್ಯಾರೂಪವಾದ ಮಾಯೆಯನ್ನೂ ವಿವರ್ತವಾದವನ್ನೂ ಒಪ್ಪುವದಿಲ್ಲ. ಕೇವಲಾದ್ವೈತಿಗಳು ಇವೆರಡನ್ನು ಅಂಗೀಕರಿಸುವದು ಏತಕ್ಕೆಂದರೆ, ಚೇತನವಾದ ಬ್ರಹ್ಮದ ಪರಿಣಾಮವೇ ಈ ಜಗತ್ತೆಂದು ಹೇಳಿದರೆ ಬ್ರಹ್ಮದಂತೆ ಜಗತ್ತಿಗೂ ಚೈತನ್ಯವು ಪ್ರಾಪ್ತವಾಗುತ್ತಿದೆ ಮತ್ತು ಚೇತನಾಚೇತನ (ಜಡಾಜಡ) ವೆಂಬ ವಿಭಾಗವೂ ಸಿದ್ಧವಾಗುವದಿಲ್ಲ. ಇದಲ್ಲದೆ "ಕೃತ್ಸ್ನಪ್ರಸಕ್ತಿರ್ನಿರವಯವತ್ವ ಶಬ್ದ ಕೋಪೋವಾ" ಬ್ರ-ಸೂ ೨-೧-೨೬ ಪರಿಣಾಮದಲ್ಲಿ ಸರ್ವಾತ್ಮನಾ ಪರಿಣಾಮವನ್ನು ಹೇಳಿದರೆ, ಒಂದು ಕೊಡ ಹಾಲಿನಲ್ಲಿ ಸರಿಯಾಗಿ ಹೆಪ್ಪು ಹಾಕಿದರೆ ಆ ಹಾಲೆಲ್ಲಾ ಮೊಸರಾಗುತ್ತದೆ. ಕೆಲವು ಭಾಗ ಮೊಸರಾಗಿ ಕೆಲವು ಭಾಗ ಹಾಲು ಶುದ್ಧವಾಗಿ ಉಳಿಯುವದಿಲ್ಲ ಅರ್ಥಾತ್ ಪೂರಾ ಹಾಲು ನಷ್ಟವಾಗಿ ಮೊಸರಾಗುತ್ತದೆ. ಇದರಂತೆ ಜಗತ್ತು ಬ್ರಹ್ಮದ ಪರಿಣಾಮವಾದರೆ ಪರಿಣತವಾದ ಜಗತ್ತೊಂದೇ ಉಳಿಯ

ಬೇಕಾಗುತ್ತದೆ ಬ್ರಹ್ಮವು ಉಳಿಯಲಾರದು ಅಥವಾ ಏಕದೇಶದಿಂದ ಪರಿಣಾಮವನ್ನು ಹೇಳಿದರೆ, ಬ್ರಹ್ಮವನ್ನು "ನಿರವಯುವ" ಎಂಬ ಶಬ್ದದಿಂದ ಕರೆಯುಬಾರದಾಗುತ್ತದೆ; ಅರ್ಥಾತ್ ಬ್ರಹ್ಮವು ಸಾವಯುವವಾಗುತ್ತದೆ. ಈ ದೋಷ ಪರಿಹಾರಕ್ಕಾಗಿ ಅದ್ವೈತಿಗಳು ಪರಿಣಾಮವಾದವನ್ನು ಅಂಗೀಕರಿಸುವದಿಲ್ಲ; ಹಾಗಾದರೆ ವೀರಶೈವರು ಮೇಲೆ ಹೇಳಿದ ದೋಷಗಳನ್ನು ಹೇಗೆ ಪರಿಹರಿಸಿಕೊಳ್ಳುವರೆಂಬ ಪ್ರಶ್ನೆಯು ಮುಂದೆ ಬರುತ್ತದೆ. ವೀರಶೈವರೊಬ್ಬರೇ ಏಕೆ ಶಂಕರಾಚಾರ್ಯರನ್ನು ಬಿಟ್ಟು ಉಳಿದವರಾರೂ ವಿವರ್ತವಾದವನ್ನು ಹೇಳುವದಿಲ್ಲ; ಇಷ್ಟೇ ಅಲ್ಲ ಶಂಕರಾಚಾರ್ಯರಿಗೂ ಮೂಲಪುರುಷನಾದ ಬ್ರಹ್ಮಸೂತ್ರಗಳನ್ನು ಸ್ವತಃ ರಚಿಸಿದಂತಹ ಬಾದರಾಯಣನೇ ಮೇಲೆ ಹೇಳಿದ ಸೂತ್ರದಿಂದ ಅದ್ವೈತಿಗಳು ಹೇಳುವ ದೋಷಗಳನ್ನು ಮನದಲ್ಲಿ ತಂದುಕೊಂಡು ಅದರ ಪರಿಹಾರಕ್ಕಾಗಿ ಕೆಲವು ಸೂತ್ರಗಳನ್ನೇ ರಚಿಸಿರುವನು. ಇತರರು ಕಷ್ಟಪಡಬೇಕಾದ ಕಾರಣವೇ ಇಲ್ಲ. ಹೇಗೆಂದರೆ "ದೃಶ್ಯತೇತು" ಬ್ರ. ಸೂ. ೨-೧-೬

ಇಚ್ಛಾಶಕ್ತಿಯ ವಶದಿಂದ ಬ್ರಹ್ಮವು ಚೇತನರೂಪವಾಗಿಯು ಅಥವಾ ಅಚೇತನರೂಪವಾಗಿಯು ಪರಿಣಮಿಸಬಹುದು. ಅಚೇತನವಾದ ಗೋಮಯದಿಂದ ಚೇತನವಾದ ಚೇಳಿನ ಉತ್ಪತ್ತಿಯೂ, ಚೇತನನಾದ ಮಾನವನಿಂದ ಅಚೇತನಗಳಾದ ನಖಕೇಶಾದಿಗಳ ಉತ್ಪತ್ತಿಯೂ ಲೋಕದಲ್ಲಿ ಕಂಡೇಕಾಣುತ್ತದೆ. ಆದುದರಿಂದ ಈ ದೋಷವು ಬರುವದಿಲ್ಲ ಮತ್ತು "ಆತ್ಮಕೃತೇಃ" ೨-೪-೨೬."ಪರಿಣಾಮಾತ್" ಬ್ರ.ಸೂ. ೨-೪-೨೭ ಈ ಸೂತ್ರದಲ್ಲಿ ಪರಿಣಾಮಶಬ್ದವನ್ನೇ ಸೂತ್ರಕಾರನು ಸ್ವತಃ ಹೇಳಿರುವನು. ಇದರಿಂದ ಸೂತ್ರಕಾರನಿಗೆ ಪರಿಣಾಮವಾದವೇ ಇಷ್ಟವಾಗಿದೆಂಬುದು ಕರತಲಾಮಲಕದಂತೆ ಸಿದ್ಧವಾಗುತ್ತದೆ. ಇದಲ್ಲದೆ ಪರಿಣಾಮದಲ್ಲಿ "ವಿಕೃತಪರಿಣಾಮ" "ಅವಿಕೃತಪರಿಣಾಮ" ಎಂದು ಎರಡು ವಿಧವಿರುತ್ತದೆ. ಮೊದಲಿದ್ದದ್ದು ತನ್ನ ಸ್ವರೂಪವನ್ನು ಕಳೆದುಕೊಂಡು ಬೇರೆ ರೂಪವನ್ನು ಹೊಂದುವದಕ್ಕೆ ವಿಕೃತ ಪರಿಣಾಮವೆನ್ನುವರು. ಹಾಲು ಕೆಟ್ಟು ಮೊಸರಾಗುವದು. ಮೊದಲಿದ್ದದ್ದು ತನ್ನ ಸ್ವರೂಪವನ್ನು ಕಳೆದುಕೊಳ್ಳದೇ ಬೇರೆ ರೂಪವನ್ನು ಹೊಂದುವದಕ್ಕೆ ಅವಿಕೃತಪರಿಣಾಮವೆನ್ನುವರು. ಸುವರ್ಣಕಟಕ, ಅಹಿಕುಂಡಲದಂತೆ ಬಂಗಾರವು ತನ್ನ ಸ್ವರೂಪವನ್ನು ಕಳೆದುಕೊಳ್ಳದೆ ಆಭರಣಗಳಾದಂತೆ ಈ ಪರಿಣಾಮವನ್ನೇ ಸೂತ್ರಕಾರನು "ಉಭಯವ್ಯಪದೇಶಾತ್ತು ಅಹಿಕುಂಡಲವತ್" ಬ್ರ. ಸೂ. ೩-೨-೨೭ ಇತಿ "ಅಶ್ಮಾದಿವಚ್ಚ ತದನುಪಪತ್ತಿಃ ಬ್ರ. ಸೂ. ೨-೧-೨೩ ಇತಿ ಚ ಈ ಸೂತ್ರಗಳಿಂದ ಕ್ಷೀರದಧಿನ್ಯಾಯದಿಂದ ಪೂರ್ವಪಕ್ಷವನ್ನು ಎತ್ತಿಕೊಂಡು ಅಹಿಕುಂಡಲ ನ್ಯಾಯದಿಂದ ಪರಿಹಾರ ಮಾಡಿರುವುದರಿಂದ ಸೂತ್ರಕಾರನಿಗೆ ಅವಿಕೃತಪರಿಣಾಮವಾದವೇ ಪ್ರಿಯತಮವಾದುದೆಂದು ಸಿದ್ಧವಾಗುತ್ತದೆ. ಈ ಅವಿಕೃತ ಪರಿಣಾಮವಾದವನ್ನೇ ವೀರಶೈವರು ಹೇಳುತ್ತಿರುವುದರಿಂದ ಅದ್ವೈತಿಗಳು ಮೇಲೆ ತೋರಿಸಿದ ಯಾವ ದೋಷವೂ ಬರುವದಿಲ್ಲ.

## ಮಾಯಾವಾದನಿರಾಕರಣ

ಇದರಿಂದ (ಅದಲ್ಲದುದರಲ್ಲಿ ಅದೆಂಬ ಬುದ್ಧಿಯನ್ನು ಹುಟ್ಟಿಸುವಂತಹ ವಿವರ್ತ ವನ್ನು ಅಂಗೀಕರಿಸುವ ಪ್ರಸಂಗವೇ ಇಲ್ಲದುದರಿಂದ) ಈ ವಿವರ್ತದ ಸಮರ್ಥನೆಗಾಗಿ ಅಂದರೆ ಅದಲ್ಲದುದರಲ್ಲಿ ಅದೆಂಬ ಬುದ್ಧಿಯು ಹೇಗೆ ಹುಟ್ಟುತ್ತದೆ ಎಂಬ ಸಂದೇಹ ಪರಿಹಾರಕ್ಕಾಗಿ (ಅವಿದ್ಯಾಪ್ರಭಾವದಿಂದಲೇ ಆ ತರಹದ ಬುದ್ಧಿಯು ಹುಟ್ಟುತ್ತದೆಂದು ಹೇಳುವದಕ್ಕಾಗಿ) ಅಂಗೀಕರಿಸಬೇಕಾದ ಮಾಯೆಯನ್ನು ಸ್ವೀಕರಿಸುವ ಕಾರಣವಿಲ್ಲ.

ಈ ಮಾಯಾವಾದ ನಿರಾಕರಣವನ್ನು ವೀರಶೈವ ದರ್ಶನಕಾರರು ಬಹು ವಿಸ್ತಾರವಾಗಿ ಶಿವಾದ್ವೈತಮಂಜರೀ ಮುಂತಾದ ಗ್ರಂಥಗಳಲ್ಲಿ ಮಾಡಿರುವರು. ಅದೆಲ್ಲವನ್ನು ಇಲ್ಲಿ ವಿವರಿಸಲು ಸಾಧ್ಯವಿಲ್ಲ. ಆಯಾಯ ಗ್ರಂಥದಿಂದಲೇ ತಿಳಿದು ಕೊಳ್ಳಬೇಕು.

## ಸೃಷ್ಟಿ ಪ್ರಳಯ ಶಬ್ದಗಳ ವಿಚಾರ

ಸೃಷ್ಟಿ, ಪ್ರಳಯ ಶಬ್ದಗಳಿಗೆ ವೀರಶೈವರು ಹೇಳುವ ಪಾರಿಭಾಷಿಕಾರ್ಥಗಳನ್ನು ತಿಳಿದುಕೊಳ್ಳಬೇಕು. ಸಾಮಾನ್ಯವಾಗಿ ಒಬ್ಬನು ಅನೇಕ ಸಾಮಾನುಗಳನ್ನು (ಕಲ್ಲು, ಮಣ್ಣು, ಕಟಿಗಿ, ಕಬ್ಬಿಣ ಮುಂತಾದವನ್ನು) ಸಂಗ್ರಹಿಸಿ ಒಂದು ಗೃಹವನ್ನು ಸೃಷ್ಟಿಮಾಡುವಂತೆ, ಕುಂಬಾರನು ಮಣ್ಣು ತಂದು ನೆನೆಯಿಟ್ಟು ಚಕ್ರಚೀವರಾದಿಗಳ ಸಹಾಯದಿಂದ ಅದನ್ನೆ ಗಡಿಗಿ ಮಡಿಕೆಗಳನ್ನು ಮಾಡುವಂತೆ ಶಿವನು ಬೇರೆ ಬೇರೆ ಪದಾರ್ಥಗಳನ್ನು ಸಂಗ್ರಹಿಸಿ ಈ ಜಗತ್ತನ್ನು ಹುಟ್ಟಿಸುವದಿಲ್ಲ; ಆದರೆ ಜೇಡರ ಹುಳವು ಬೇರೆ ಸಾಮುಗ್ರಿಗಳಿಂದ ಜಾಳಿಗೆಯನ್ನು ಹೆಣೆಯದೆ ತನ್ನ ಶರೀರವನ್ನೇ ಜಾಳಿಗಿಯ ರೂಪವಾಗಿ ಮಾಡುವಂತೆ ಪರಶಿವನಲ್ಲಿ ಅವಿನಾಭಾವಸಂಬಂಧದಿಂದಿರುವ ಶಕ್ತಿಯ ವಿಕಾಸವೇ ಸೃಷ್ಟಿಯು; ಆ ಶಕ್ತಿಯ ಸಂಕೋಚವೇ ಲಯವು. ಇದಕ್ಕೆ ಸುಂದರವಾದ ಎರಡು ದೃಷ್ಟಾಂತಗಳನ್ನು ನೋಡಿರಿ. ಶ್ರೀ ಭಗವತ್ಪಾದರಾದ ಜಗದ್ಗುರು ರೇಣುಕಾಚಾರ್ಯರು ಸಿದ್ಧಾಂತ ಶಿಖಾಮಣಿಯಲ್ಲಿ ಸೃಷ್ಟಿಯು ಬೆಗ್ಗೆ—

ಆತ್ಮಶಕ್ತಿವಿಕಾಸೇನ ಶಿವೋ ವಿಶ್ವಾತ್ಮನಾ ಸ್ಥಿತಃ।
ಕುಟೀಭಾವಾದ್ಯಥಾ ಭಾತಿ ಪಟಃ ಸ್ವಸ್ಯ ಪ್ರಸಾರಣಾತ್ ॥ ೧೦–೫ ।

ಚತುರನಾದ ಸಿಂಪಿಗನು ಒಂದು ಥಾನು ಹೊಸ ಅರಿವಿಯನ್ನು ತೆಗೆದುಕೊಂಡು ವಸ್ತ್ರಮಂದಿರವ (ಢೇರೆಯ) ನ್ನು ಹೊಲಿದು ಮಡಿಚಿ ಗಂಟುಕಟ್ಟಿರುವನೆಂದು ತಿಳಿದುಕೊಳ್ಳೋಣ, ಮಡಿಚಿದಂತಹ ಪಟವನ್ನು ಬಿಚ್ಚಿ ಹರವಿದರೆ ಅದರಲ್ಲಿ ನಾನಾ ಭಾಗಗಳು ಪಾಕಶಾಲಾ, ಭೋಜನಾಲಯ, ಪೂಜಾಮಂದಿರ, ಶಯನಗೃಹ, ಸಭಾ ಭವನ (ದರ್ಬಾರ ಹಾಲ್) ಮೊದಲಾದವುಗಳಿಂದ ಕೂಡಿದ ನೂತನವಾದ

ಒಂದು ಗೃಹವು ತಯಾರಾಗುವದು. ಇಲ್ಲಿ ಪಟವನ್ನು ವಿಸ್ತರಿಸಿದಾಗ ಮನೆಯ ಉತ್ಪತ್ತಿಯನ್ನು ಮಡಿಚಿ ಗಂಟುಕಟ್ಟಿದಾಗ ಮನೆಯ ನಾಶವನ್ನು ಹೇಳುವದು ಹೇಗೆ ಹಾಸ್ಯಾಸ್ಪದವಾಗುವದೊ, ಮತ್ತು ಒಂದು ಮಡುವಿನಲ್ಲಿ ಒಂದು ಆಮೆಯು ವಾಸಮಾಡಿಕೊಂಡಿದೆ ಆ ಆಮೇಯು ಒಂದು ಸಮಯದಲ್ಲಿ ತನ್ನ ಎಲ್ಲಾ ಕಾಲುಗಳನ್ನು ಹೊರಗೆ ತೆಗೆದು ಪ್ರಸರಿಸಿ ನೀರಲ್ಲಿ ಈಸಾಡುತ್ತದೆ. ಮತ್ತೊಂದು ಸಮಯದಲ್ಲಿ ಎಲ್ಲಾ ಕಾಲುಗಳನ್ನು ತನ್ನಲ್ಲಿ ಸೇರಿಸಿಕೊಂಡು ಸುಮ್ಮನೇಕೂತಿರುತ್ತದೆ. ಇಲ್ಲಿ ಆಮೆಯು ತನ್ನ ಕಾಲುಗಳನ್ನು ಪ್ರಸರಿಸಿದ ಕಾಲದಲ್ಲಿ ಕಾಲುಗಳ ಸೃಷ್ಟಿಯನ್ನು ತನ್ನಲ್ಲಿ ಅಡಗಿಸಿಕೊಂಡಾಗ ಕಾಲುಗಳ ನಾಶವನ್ನು ಹೇಳುವದು, ಹೇಗೆ ಹಾಸ್ಯಾಸ್ಪದವೋ ಹಾಗೆಯೇ ಪರಶಿವನು ತನ್ನಲ್ಲಿ ನಿತ್ಯವಾಗಿ ಅವಿನಾಭಾವ ಸಂಬಂಧದಿಂದರುವ ಶಕ್ತಿಯ ವಿಕಾಸರೂಪವಾದ ಜಗತ್ತನ್ನು ಒಂದು ಕಾಲದಲ್ಲಿ ಲೀಲೆಗಾಗಿ ವಿಕಾಸ ಭಾವವನ್ನು (ಹೊರಗೆ ಹಾಕುವಿಕೆಯನ್ನು) ಮತ್ತೊಂದು ಸಮಯದಲ್ಲಿ (ಲಿಲೆಯು ಮುಗಿದಕೂಡಲೆ) ಸಂಕೋಚಭಾವವ (ತನ್ನಲ್ಲಿ ಅಡಗಿಸಿಕೊಳ್ಳುವಿಕೆಯು) ನ್ನು ಮಾಡುತ್ತಾನೆ. ಇಂಥಾ ಪರಿಸ್ಥಿತಿಯಲ್ಲಿ ಸತ್ಯ ಮತ್ತು ನಿತ್ಯವಾದ ಈ ಪ್ರಪಂಚದ ಉತ್ಪತ್ತಿಯನ್ನು ಮತ್ತು ನಾಶವನ್ನು ಹೇಳುವದು ಹಾಸ್ಯಾಸ್ಪದವಾಗುವದು. ಆದುದರಿಂದ ಸೃಷ್ಟಿ ಮತ್ತು ಪ್ರಳಯ ಶಬ್ದಗಳಿಗೆ ವೀರಶೈವದರ್ಶನಕಾರರು ಶಕ್ತಿಯ ವಿಕಾಸ- ಮತ್ತು ಶಕ್ತಿಯ ಸಂಕೋಚ ಎಂದು ಪಾರಿಭಾಷಿಕಾರ್ಥವನ್ನು ಹೇಳುವರು.

## ವೀರಶೈವರ ವೈಶಿಷ್ಟ್ಯ

ಶಂಕರಾಚಾರ್ಯರ ಭಾಷ್ಯಕ್ಕೆ ಮೂಲಭೂತವಾದ ಬ್ರಹ್ಮಸೂತ್ರಗಳನ್ನು ಬರೆದ ಬಾದರಾಯಣ ಮುನಿಯು, ಜಲ (ವರುಣ) ಅಗ್ನಿ, ವಾಯು ಮುಂತಾದ ಸಣ-ಪುಟ್ಟ ದೇವರನ್ನು ಮತ್ತು ಬ್ರಹ್ಮ, ವಿಷ್ಣು, ರುದ್ರ, ಈಶ್ವರ, ಶಕ್ತಿ ಮುಂತಾದ ವಿಶಿಷ್ಟ ದೇವರನ್ನು ಮೂಲವಸ್ತುವೆಂದು ಭಾವಿಸುವವರಿಗೆ ಇವೆಲ್ಲ ಕಾರ್ಯ ಕೋಟಿಯಲ್ಲಿ (ಪ್ರವೃತ್ತಿ ಮಾರ್ಗದಲ್ಲಿ) ಸೇರಿರುವವು ಇವುಗಳಿಗೆಲ್ಲಾ ಮೂಲ ವಾದ ವಸ್ತುವು ಬ್ರಹ್ಮವಿರುತ್ತದೆಂದು "ಯತೋವಾ ಇಮಾನಿ ಭೂತಾನಿ ಜಾಯಂತೇ ಯೇನ ಜಾತಾನಿ ಜೀವಂತಿ ಯತ್ಪ್ರಯಂತ್ಯಭಿಸಂವಿಶಂತಿ, ಸತ್ಯಂ ಜ್ಞಾನಮಾನಂದಂ ಬ್ರಹ್ಮ" ಇತ್ಯಾದಿ ಶ್ರುತಿ ವಾಕ್ಯಗಳ ಸಾರಸಂಗ್ರಹದಿಂದ "ಅಥಾತೋ ಬ್ರಹ್ಮ ಜಿಜ್ಞಾಸಾ" ಇತ್ಯಾದಿ ತನ್ನ ಸೂತ್ರಗಳಲ್ಲಿ ಹೇಳಿರುವನು. ಈ ಸೂತ್ರಗಳಿಗೆ ಭಾಷ್ಯ ವನ್ನು ಬರೆಯುವಾಗ ಶಂಕರಾಚಾರ್ಯರು-ಬ್ರಹ್ಮರು ಒಂಭತ್ತುಜನರಿದ್ದು ಇವ ರಲ್ಲಿ ಸೃಷ್ಟಿ ಕಾರ್ಯದಲ್ಲಿ ನಿಯುಕ್ತನಾದ ಚತುರ್ಮುಖ ಬ್ರಹ್ಮನೂ ಒಬ್ಬನಿರು ವದರಿಂದ ಇವರೆಲ್ಲರೂ ಮೂಲ ವಸ್ತುವಲ್ಲ ಇವರೆಲ್ಲರಿಗೂ ಕಾರಣೀಭೂತವಾದ

ಸತ್ತು, ಚಿತ್ತು, ಆನಂದ ನಿತ್ಯ ಪರಿಪೂರ್ಣ ಎಂಬ ಪಂಚಲಕ್ಷಣ ಲಕ್ಷಿತವಾದದ್ದು ಮೂಲ ವಸ್ತುವು ಅದಕ್ಕೆ ಪರಬ್ರಹ್ಮವೆನ್ನಬೇಕೆಂದು ಸಿದ್ಧಮಾಡಿರುವರು.

ವೀರಶೈವ ದರ್ಶನಕಾರರು ಶಿವಶರಣರೂ, ಶಂಕರಾಚಾರ್ಯರು ಹೇಳುವ ಪಂಚಲಕ್ಷಣ ಲಕ್ಷಿತವಾದ ಪರಬ್ರಹ್ಮವೂ ಮೂಲ ವಸ್ತುವಲ್ಲ ನಿಜವಾದ ಮೂಲ ವಸ್ತುವಿನ ಸ್ವರೂಪವನ್ನು ಹೇಳುವದು ಶ್ರುತಿಗಳಿಗೂ ಸಾಧ್ಯವಿಲ್ಲವೆಂದು ಸ್ಪಷ್ಟ ವಾಗಿ ಹೇಳಿರುವರು. ಇದೇ ಕ್ಷೇತ್ರಜ್ಞ ಸಮನೋವಾದದ ವಸ್ತು ನಿರ್ದೇಶ ಸ್ಥಲದ ಕೆಳಗಿನ ಪದ್ಯವನ್ನು, ಶಿವಶರಣರ ವಚನವನ್ನೂ ನೋಡಿರಿ.

ಅರಿವು ಮರವೆಗಳಿಲ್ಲ ಪೆರತೊಂ
ದರಿವಿಗರಸದ ನಿರುಗೆ ತೆರೆ-ಮರೆ
ತೆರಹು ಕುರುಹುಗಳಿಲ್ಲ ತಾಂ ಪಿರಿದಲ್ಲ ದಿಹ ಬಚ್ಚ
ಬರಿಯರಿವು ಕರಿಗೊಂಡು ಮಿರುಗುವ
ಬೆರಗು ನಿಬ್ಬೆರಗಲ್ಲದಿಹ ನಿಜ
ವರಿಯಬಾರದೆನುತ್ತೆ ಶ್ರುತಿ ಬಾಯ್ದೆರೆಯಲಂಜಿಹವು ‖ ೯ ‖

### ವಚನ

ಧರೆಯಾಕಾಶವಿಲ್ಲದಂದು, ತ್ರೈಮಂಡಲ ನೆಲೆಗೊಳ್ಳದಂದು, ಹೋಮ, ನೇಮ, ಜಪ, ತಪವಿಲ್ಲದಂದು, ನಿಮ್ಮನಾರು ಬಲ್ಲರು, ಹರಿಬ್ರಹ್ಮರಿಗೆ ಅಗೋಚರ ನಿರ್ಲೇಪ ನಿರಂಜನನಾಗಿ ವೇದಗಳು ನಿಮ್ಮ ನರಿಯವು ಶಾಸ್ತ್ರ ಶ್ರುತಿ ಸ್ಮೃತಿಗಳು ನಿಮ್ಮನರಿಯವು ಗಗನ ಕುಸುಮ ಪರಿಮಳ ದಿಂದತ್ತಲು ಗುಹೇಶ್ವರಾ ನಿಮ್ಮ ನಿಲವನಾರು ಬಲ್ಲರು.

ಮೂಲ ವಸ್ತುವಿನ ಸ್ವರೂಪವು ಅರಿಯಲಿಕ್ಕೆ ಸಾಧ್ಯವಿಲ್ಲದುದರಿಂದ ಅದರ ಸ್ವರೂಪವನ್ನು ಹೇಳುವದಕ್ಕಾಗಿ ಬಾಯ್ದೆರೆಯಲು ಶ್ರುತಿಗಳು ಹೆದರಿದವೆಂದು ಗ್ರಂಥ ಕಾರರೂ ಮತ್ತು ಗಗನ ಕುಸುಮವೇ ಅಗೋಚರವಾದುದು ಅಂದಬಳಿಕ ಅದರ ಪರಿಮಳವಂತೂ ಸುತರಾಂ ಅಗೋಚರವಾದದ್ದು, ಮೂಲ ವಸ್ತುವಿನ ಸ್ವರೂಪವು ಗಗನ ಕುಸುಮದ ಪರಿಮಳಕ್ಕಿಂತಲೂ ಅತ್ತತ್ತ ಎಂದಬಳಿಕ ಅದರ ಸ್ವರೂಪವು ಯಾರಿಗೂ ತಿಳಿಯಲು ಸಾಧ್ಯವಿಲ್ಲವೆಂದೇ ಪ್ರಭುದೇವರು ಹೇಳಿದಂತಾಯಿತು.

ಶಂಕರಾಚಾರ್ಯರು ಹೇಳುವ ಪಂಚಲಕ್ಷಣ ಲಕ್ಷಿತ ಪರಬ್ರಹ್ಮಕ್ಕೆ ವೀರ ಶೈವರು ನಿಷ್ಕಲ ಶಿವತತ್ವವೆಂದು ಕರೆಯುವರು. ಈ ನಿಷ್ಕಲ ಶಿವತತ್ವವೂ ಮೂಲ ವಸ್ತುವಲ್ಲವೆಂದೂ ಇದಕ್ಕೂ ಮೂಲವಾದ ವಸ್ತುವಿಗೆ ಶೂನ್ಯವೆನ್ನುವ

ರೆಂದೂ ಈ ಶೂನ್ಯಕ್ಕೂ ಮೂಲವಾದ ವಸ್ತುವಿಗೆ "ಸರ್ವ ಶೂನ್ಯ ನಿರಾಲಂಬ" ವೆನ್ನುವರೆಂದೂ ಈ ಗ್ರಂಥಕಾರರೂ ಮತ್ತು ಅನಾದಿ ನಿರಂಜನ ಜಗದ್ಗುರು ಸಿದ್ಧಲಿಂಗ ಮಹಾ ಶಿವಯೋಗಿಗಳೂ ಹೇಳಿರುವರು.

### ವಚನ

ಬ್ರಹ್ಮ ವಿಷ್ಣು ರುದ್ರ ಈಶ್ವರ ಸದಾಶಿವ ಎಂಬ ಪಂಚಾಧಿದೇವತೆಗಳಿಲ್ಲ
ದಂದು, ಈ ಪಂಚ (ಐವರ) ಲಯ ಗಮನಂಗಳಿಗೆ ಕಾರಣವಾದ ಶಿವಶಕ್ತಿ
ಇಲ್ಲದಂದು, ಈ ಶಿವಶಕ್ತಿಗೆ ಕಾರಣವಾದ ಸತ್ತು, ಚಿತ್ತು, ಆನಂದ, ನಿತ್ಯ
ಪರಿಪೂರ್ಣ ಎಂಬ ನಿಷ್ಕಲ ಶಿವತತ್ವವಿಲ್ಲದಂದು, ನೀನು ಶೂನ್ಯನಾಗಿ
ಇದ್ದೆಯಯ್ಯ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ ||

### ವಚನ

ಪೃಥ್ವಿ, ಅಪು, ತೇಜ, ವಾಯು, ಆಕಾಶ, ಚಂದ್ರ, ಸೂರ್ಯ, ಆತ್ಮ
ಎಂಬ ಅಷ್ಟ ತನು ಮೂರ್ತಿ ಸ್ವರೂಪಗೊಳ್ಳದಂದು, ನಾನು ನೀನೆಂಬ
ಭ್ರಾಂತಿ ಸೂತಕ ಹುಟ್ಟದಂದು, ನಾಮ ರೂಪ ಕ್ರಿಯಂಗಳೇನೂ
ಇಲ್ಲದಂದು, ಸರ್ವಶೂನ್ಯವಾಗಿ ನಿರಾಲಂಬವಾಗಿ ಇರ್ದೆ
ಯಲ್ಲಾ ನೀನು ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ ||

### ಪದ್ಯ

ಮುಂತೆ ತಾನೇ ತಾನು ತನ್ನಿರ
ವೆಂತು ಟೆಂದು ವಿಭಾಗಿಸದೆ ನಿ
ಶ್ಚಿಂತ ಮಾಗೊಪ್ಪಿಹ ಮಹಾಘನದಲ್ಲಿ ಏವೇಳ್ವೆಂ ||
ಕೇಳನಾದಿಯ ಶರಣಲಿಂಗಸ
ಮೇಳವವಿರಳ ಸರ್ವ ಶೂನ್ಯ ನಿ
ರಾಳದೊಳು ಚಿತ್ತೆಂಬುದೊಂದು ಸುಬಿಂದು ಸಂಜನಿಸಿ ||

ಅರ್ಥಾತ್ ವೀರಶೈವರ ಸಿದ್ಧಾಂತದಲ್ಲಿ "ಸರ್ವ ಶೂನ್ಯ ನಿರಾಲಂಬ" ಎಂಬುದೇ ಮೂಲ ವಸ್ತುವು. ಈ ಸರ್ವಶೂನ್ಯ ನಿರಾಕಾರವಾದ ಪರವಸ್ತುವು ಪ್ರವೃತ್ತಿ ಮಾರ್ಗದೊಳು ಅನಿರ್ವಾಚ್ಯವಾದ ಶೂನ್ಯ ಸ್ಥಲವನ್ನು ಹೊಂದುವದು. ಅನಿರ್ವಾಚ್ಯವಾದ ಈ ಮಹಾ ಶೂನ್ಯ ಸ್ಥಲವನ್ನು ಹೊಂದಿದ ಪರವಸ್ತು ಪ್ರವೃತ್ತಿ ಮಾರ್ಗ ಕ್ರಮದಲ್ಲಿ ನಿಷ್ಕಲ ಲಿಂಗ ಸ್ಥಲವನ್ನು ಹೊಂದುವದು. ಈ ನಿಷ್ಕಲ ಶಿವ

ಸತ್ತು, ಚಿತ್ತು, ಆನಂದ ನಿತ್ಯ ಪರಿಪೂರ್ಣ ಎಂಬ ಪಂಚಲಕ್ಷಣ ಲಕ್ಷಿತವಾದದ್ದು ಮೂಲ ವಸ್ತುವು ಅದಕ್ಕೆ ಪರಬ್ರಹ್ಮವೆನ್ನಬೇಕೆಂದು ಸಿದ್ಧಮಾಡಿರುವರು.

ವೀರಶೈವ ದರ್ಶನಕಾರರು ಶಿವಶರಣರೂ, ಶಂಕರಾಚಾರ್ಯರು ಹೇಳುವ ಪಂಚಲಕ್ಷಣ ಲಕ್ಷಿತವಾದ ಪರಬ್ರಹ್ಮವೂ ಮೂಲ ವಸ್ತುವಲ್ಲ ನಿಜವಾದ ಮೂಲ ವಸ್ತುವಿನ ಸ್ವರೂಪವನ್ನು ಹೇಳುವದು ಶ್ರುತಿಗಳಿಗೂ ಸಾಧ್ಯವಿಲ್ಲವೆಂದು ಸ್ಪಷ್ಟ ವಾಗಿ ಹೇಳಿರುವರು. ಇದೇ ಕ್ಷೇತ್ರಜ್ಞ ಸಮನೋವಾದದ ವಸ್ತು ನಿರ್ದೇಶ ಸ್ಥಲದ ಕೆಳಗಿನ ಪದ್ಯವನ್ನು, ಶಿವಶರಣರ ವಚನವನ್ನೂ ನೋಡಿರಿ.

ಅರಿವು ಮರವೆಗಳಿಲ್ಲ ಪೆರತೊಂ
ದರಿವಿಗರಸದ ನಿರುಗೆ ತೆರೆ-ಮರೆ
ತೆರಹು ಕುರುಹುಗಳಿಲ್ಲ ತಾಂ ಸಿರಿದಲ್ಲ ದಿಹ ಬಚ್ಚ
ಬರಿಯರಿವು ಕರಿಗೊಂಡು ಮಿರುಗುವ
ಬೆರಗು ನಿಬ್ಬೆರಗಲ್ಲದಿಹ ನಿಜ
ವರಿಯಬಾರದೆನುತ್ತೆ ಶ್ರುತಿ ಬಾಯ್ದೆರೆಯಲಂಜಿಹವು ‖ ೯ ‖

## ವಚನ

ಧರೆಯಾಕಾಶವಿಲ್ಲದಂದು, ತ್ರೈಮಂಡಲ ನೆಲೆಗೊಳ್ಳದಂದು, ಹೋಮ, ನೇಮ, ಜಪ, ತಪವಿಲ್ಲದಂದು, ನಿಮ್ಮನಾರು ಬಲ್ಲರು, ಹರಿಬ್ರಹ್ಮರಿಗೆ ಅಗೋಚರ ನಿರ್ಲೇಪ ನಿರಂಜನನಾಗಿ ವೇದಗಳು ನಿಮ್ಮ ನರಿಯವು ಶಾಸ್ತ್ರ ಶ್ರುತಿ ಸ್ಮೃತಿಗಳು ನಿಮ್ಮನರಿಯವು ಗಗನ ಕುಸುಮ ಪರಿಮಳ ದಿಂದತ್ತಲು ಗುಹೇಶ್ವರಾ ನಿಮ್ಮ ನಿಲವನಾರು ಬಲ್ಲರು.

ಮೂಲ ವಸ್ತುವಿನ ಸ್ವರೂಪವು ಅರಿಯಲಿಕ್ಕೆ ಸಾಧ್ಯವಿಲ್ಲದುದರಿಂದ ಅದರ ಸ್ವರೂಪವನ್ನು ಹೇಳುವದಕ್ಕಾಗಿ ಬಾಯ್ದೆರೆಯಲು ಶ್ರುತಿಗಳು ಹೆದರಿದವೆಂದು ಗ್ರಂಥ ಕಾರರೂ ಮತ್ತು ಗಗನ ಕುಸುಮವೇ ಅಗೋಚರವಾದುದು ಅಂದಬಳಿಕ ಅದರ ಪರಿಮಳವಂತೂ ಸುತರಾಂ ಅಗೋಚರವಾದದ್ದು, ಮೂಲ ವಸ್ತುವಿನ ಸ್ವರೂಪವು ಗಗನ ಕುಸುಮದ ಪರಿಮಳಕ್ಕಿಂತಲೂ ಅತ್ತತ್ತ ಎಂದಬಳಿಕ ಅದರೆ ಸ್ವರೂಪವು ಯಾರಿಗೂ ತಿಳಿಯಲು ಸಾಧ್ಯವಿಲ್ಲವೆಂದೇ ಪ್ರಭುದೇವರು ಹೇಳಿದಂತಾಯಿತು.

ಶಂಕರಾಚಾರ್ಯರು ಹೇಳುವ ಪಂಚಲಕ್ಷಣ ಲಕ್ಷಿತ ಪರಬ್ರಹ್ಮಕ್ಕೆ ವೀರ ಶೈವರು ನಿಷ್ಕಲ ಶಿವತತ್ವವೆಂದು ಕರೆಯುವರು. ಈ ನಿಷ್ಕಲ ಶಿವತತ್ವವೂ ಮೂಲ ವಸ್ತುವಲ್ಲವೆಂದೂ ಇದಕ್ಕೂ ಮೂಲವಾದ ವಸ್ತುವಿಗೆ ಶೂನ್ಯವೆನ್ನುವ

ರೆಂದೂ ಈ ಶೂನ್ಯಕ್ಕೂ ಮೂಲವಾದ ವಸ್ತುವಿಗೆ "ಸರ್ವ ಶೂನ್ಯ ನಿರಾಲಂಬ"ವೆನ್ನುವರೆಂದೂ ಈ ಗ್ರಂಥಕಾರರೂ ಮತ್ತು ಅನಾದಿ ನಿರಂಜನ ಜಗದ್ಗುರು ಸಿದ್ಧಲಿಂಗ ಮಹಾ ಶಿವಯೋಗಿಗಳೂ ಹೇಳಿರುವರು.

### ವಚನ

ಬ್ರಹ್ಮ ವಿಷ್ಣು ರುದ್ರ ಈಶ್ವರ ಸದಾಶಿವ ಎಂಬ ಪಂಚಾಧಿದೇವತೆಗಳಿಲ್ಲ
ದಂದು, ಈ ಪಂಚ (ಐವರ) ಲಯ ಗಮನಂಗಳಿಗೆ ಕಾರಣವಾದ ಶಿವಶಕ್ತಿ
ಇಲ್ಲದಂದು, ಈ ಶಿವಶಕ್ತಿಗೆ ಕಾರಣವಾದ ಸತ್ತು, ಚಿತ್ತು, ಆನಂದ, ನಿತ್ಯ
ಪರಿಪೂರ್ಣ ಎಂಬ ನಿಷ್ಕಲ ಶಿವತತ್ವವಿಲ್ಲದಂದು, ನೀನು ಶೂನ್ಯನಾಗಿ
ಇದ್ದೆಯಯ್ಯ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ ||

### ವಚನ

ಪೃಥ್ವಿ, ಅಪು, ತೇಜ, ವಾಯು, ಆಕಾಶ, ಚಂದ್ರ, ಸೂರ್ಯ, ಆತ್ಮ
ಎಂಬ ಅಷ್ಟ ತನು ಮೂರ್ತಿ ಸ್ವರೂಪಗೊಳ್ಳದಂದು, ನಾನು ನೀನೆಂಬ
ಭ್ರಾಂತಿ ಸೂತಕ ಹುಟ್ಟದಂದು, ನಾಮ ರೂಪ ಕ್ರಿಯಂಗಳೇನೂ
ಇಲ್ಲದಂದು, ಸರ್ವಶೂನ್ಯವಾಗಿ ನಿರಾಲಂಬವಾಗಿ ಇರ್ದೆ
ಯಲ್ಲಾ ನೀನು ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ ||

### ಪದ್ಯ

ಮುಂತೆ ತಾನೇ ತಾನು ತನ್ನಿರ
ವೆಂತು ಟೆಂದು ವಿಭಾಗಿಸದೆ ನಿ
ಶ್ಚಿಂತ ಮಾಗೊಪ್ಪಿಹ ಮಹಾಘನದಲ್ಲಿ ಏವೇಳ್ವೆಂ ||
ಕೇಳನಾದಿಯ ಶರಣಲಿಂಗಸ
ಮೇಳವವಿರಳ ಸರ್ವ ಶೂನ್ಯ ನಿ
ರಾಳದೊಳು ಚಿತ್ತೆಂಬುದೊಂದು ಸುಬಿಂದು ಸಂಜನಿಸಿ ||

ಅರ್ಥಾತ್ ವೀರಶೈವರ ಸಿದ್ಧಾಂತದಲ್ಲಿ "ಸರ್ವ ಶೂನ್ಯ ನಿರಾಲಂಬ" ಎಂಬುದೇ ಮೂಲ ವಸ್ತುವು. ಈ ಸರ್ವಶೂನ್ಯ ನಿರಾಕಾರವಾದ ಪರವಸ್ತುವು ಪ್ರವೃತ್ತಿ ಮಾರ್ಗದೊಳು ಅನಿರ್ವಾಚ್ಯವಾದ ಶೂನ್ಯ ಸ್ಥಲವನ್ನು ಹೊಂದುವದು. ಅನಿರ್ವಾಚ್ಯವಾದ ಈ ಮಹಾ ಶೂನ್ಯ ಸ್ಥಲವನ್ನು ಹೊಂದಿದ ಪರವಸ್ತು ಪ್ರವೃತ್ತಿ ಮಾರ್ಗ ಕ್ರಮದಲ್ಲಿ ನಿಷ್ಕಲ ಲಿಂಗ ಸ್ಥಲವನ್ನು ಹೊಂದುವದು. ಈ ನಿಷ್ಕಲ ಶಿವ

ತತ್ವವೇ ಸತ್, ಚಿತ್, ಆನಂದ, ನಿತ್ಯ ಪರಿಪೂರ್ಣ ಎಂಬ ಪಂಚ ಲಕ್ಷಣ ಲಕ್ಷಿತ ವಾದುದು. ಈ ಪಂಚ ಲಕ್ಷಣವುಳ್ಳ ವಸ್ತುವಿಗೇನೇ ಶಂಕರಾಚಾರ್ಯರು ಮೂಲ ವಸ್ತುವೆಂದೂ ಪರಬ್ರಹ್ಮವೆಂದೂ ಹೇಳುವರು. ಅಂದ ಬಳಿಕ ಶಂಕರಾಚಾರ್ಯರ ಮೂಲ ವಸ್ತುವಿಗಿಂತಲೂ ವೀರಶೈವರ ಮೂಲ ವಸ್ತುವು ಎಷ್ಟೋ ಪೂರ್ವದಲ್ಲಿ ರುವದೆಂಬುದು ಕರತಲಾಮಲಕವಾಗಿ ತೋರುತ್ತಿದೆ. ಈ ಮಾತನ್ನೇ ಶ್ರೀ ತೋಂಟದ ಸಿದ್ಧಲಿಂಗ ಮಹಾ ಶಿವಯೋಗಿಗಳು ತಮ್ಮ ವಚನದಲ್ಲಿ.

## ವಚನ

ಅಂಗವಾರು ಲಿಂಗವಾರು ಶಕ್ತಿಯಾರು ಭಕ್ತಿಯಾರು ಇಂತಿವೆಲ್ಲವ
ನಿನ್ನಲ್ಲಿ ಗರ್ಭೀಕರಿಸಿಕೊಂಡು. ಸಚ್ಚಿದಾನಂದ ನಿತ್ಯ ಪರಿಪೂರ್ಣ ನಿರಂಜನ
ನೀನಾದ ಕಾರಣ ನಿನ್ನ ನಿಷ್ಕಲ ಶಿವತತ್ವವೆಂದೆನು ಕಾಣಾ ಮಹಾಲಿಂಗ
ಗುರು ಶಿವ ಸಿದ್ಧೇಶ್ವರ ಪ್ರಭುವೇ ||

## ವಿಶೇಷ ವಿಚಾರ :

ಭಾರತೀಯ ಋಷಿಗಳೂ ಮತ್ತು ಮಹಾಚಾರ್ಯರು ಈ ಜಗತ್ತಿಗೆ ಕರ್ತೃವು ಮತ್ತು ನಿಯಾಮಕವೂ ಆದ ಮೂಲ ತತ್ವವನ್ನು ಅಂತರ್ಹಿತ ದೃಷ್ಟಿಯ ಸಹಾಯದಿಂದ ಬಹಳ ಸೂಕ್ಷ್ಮವಾಗಿ ವಿಚಾರ ಮಾಡಿರುವರು. ಈ ವಿಶ್ವದ ಉತ್ಪತ್ತಿಯು ಎಲ್ಲಿಂದ ಆಯಿತ್ತು, ಮೊದಲಿಗೆ ಯಾವ ತತ್ವವಿತ್ತು, ಮೊಟ್ಟಮೊದಲು ಯಾವುದು ಹುಟ್ಟಿತು ಇತ್ಯಾದಿ ಸಂದೇಹಗಳು ಅವರ ಮುಂದೆ ನಿಂತವು. ಆಗ ಅವರಿಗೆ ಋಗ್ವೇದದ ಹತ್ತನೇ ಮಂಡಲದ ಹನ್ನೊಂದನೆಯ ಅನುವಾಕದಲ್ಲಿರುವ ನಾಸದೀಯ ಸೂಕ್ತವು ಮಾರ್ಗದರ್ಶಕವಾಗಿದೆ. ಈ ಸೂಕ್ತದಲ್ಲಿ ಏಳು ಋಕ್ಕುಗಳಿರುತ್ತವೆ.

## ನಾಸದೀಯ ಸೂಕ್ತ

ನಾಸದಾಸೀನ್ನೋಸದಾಸೀತ್ತದಾನೀಂ ನಾಸೀದ್ರಜೋನೋವ್ಯೋ
ಮಾಪರೋಯತ್ ! ಕಿಮಾವರೀವಃ ? ಕುಹ ಕಸ್ಯ ಶರ್ಮನ್ ಅಂಭಃ
ಕಿಮಾಸೀತ್ ಗಹರಂ ಗಭೀರಂ || ನ ಮೃತ್ಯು ರಾಸೀದಮೃತಂ ನ ತರ್ಹಿ
ನ ರಾತ್ರ್ಯಾ ಅಹ್ನಃ ಆಸೀತ್ ಪ್ರಕೇತಃ | ಆನೀದವಾತಂ ಸ್ವಧಯಾ
ತದೇಕಂ ತಸ್ಮಾದ್ಧಾನ್ಯನ್ನಪರಃ ಕಿಂಚನಾಸ || ೧೦–೧೧–೧||

ನ–ಅಸತ್–ಆಸೀತ್, ನೋ ಸತ್ ಆಸೀತ್ ಎಂದು ಪದವಿಭಾಗ, ಸೃಷ್ಟಿಗಿಂತಲೂ ಪೂರ್ವದಲ್ಲಿ ಅಸತ್ ಇರಲಿಲ್ಲ, ಸತ್ ಇರಲಿಲ್ಲ, ಭೂಮಿ ಆಕಾಶಗಳಿ

ರಲಿಲ್ಲ ಅದಕ್ಕಿಂತಲೂ ಭಿನ್ನವಾದ ಸ್ವರ್ಗಾದಿ ಇರಲಿಲ್ಲ, ಏನನ್ನಾಶ್ರಯಿಸಿಕೊಂಡು ಯಾವುದರಿಂದ ಆವರಿಸಲ್ಪಟ್ಟಿತ್ತು ? ಆಗ :ಆಳವಾದ ನೀರೇನಾದರೂ ಇತ್ತೋ (ಆಳವಾದ ನೀರಿನಲ್ಲಿ ಮುಳುಗಿತ್ತೋ) ಮೃತ್ಯುವಿರಲಿಲ್ಲ. ಅಮೃತವಿರಲಿಲ್ಲ ಹಗಲು ರಾತ್ರಿಗಳ ಭೇದವಿರಲಿಲ್ಲ ಹೀಗೆ ಎಲ್ಲವನ್ನು ನಿಷೇಧ ಮಾಡಿ ಆಗ ಇದ್ದುದಾದರೂ ಏನೆಂದರೆ, ಆನೀದವಾತಂ ಆನ್, ಈತ್, ಅವಾತಂ, ಎಂದು ಪದವಿಭಾಗ ವ್ಯಾಕರಣದಲ್ಲಿ 'ಅನಪ್ರಾಣನೆ, ಇಣಗತೌ' ಎಂಬ ಧಾತುಗಳಿರುತ್ತವೆ. ಅನಧಾತು ಯಾವಾಗಲೂ ಪ್ರಎಂಬ ಉಪಸರ್ಗದೊಡನೆ ಕೂಡಿಕೊಂಡಿರುತ್ತದೆ. ಈತ್ ಇದು ಅನದ್ಯತನ ಭೂತಕಾಲದ ರೂಪ ಇಲ್ಲಿ ಅಡಾಗಮ ಬಂದಿರುವದಿಲ್ಲ.ಅಂತು ಪ್ರಾಣ್-ಈತ್-ಚೈತನ್ಯದ ಸ್ಫುರಣೆ ಮಾತ್ರ ಇತ್ತು, ಇಲ್ಲಿ ಪ್ರಾಣದ ಕಲ್ಪನೆಯಲ್ಲಿ ಉಸಿರಾಡಿಸುವ ವಾಯುವಿನ ಕಲ್ಪನೆ ಬರುವುದರಿಂದ ವಾಯುವಿತ್ತೆ ಎಂಬ ಸಂಶಯ ಬಂದಾಗ ಅದರ ಪರಿಹಾರಕ್ಕಾಗಿ ಅವಾತಂ ಆಗ ವಾಯುವೂ ಇರಲಿಲ್ಲ ಹಾಗಾದರೆ ಚೈತನ್ಯದ ಸ್ಫುರಣೆಯು ಯಾವುದರಿಂದ ಆಗುತ್ತಿತ್ತು ಎಂಬ ಪ್ರಶ್ನೆಗೆ ಸ್ವಧಯಾ ತನ್ನಲ್ಲಿ ಅವಿನಾಭಾವದಿಂದ ಅಡಗಿರುವ ಶಕ್ತಿಯಿಂದ, ತದೇಕಂ ಅದೊಂದೇ ಸ್ಫುರಿಸುತ್ತಿತ್ತು ಎಂದು ಉತ್ತರವು, ಅದೊಂದೇ ಇತ್ತು ಎಂದು ಹೇಳಿದ್ದರೂ ಮತ್ತಾವ ಸಂಶಯವು ಉಳಿಯಬಾರದೆಂದು ಅದಕ್ಕಿಂತಲೂ ಭಿನ್ನವಾದುದು ಮತ್ತಾವುದೂ ಇರಲಿಲ್ಲವೆಂದು ಸ್ಪಷ್ಟ ಮಾಡಿದೆ.

ವಾಙ್ಮನೋ ಗೋಚರವಲ್ಲದ ನಾಮ ರೂಪಗಳಿಲ್ಲದ ಈ ವಸ್ತುವನ್ನು ವ್ಯವಹಾರದಲ್ಲಿ ಉಪಯೋಗಿಸುವಾಗ ಯಾವುದಾದರೊಂದು ಹೆಸರಿಡಲೇ ಬೇಕಾದುದರಿಂದ ಈ ನಾಸದೀಯ ಸೂಕ್ತವು ತನ್ನ ಮೂರನೆಯ ಋಕ್ಕಿನಿಂದ "ತುಚ್ಛೇನಾಭ್ವಪಿಹಿತಂ ಯದಾಸೀತ್ತಪಸಸ್ತನ್ಮಹಿನಾಜಾಯತೈಕಂ" ತುಚ್ಛೇನ-ಅಭು-ಅಪಿಹಿತ. ಎಂದು ಪದವಿಭಾಗ, ಆ ಮೂಲವಸ್ತುವಿಗೆ ಅಭು ಎಂದು ಕರೆದಿರುವದು ಅಭು ಇಲ್ಲಿ ಭೂಸತ್ತಾಯಾಂ ಎಂಬ ಧಾತುಸಾಧಿತ ರೂಪ-ಭು ನ ಭು ಅಭು-ಇಲ್ಲದ್ದು ಅರ್ಥಾತ್ ಶೂನ್ಯ-ಬಯಲು ಎಂದು ಅರ್ಥವಾಗುತ್ತದೆ. ಇಲ್ಲಿ ಪ್ರಾಚೀನ ಋಷಿಗಳು ಆ ಮೂಲ ವಸ್ತುವನ್ನು ಸತ್, ಋತ, ಸ್ಕಂಭ, ಬ್ರಹ್ಮ, ಪರಬ್ರಹ್ಮ, ಹಿರಣ್ಯಗರ್ಭ ಇತ್ಯಾದಿ ಶಬ್ದಗಳಿಂದ ಕರೆದಿರುವರು. ವೀರಶೈವ ದರ್ಶನಕಾರರು ಅದನ್ನು ಲಿಂಗ, ಸ್ಥಲ, ಪರಶಿವ, ಶೂನ್ಯ, ಬಯಲು ಇತ್ಯಾದಿ ಶಬ್ದಗಳಿಂದ ವ್ಯವಹರಿಸಿರುವರು. "ಏಕಂ ಸದ್ ವಿಪ್ರಾ ಬಹುಧಾ ವದಂತಿ ಅಗ್ನಿಂ ಯಮಂ ಮಾತರಿಶ್ವಾನಮಾಹುಃ ॥ ಋಗ್ವೇದಮಂಡಲ ೧|-ಅನುವಾಕ ೨೨॥

ಈ ನಸಾದೀಯ ಸೂಕ್ತದಲ್ಲಿ 'ಅಭು, ಎನಿಸಿಕೊಂಡ ಮೂಲ ವಸ್ತುವಿನ ಸ್ಫುರಣೆಯು ಸ್ವಧಯಾ ತನ್ನಲ್ಲಿ ಅವಿನಾಭಾವದಿಂದ ಅಡಗಿರುವ ಶಕ್ತಿಯಿಂದ

ಆಗುತ್ತಿತ್ತೆಂದು ಹೇಳಿರುವದರಿಂದ ಆ ಮೂಲ ವಸ್ತು ಶಕ್ತಿ ವಿಶಿಷ್ಟವೆಂದೂ ಮುಂದೆ ತದೇಕಂ ಎಂದು ಹೇಳಿರುವದರಿಂದ ಅದ್ವೈತ ಎಂದೂ ಅರ್ಥವಾಗುವುದರಿಂದ "ಶಕ್ತಿವಿಶಿಷ್ಟಾದ್ವೈತ" ಎಂಬ ವೀರಶೈವ ಸಿದ್ಧಾಂತವು ಸ್ಫುಟಕವಾಗಿ ಪ್ರತೀಯ ಮಾನವಾಗುತ್ತದೆ.

ನೂರಾರು ವರ್ಷಗಳವರೆಗೆ ತಪಸ್ಸು ಮಾಡಿ ಪ್ರಾಚೀನ ಋಷಿಗಳು ಈ ಜಗತ್ತಿನ ಮೂಲ ವಸ್ತುವನ್ನು ಯಾವ ವಿಧವಾಗಿ ಕಂಡು ಕೊಂಡಿದ್ದರೋ ಅದೇ ಪ್ರಕಾರವಾಗಿ ಶಿವಶರಣರು ಶಿವಯೋಗ ಬಲದಿಂದ ಅದನ್ನು ಕಂಡು ಅದರ ಅನುಭವವನ್ನು ಸರ್ವರು ಉಂಡು ಪುನೀತರಾಗಲೆಂದು ಸಾಮಾನ್ಯ ಜನರಿಗೂ ಸುಬೋಧವಾದ ಕನ್ನಡದಲ್ಲಿ ನುಡಿದಿರುವರು.

### ವಚನ

ಆದಿಯಾಧಾರವಿಲ್ಲದಂದು, ಹಮ್ಮು ಬಿಮ್ಮುಗಳಿಲ್ಲದಂದು, ಸುರಾಳನಿರಾಳ ವಿಲ್ಲದಂದು, ಶೂನ್ಯ ನಿಶೂನ್ಯವಿಲ್ಲದಂದು, ಚರಾಚರವೆಲ್ಲ ರಚನೆಗೆಬಾರದಂದು ಗುಹೇಶ್ವರ ನೀನೊಬ್ಬನೇ ಇದ್ದೆಯಲ್ಲಾ ಇಲ್ಲದಂತೆ ॥ ೧ ॥

ಬ್ರಹ್ಮ, ವಿಷ್ಣು, ರುದ್ರ, ಈಶ್ವರ, ಸದಾಶಿವ, ಪರಮೇಶ್ವರ ಎಂಬ ಸಂದಣಿ ತಲೆದೋರದ ಮುನ್ನ, ಬಯಲೇ ಸ್ವರೂಪವಾಯಿತ್ತು. ಆ ಸ್ವರೂಪಿನ ನಡೆಯುನು ಪಮಿಸಬಾರದು, ನೋಡಬಾರದ ಬೆಳಗು, ಕೂಡಬಾರದ ಮೂರ್ತಿ ಅಖಂಡ ಅಪ್ರತಿಮ ಗುಹೇಶ್ವರ ಲಿಂಗದ ಬೆಳಗಿನ ಮೂಲವ ಲಿಂಗಸಂಗಿಗಳಲ್ಲದ ಅಂಗವಿಕಾರಿಗಳೆತ್ತಬಲ್ಲರು ॥ ೨ ॥

ಶೂನ್ಯ ಹೃದಯ ನಿಶೂನ್ಯವಿಲ್ಲದಂದು, ಬ್ರಹ್ಮ ವಿಷ್ಣು, ಮಹೇಶ್ವರರಿಲ್ಲದಂದು, ಹದಿನಾಲ್ಕು ಭುವನ ದಿಗ್ವಳಯ ವಿಲ್ಲದಂದು ಕೂಡಲ ಚೆನ್ನ ಸಂಗನೆಂಬ ಹೆಸರು ಮುನ್ನಿಲ್ಲದಂದು ॥ ೩ ॥

ಅಸುರ ಮಾಲೆಗಳಿಲ್ಲ, ತ್ರಿಶೂಲ ಡಮರುಗವಿಲ್ಲ, ಬ್ರಹ್ಮಕಪಾಲವಿಲ್ಲ, ಭಸ್ಮ ಭೂಷಣನಲ್ಲ, ವೃಷವಾಹನನಲ್ಲ, ಋಷಿಗಳೊಡನಿದ್ದಾತನಲ್ಲ, ಎಸಗುವ ಸಂಸಾರದ ಕುರುಹಿಲ್ಲ ದಾತಂಗೆ ಹೆಸರಾವದೂ ಇಲ್ಲವೆಂದ ನಂಬಿಗ ಚೌಡಯ್ಯ ॥ ೪ ॥

ಈ ವಚನಗಳ ಸೂಕ್ಷ್ಮ ವಿವೇಚನೆಯಿಂದ ಕಂಡು ಬರುವದೇನಂದರೆ ಆ ಮೂಲ ವಸ್ತುವಿನ ಬಗ್ಗೆ ಋಗ್ವೇದದ ನಾಸದೀಯ ಸೂಕ್ತವು ಅದನ್ನು "ಅಭು"

ಎಂದು ಕರೆದು ಅಭು ಶಬ್ದಕ್ಕೆ ಶಬ್ದಶಾಸ್ತ್ರಾನುಗುಣವಾಗಿ ಇಲ್ಲದ್ದು ಅರ್ಥಾತ್ ಶೂನ್ಯ ಬಯಲು ಎಂಬ ಅರ್ಥವನ್ನು ತೋರಿಸುವದು. ಅದೇ ಮೂಲ ವಸ್ತು ವಿನ ಬಗ್ಗೆ ಶ್ರೀ ಪ್ರಭು ದೇವರು "ಇದ್ದೆಯಲ್ಲಾ ಇಲ್ಲದಂತೆ" "ಬಯಲೇ ಸ್ವರೂಪವಾಯಿತ್ತು" ಎಂದು ಹೇಳಿದ ಮಾತು ಎಷ್ಟು ಸುಂದರವಾಗಿಯೂ ಸುಬೋಧವಾಗಿಯೂ ಇದೆಂಬುದನ್ನು ವಿಚಾರಿಸಿರಿ. ಇದರಿಂದ ವೀರಶೈವರ ಮೂಲ ವಸ್ತು ವಿನ ವಿಚಾರವು ಉಪನಿಷತ್ ಸಿದ್ಧಾಂತಾನುಗುಣವಾಗಿದೆಂಬುದು ಸ್ಫುಟಕವಾಗಿ ತೋರುತ್ತಿದೆ. ಇಷ್ಟೇ ಅಲ್ಲ ಮೇಲೆ ಉದಾಹರಿಸಿದ ಶ್ರೀ ತೋಂಟದಾರ್ಯರ ವಚನ ವಿವೇಚನದಿಂದ ವೀರಶೈವ ಸಿದ್ಧಾಂತವು ಉಪನಿಷತ್ಸಿದ್ಧಾಂತಕ್ಕಿಂತಲೂ ಮುಂದುವರಿದುದೆಂದು ಸ್ಪಷ್ಟವಾಗಿ ತೋರುತ್ತಿದೆ. ನಾಸದೀಯ ಸೂಕ್ತದಲ್ಲಿಯ 'ಅಭು' ಶಬ್ದಕ್ಕೆ ಶೂನ್ಯವೆಂದು ಅರ್ಥವಾದರೂ ಆ ಶೂನ್ಯಕ್ಕಿಂತಲೂ ಪೂರ್ವ ಭಾವಿಯಾಗಿ "ಸರ್ವ ಶೂನ್ಯ ನಿರಾಲಂಬ" ಎಂಬುದೊಂದು ಇರುವದಾಗಿಯೂ ಅದೇ ವೀರಶೈವರ ಉಪಾಸ್ಯ ವಸ್ತುವಾಗಿಯೂ ಶ್ರೀ ಸಿದ್ಧಲಿಂಗ ಮಹಾಶಿವಯೋಗಿಗಳು ಸ್ಫುಟಕವಾಗಿ ತೋರಿಸಿರುವರು. ವೀರಶೈವ ಸಿದ್ಧಾಂತವು ಉಪನಿಷತ್ಸಿದ್ಧಾಂತಕ್ಕಿಂತಲೂ ಮುಂದುವರಿದುದೆಂದು ಸಿದ್ಧವಾದ ಬಳಿಕ ಶಂಕರಾಚಾರ್ಯರ ಸಿದ್ಧಾಂತಕ್ಕಿಂತಲೂ ಮುಂದುವರಿದುದೆಂಬುದು ದಂಡಾಪೂಪಿಕ ನ್ಯಾಯದಿಂದ ತಾನಾಗಿಯೇ ಸಿದ್ಧವಾಗುವದು.

## ವೀರಶೈವರ ಪ್ರವೃತ್ತಿ ಮಾರ್ಗ

ಪ್ರಥಮದಲ್ಲಿ "ಏಕಮೇವಾದ್ವಿತೀಯಂ ಬ್ರಹ್ಮ" ಇತ್ಯಾದಿ ಶ್ರುತ್ಯನುಸಾರವಾಗಿ ಸರ್ವಶೂನ್ಯನಿರಾಲಂಬಸ್ಥಲವೆನಿಸಿಕೊಂಡ ಆ ಪರವಸ್ತುವು ಪ್ರವೃತ್ತಿ ಮಾರ್ಗದಲ್ಲಿ ಅನಿರ್ವಾಚ್ಯವಾದ ಶೂನ್ಯ ಸ್ಥಲವನ್ನು ಹೊಂದುವದು. ಅನಿರ್ವಾಚ್ಯವಾದ ಶೂನ್ಯ ಸ್ಥಲವನ್ನು ಹೊಂದಿದ ಪರವಸ್ತುವು ತಾನು ನೆನೆದ ನೆನಹು ಸಾವಯವವಾಗಿ ಸತ್ತು, ಚಿತ್ತು, ಆನಂದ, ನಿತ್ಯ, ಪರಿಪೂರ್ಣ ಎಂಬ ಐದವಯವವನಂಗೀಕರಿಸಿ ನಿಷ್ಕಲ ಶಿವತತ್ವವೆನಿಸಿಕೊಳ್ಳುವದು ಈ ನಿಷ್ಕಲ ಶಿವತತ್ವವು ಶಕ್ತಿಯ ಚಲನೆ ಮಾತ್ರದಿಂದ ಲಿಂಗ, ಅಂಗ ಎಂದು ಎರಡಾಗುವದು. ಇಲ್ಲಿ ಲಿಂಗ ಉಪಾಸ್ಯ, ಅಂಗ ಉಪಾಸಕ, ಆ ಪರಶಿವನ ಚಿಚ್ಛಕ್ತಿಯೂ ಸಹ ಶಕ್ತಿ ಭಕ್ತಿ ಎಂದು ಎರಡು ವಿಧವಾಗುವದು. ಲಿಂಗವನಾಶ್ರಯಿಸಿದ್ದು ಶಕ್ತಿ, ಅಂಗವನಾಶ್ರಯಿಸಿದ್ದು ಭಕ್ತಿ. ಶಕ್ತಿಯು ಪ್ರವೃತ್ತಿಕಾರಣ, ಭಕ್ತಿಯು ನಿವೃತ್ತಿಕಾರಣೆ, ಈ ಲಿಂಗ, ಅಂಗ, ಶಕ್ತಿ, ಭಕ್ತಿ ಇವು ನಾಲ್ಕು ಪ್ರತಿಯೊಂದು ಆರಾರು ಪ್ರಕಾರವಾಗುತ್ತವೆ. ಮೊದಲು ಲಿಂಗವು ಭಾವಲಿಂಗ, ಪ್ರಾಣಲಿಂಗ, ಇಷ್ಟಲಿಂಗವೆಂದು ಮೂರು ಪ್ರಕಾರವಾಗುತ್ತದೆ ಒಂದೊಂದು ಲಿಂಗದಲ್ಲಿ ಎರಡೆರಡು ಭೇದವಾಗಿ ಕ್ರಮದಿಂದ ಮಹಾಲಿಂಗ ಪ್ರಸಾದಲಿಂಗ, ಜಂಗಮಲಿಂಗ, ಶಿವಲಿಂಗ, ಗುರುಲಿಂಗ

ಆಚಾರಲಿಂಗ ಎಂದು ಆರು ಪ್ರಕಾರವಾಗುವದು. ಅಂಗವು ಮೊದಲು ಯೋಗ್ಯಾಂಗ ಭೋಗಾಂಗ ತ್ಯಾಗಾಂಗ ಎಂದು ಮೂರು ಪ್ರಕಾರವಾಗುವದು. ಒಂದೊಂದರಲ್ಲಿ ಎರಡೆರಡಾಗಿ ಕ್ರಮದಿಂದ ಐಕ್ಯ ಶರಣ, ಪ್ರಾಣಲಿಂಗಿಪ್ರಸಾದಿ, ಮಹೇಶಭಕ್ತ ಎಂದು ಆರಾಗುತ್ತವೆ. ಶಕ್ತಿಯು-ಚಿಚ್ಛಕ್ತಿ, ಪರಾಶಕ್ತಿ, ಆದಿಶಕ್ತಿ ಇಚ್ಛಾಶಕ್ತಿ, ಜ್ಞಾನ ಶಕ್ತಿ, ಕ್ರಿಯಾಶಕ್ತಿ ಎಂದು ಕ್ರಮವಾಗಿ ಆರು ಪ್ರಕಾರವಾಗುವದು. ಭಕ್ತಿಯು ಸಮರಸಭಕ್ತಿ, ಆನಂದಭಕ್ತಿ, ಅನುಭವಭಕ್ತಿ, ಅವಧಾನಭಕ್ತಿ, ನಿಷ್ಠಾಭಕ್ತಿ, ಶದ್ಧಾ ಭಕ್ತಿ ಎಂದು ಕ್ರಮವಾಗಿ ಆರು ಪ್ರಕಾರವಾಗುವದು.

## ಸಾದಾಖ್ಯಗಳು

ಆ ನಿಷ್ಕಲಶಿವತತ್ವವು ಚಿಚ್ಛಕ್ತಿಯ ಸಂಗದಿಂದ ಮಹಾಲಿಂಗವಾದಾಗ, ಅಂಗನು ಶಾಂತ್ಯತೀತೋತ್ತರೆ ಎಂಬ ಕಲೆಯಿಂದ ಉದಯಿಸಿ ಮಹಾಲಿಂಗಕ್ಕಾ ಶ್ರಯನಾಗಿ ಐಕ್ಯ ನೆನಿಸಿಕೊಳ್ಳುವನು. ಈ ಐಕ್ಯನ ಮಧ್ಯದಲ್ಲಿ ಆತ್ಮ ತತ್ವವು ಉದಯವಾಗುವದು. ಇದರಲ್ಲಿ ಶಿವನು ಆತ್ಮನಾಗಿ ಪಶುಪತಿಯು ಕಲಾ ಮೂರ್ತಿಯಾಗಿಯೂ ಅನಂತನು ಅಧಿದೇವತೆಯಾಗಿಯೂ ಇರುತ್ತಾರೆ ಈ ರೀತಿ ಮಹಾಸಾದಾಖ್ಯದ ವಿಕಾಸ ಕ್ರಮವು.

ಆ ಶಿವತತ್ವವು ಚಿಚ್ಛಕ್ತಿಯಿಂದುದಯವಾದ ಪರಾಶಕ್ತಿಯ ಸಂಗದಿಂದ ಪ್ರಸಾದಲಿಂಗವಾದಾಗ, ಅಂಗನು ಶಾಂತ್ಯತೀತಕಲೆಯಿಂದುದಯಿಸಿ ಪ್ರಸಾದ ಲಿಂಗಕ್ಕೆ ಆಶ್ರಯನಾಗಿ ಶರಣನೆನಿಸಿಕೊಳ್ಳುವನು. ಈ ಶರಣ ಮಧ್ಯದಲ್ಲಿ ಆಕಾ ಶತತ್ವ ಉಂಟಾಗುವದು. ಇದರಲ್ಲಿ ಕ್ಷೇತ್ರಜ್ಞನು ಆತ್ಮನಾಗಿ ಮಹಾದೇವನು ಕಲಾ ಮೂರ್ತಿಯಾಗಿ ಸದಾಶಿವನು ಅಧಿದೇವತೆಯಾಗಿರುತ್ತಾನೆ ಹೀಗೆ ಶಿವ ಸಾದಾಖ್ಯದ ವಿಕಾಸ ಕ್ರಮವು.

ಆ ಶಿವತತ್ವವು ಪರಾಶಕ್ತಿಯಿಂದುದಯವಾದ ಆದಿಶಕ್ತಿಯ ಸಂಗದಿಂದ ಜಂಗಮಲಿಂಗವಾದಾಗ, ಅಂಗನು ಶಾಂತಿ ಎಂಬ ಕಲೆಯಿಂದುದಯಿಸಿ ಆ ಜಂಗಮ ಲಿಂಗಕ್ಕಾಶ್ರಯನಾಗಿ ಪ್ರಾಣಲಿಂಗಿ ಎನಿಸಿಕೊಳ್ಳುವನು. ಈ ಪ್ರಾಣ ಲಿಂಗಿಯ ಮಧ್ಯದಲ್ಲಿ ವಾಯುತತ್ವ ಉದಯವಾಗುವನು. ಇದರಲ್ಲಿ ಕರ್ತಾ ರನು ಆತ್ಮನಾಗಿ ಭೀಮೇಶ್ವರನು ಕಲಾಮೂರ್ತಿಯಾಗಿ ಈಶ್ವರನು ಅಧಿದೇವ ತೆಯಾಗಿ ಇರುತ್ತಾರೆ, ಈ ವಿಧವಾಗಿ ಅಮೂರ್ತಸಾದಾಖ್ಯದ ವಿಕಾಸ ಕ್ರಮವು.

ಆ ಶಿವತತ್ವವು ಆದಿಶಕ್ತಿಯಿಂದುದಯವಾದ ಇಚ್ಛಾಶಕ್ತಿಯ ಸಂಗದಿಂದ ಶಿವಲಿಂಗವಾಧಾಗ, ಅಂಗನು ವಿದ್ಯಾಕಲೆಯಿಂದುದಯಿಸಿ ಆ ಶಿವಲಿಂಗಕ್ಕಾಶ್ರಯ

ವಾಗಿ ಪ್ರಸಾದಿ ಎನಿಸಿಕೊಳ್ಳುವನು. ಈ ಪ್ರಸಾದಿಯ ಮಧ್ಯದಲ್ಲಿ ಅಗ್ನಿ ತತ್ವ ವಾಗುವದು, ಇದರಲ್ಲಿ ಭಾವನು ಆತ್ಮನಾಗಿ ಮಹಾರುದ್ರನು ಕಲಾಮೂರ್ತಿ ಯಾಗಿ ರುದ್ರನು ಅಧಿದೇವತೆಯಾಗಿ ಇರುತ್ತಾರೆ; ಹೀಗೆ ಮೂರ್ತಿ ಸಾದಾಖ್ಯದ ವಿಕಾಸ ಕ್ರಮವು.

ಆ ಶಿವತತ್ವವು-ಇಚ್ಛಾಶಕ್ತಿಯಿಂದುದಯವಾದ ಜ್ಞಾನಶಕ್ತಿ ಸಂಗದಿಂದ ಗುರುಲಿಂಗವಾದಾಗ, ಅಂಗನು ಪ್ರತಿಷ್ಠಾ ಕಲೆಯಿಂದುದಯಿಸಿ ಆ ಗುರುಲಿಂಗಕ್ಕಾಶ್ರಯವಾಗಿ ಮಹೇಶನೆನಿಸಿಕೊಳ್ಳುವನು. ಈ ಮಹೇಶನ ಮಧ್ಯದಲ್ಲಿ ಅಪ್ ತತ್ವ ವಾಗುವದು ಇದರಲ್ಲಿ ಚೈತನ್ಯನು ಆತ್ಮನಾಗಿ ಸರ್ವೇಶ್ವರನು ಕಲಾಮೂರ್ತಿ ಯಾಗಿ ವಿಷ್ಣುವು ಅಧಿದೇವತೆಯಾಗಿ ಇರುತ್ತಾರೆ. ಈ ವಿಧವಾಗಿ ಕರ್ತೃ ಸಾದಾಖ್ಯದ ವಿಕಾಸ ಕ್ರಮವು.

ಆ ಶಿವತತ್ವವು ಜ್ಞಾನಶಕ್ತಿಯಿಂದುದಯವಾದ ಕ್ರಿಯಾಶಕ್ತಿಯ ಸಂಗ ದಿಂದ ಆಚಾರಲಿಂಗವಾದಾಗ, ಅಂಗನು ನಿವೃತ್ತಿ ಕಲೆಯಿಂದುದಯಿಸಿ ಆ ಆಚಾರ ಲಿಂಗಕ್ಕೆ ಆಶ್ರಯವಾಗಿ ಭಕ್ತನೆನಿಸಿಕೊಳ್ಳುವನು. ಈ ಭಕ್ತನ ಮಧ್ಯದಲ್ಲಿ ಪೃಥಿವೀತತ್ವವಾಗುವದು. ಇದರಲ್ಲಿ ಅಂತರ್ಯಾಮಿಯು ಆತ್ಮನಾಗಿ ಅಭ ವನು ಕಲಾಮೂರ್ತಿಯಾಗಿ ಬ್ರಹ್ಮನು ಅಧಿದೇವತೆಯಾಗಿ ಇರುತ್ತಾರೆ. ಈ ಪ್ರಕಾರ ಕರ್ಮಸಾದಾಖ್ಯದ ವಿಕಾಸ ಕ್ರಮವು.

## ವೀರಶೈವರ ಮೂವತ್ತಾರು ತತ್ವಗಳು

ಈ ಮೂವತ್ತಾರು ತತ್ವಗಳಲ್ಲಿ ಸಾಮಾನ್ಯವಾಗಿ ಲಿಂಗತತ್ವ, ಅಂಗತತ್ವ ಎಂದು ಎರಡು ಭಾಗವಿರುವದು. ಲಿಂಗತತ್ವಗಳು –೧೧ ಅಂಗತತ್ವಗಳು–೨೫ ವೀರ ಶೈವರಂತೆ ಶುದ್ಧ (ಕಾಶ್ಮೀರ) ಶೈವರೂ ೩೬ ತತ್ವಗಳನ್ನು ಅಂಗೀಕರಿಸುವರು. ಆದರೆ ಶೈವ ಸಿದ್ಧಾಂತದಲ್ಲಿ ಭುವನಾಧ್ವ, ಪದಾಧ್ವ, ವರ್ಣಾಧ್ವ, ಕಲಾಧ್ವ, ತತ್ವಾಧ್ವ, ಮಂತ್ರಾಧ್ವ ಎಂಬ ಷಡಧ್ವ ಮಾರ್ಗಕ್ಕನುಸರಿಸಿ ತತ್ವ ವಿವೇಚನೆ ಯಿರುತ್ತದೆ. ಷಡಧ್ವಗಳು ವೀರಶೈವರಿಗೂ ಅವಶ್ಯವಾದವುಗಳು. ಪರಂತು ವೀರ ಶೈವರ ತತ್ವ ವಿವೇಚನೆಯು ಷಟ್‌ಸ್ಥಲಗಳಿಗನುಗುಣವಾಗಿರುವದು. ಹನ್ನೊಂದು ಲಿಂಗತತ್ವದಲ್ಲಿ–೧ ಶಿವತತ್ವ, ೧ ಶಾಂತ್ಯತೀತ, ೨ ಶಾಂತಿ, ೩ ವಿದ್ಯಾ, ೪ ಪ್ರತಿಷ್ಠಾ ೫ ನಿವೃತ್ತಿ ಎಂಬ ಐದು ಕಲೆಗಳು, ೧ ಶಿವಸಾದಾಖ್ಯ, ೨ ಅಮೂರ್ತಸಾದಾಖ್ಯ, ೩ ಮೂರ್ತಸಾದಾಖ್ಯ, ೪ ಕರ್ತೃಸಾದಾಖ್ಯ, ೫ ಕರ್ಮಸಾದಾಖ್ಯ ಎಂಬ ಐದು ಸಾದಾಖ್ಯಗಳು ಸೇರಿ ೧೧ ಆಗುವವು. ಈ ಹನ್ನೊಂದು ಲಿಂಗತತ್ವಗಳು ಬೇರೆ ವಿಧವಾಗಿಯೂ ನಿರೂಪಿಸಲ್ಪಟ್ಟಿವೆ. ಹೇಗೆಂದರೆ ೧ ಶಿವ, ೨ ಶಕ್ತಿ,

೩ ಸದಾಶಿವ, ೪ ಈಶ್ವರ, ೫ ಶುದ್ಧವಿದ್ಯಾ, ೬ ಮಾಯಾ, ೭ ಕಲಾ, ೮ ವಿದ್ಯಾ. ೯ ರಾಗ, ೧೦ ಕಾಲ, ೧೧ ನಿಯತಿ ಇವು ಲಿಂಗತತ್ವಗಳು. ಅಂಗತತ್ವಗಳು ೨೫ ೧ ಪುರುಷ, ೨ ಪ್ರಕೃತಿ, ೩ ಬುದ್ಧಿ, ೪ ಅಹಂಕಾರ, ೫ ಮನ, ೬ ಶ್ರೋತ್ರ, ೭ ತ್ವಕ್, ೮ ನೇತ್ರ, ೯ ಜಿಹ್ವಾ, ೧೦ ಘ್ರಾಣ, ೧೧ ವಾಕ್, ೧೨ ಪಾಣಿ, ೧೩ ಪಾದ, ೧೪ ಗುಹ್ಯ, ೧೫ ಗುದ, ೧೬ ಶಬ್ದ, ೧೭ ಸ್ಪರ್ಶ, ೧೮ ರೂಪ, ೧೯ ರಸ, ೨೦ ಗಂಧ, ೨೧ ಆಕಾಶ, ೨೨ ವಾಯು, ೨೩ ಅಗ್ನಿ, ೨೪ ಜಲ, ೨೫ ಪೃಥಿವೀ. ಲಿಂಗತತ್ವಗಳು ಸೇರಿ ಒಟ್ಟಿಗೆ ಮೂವತ್ತಾರು ತತ್ವಗಳು. ಈ ೩೬ ತತ್ವಗಳ ವಿಕಾಸ ಕ್ರಮವನ್ನು ವಿಸ್ತಾರ ಭಯದಿಂದ ವಿವರಿಸುವದಿಲ್ಲ.

## ಗ್ರಂಥ ಕರ್ತೃಗಳು

"ಕ್ಷೇತ್ರಜ್ಞ ಸುಮನೋವಾದಂ" ಎಂಬ ಗ್ರಂಥವನ್ನು ಶ್ರೀ ಚನ್ನಬಸವ ಸ್ವಾಮಿಗಳು ಎಂಬವರು ರಚಿಸಿರುವರೆಂದು ಪ್ರತಿಯೊಂದು ಸಂಧಿಯ ಕೊನೆಯಲ್ಲಿ ಹೇಳಿರುವ ಪದ್ಯದಿಂದ ತಿಳಿಯುತ್ತಿದೆ. ಸಾಮಾನ್ಯವಾಗಿ ಕವಿಗಳಲ್ಲಿ ಎರಡು ವರ್ಗಗಳನ್ನು ಮಾಡಬಹುದು. ಕವಿಯು ತಾನು ಎಂಥಾ ದೊಡ್ಡ ಪಂಡಿತನಿದ್ದರೂ ತನ್ನ ವೈದುಷ್ಯದ ಅಹಂಕಾರವನ್ನು ಹೊರಪಡಿಸದೆ ಪ್ರಾಚೀನ ಕವಿಗಳಿಗೆ ವಿನಯಪರನಾಗಿ ಜ್ಞಾನದಲ್ಲಿ ತಾನು ಬಹು ಸಣ್ಣವನೆಂದು ಹೇಳಿಕೊಳ್ಳುವದು ಒಂದು ವರ್ಗ. ಈ ವರ್ಗದಲ್ಲಿ ಕವಿಕುಲಸಾರ್ವಭೌಮನಾದ ಕಾಳಿದಾಸನೇ ಮೊದಲಾದವರು ಸೇರುವರು. ಮಹಾಕವಿಯಾದ ಕಾಳಿದಾಸನು ತನ್ನ ಗ್ರಂಥವಾದ ರಘುವಂಶದಲ್ಲಿ ತನ್ನ ಬಗ್ಗೆ :

> ಮಂದಃ ಕವಿಯಶಃ ಪ್ರಾರ್ಥೀ ಗಮಿಷ್ಯಾಮ್ಯುಪಹಾಸ್ಯತಾಂ |
> ಪ್ರಾಂಶುಲಭ್ಯೇಫಲೇಲೋಭಾದುದ್ಬಾಹುರಿವ ವಾಮನಃ ||

ಬಹಳ ಎತ್ತರವಿದ್ದ ಮಾನವನಿಗೆ ದೊರಕಿಸಿಕೊಳ್ಳಲು ಸಾಧ್ಯವಾದ ಹಣ್ಣಿನಲ್ಲಿ ಆಶೆಯಿಂದ ಒಬ್ಬ ಗಿಡ್ಡ ಮನುಷ್ಯನು ತನ್ನ ಕೈಗಳನ್ನು ಮೇಲಕ್ಕೆ ಚಾಚಿ ಹರಿದುಕೊಳ್ಳಲು ಜಿಗಿದಾಡುವದನ್ನು ನೋಡಿ ಜನರು ಹಾಸ್ಯ ಮಾಡುವಂತೆ ಮಂದ ಬುದ್ಧಿಯಾದ ನಾನು ಕವಿಯಾಗಬೇಕೆಂದು ಬಗೆದು ಕಾವ್ಯವನ್ನು ಬರೆಯುವದನ್ನು ನೋಡಿ ಪಂಡಿತರು ಹಾಸ್ಯ ಮಾಡಬಹುದೆಂದೂ, ಮತ್ತು "ಮಾಲವಿಕಾಗ್ನಿ ಮಿತ್ರ" ಎಂಬ ನಾಟಕದಲ್ಲಿ.

> ಆಪರಿತೋಷಾದ್ವಿದುಷಾಂ ನ ಸಾಧು ಮನ್ಯೇ ಪ್ರಯೋಗವಿಜ್ಞಾನಂ ||

ನಾನು ಎಷ್ಟೇ ಚನ್ನಾಗಿ ಕಾವ್ಯವನ್ನು ಬರೆದಿದ್ದರೂ ವಿದ್ವಾಂಸರು ಅದನ್ನು ನೋಡಿ ಸಂತೋಷ ಪಡುವವರೆಗೂ ನಾನು ಚನ್ನಾಗಿದೆಂದು ಒಪ್ಪಿಕೊಳ್ಳಲಾರೆ ನೆಂದೂ ಹೇಳಿಕೊಂಡು ತನ್ನ ವಿದ್ಯಾಮದವನ್ನೂ ದೂರಮಾಡಿಕೊಂಡಿರುವನು.

ಕವಿಯು ತನ್ನ ನೈಜವಾದ ಸ್ಥಿತಿಯನ್ನು ಹೇಳಿಕೊಂಡು ತನ್ನ ಗ್ರಂಥದ ಬಗೆಗೆ ಜನಗಳ ಅಭಿರುಚಿಯುಂಟಾಗಲೆಂಬ ಲವಲವಿಕೆಯಿಂದ ತನ್ನ ಹಾಗೂ ತನ್ನ ಗ್ರಂಥದ ಗುಣವರ್ಣನೆ ಮಾಡಿಕೊಳ್ಳುವದು, ಎರಡನೆಯ ವರ್ಗ. ಈ ವರ್ಗದಲ್ಲಿ ಭವಭೂತಿ ಮೊದಲಾದವರು ಸೇರುವರು.

ಭವಭೂತಿಯು ಮಾಲತೀ ಮಾಧವ ನಾಟಕದಲ್ಲಿ ವಿದ್ವಜ್ಜನರ ಸಂತೋಷ ಕ್ಕಾಗಿ ಪ್ರಯೋಗಿಸಬೇಕಾದ ಪ್ರಕೃತ ಪ್ರಬಂಧದ ಕರ್ತೃವಾರೆಂದು ನಟರಿಂದ ಪ್ರಶ್ನೆ ಮಾಡಿಸಿ ತನ್ನ ಬಗ್ಗೆ, "ದಕ್ಷಿಣಾಪಥೇ ಪದ್ಮಪುರಂ ನಾಮ ನಗರಂ ತತ್ರ ಪಂಕ್ತಿಪಾವನಾಃ ಪಂಚಾಗ್ನಯಃ ಸೋಮಪೀಥಿನಃ ಕೇಚಿದ್ಬ್ರಾಹ್ಮಣಾಃ ಸಂತಿ| ತದೀಯಸ್ಯ ನೀಲಕಂಠಸ್ಯ ಪುತ್ರಃ ಪದವಾಕ್ಯಪ್ರಮಾಣಜ್ಞಃ" ದಕ್ಷಿಣ ಭಾರತದಲ್ಲಿ ಪದ್ಮಪುರವೆಂಬ ನಗರದೊಳಗೆ ಪಂಕ್ತಿಪಾವನರೂ, ನಿತ್ಯಾಗ್ನಿಹೋತ್ರಿಗಳು ಸೋಮ ರಸವನ್ನು ಕುಡಿಯುವವರೂ, ಬ್ರಹ್ಮಜ್ಞಾನಿಗಳೂ ಆದ ಬ್ರಾಹ್ಮಣರುಂಟು ಅವರ ಪೈಕಿ ನೀಲಕಂಠನೆಂಬವನ ಮಗನಾದ ವ್ಯಾಕರಣ, ನ್ಯಾಯ, ಮೀಮಾಂಸಾದಿ ಶಾಸ್ತ್ರಗಳಲ್ಲಿ ಪಾಂಡಿತ್ಯವನ್ನು ಸಂಪಾದಿಸಿದವನಾದ ಭವಭೂತಿಯು ಎಂದು ಹೇಳಿ ಕೊಂಡಿರುವನು. ಮತ್ತು ತನ್ನ ಗ್ರಂಥದ ಬಗ್ಗೆ

ಯೇ ನಾಮಕೇಚಿದಿಹ ನಃ ಪ್ರಥಯಂತ್ಯವಜ್ಞಾಂ
ಜಾನಂತಿ ತೇ ಕಿಮಪಿ ತಾನ್‌ಪ್ರತಿ ನೈಷಯತ್ನಃ|
ಉತ್ಪತ್ಸ್ಯತೇ ಮಮ ತು ಕೋಪಿಸಮಾನ ಧರ್ಮಾ
ಕಾಲೋಹ್ಯಯಂ ನಿರವಧಿರ್ವಿಪುಲಾ ಚ ಪೃಥ್ವೀ ||

ಈ ಶ್ಲೋಕಕ್ಕೆ ಬೇರೆ ಬೇರೆ ಅರ್ಥವಿರುವದು ಪ್ರಕೃತ ಸಂದರ್ಭಕ್ಕೆ ಅನು ಗುಣವಾದುದು.

"ಕವಿಃ ಕರೋತಿ ಕಾವ್ಯಾನಿ ಸ್ವಾದು ಜಾನಂತಿ ಪಂಡಿತಾಃ"

ಕವಿಯು ಕಾವ್ಯಗಳನ್ನೇನೊ ರಚಿಸಿಬಿಡುವನು; ಆದರೆ ಆ ಕಾವ್ಯದಲ್ಲಿರುವ ಶಬ್ದಸಾಮರ್ಥ್ಯ, ಅರ್ಥಗಾಂಭೀರ್ಯ, ರಸಮಾಧುರ್ಯ, ಕವಿಯ ಕಲ್ಪನಾ ಪ್ರೌಢಿಮಾದಿಗಳು ಪಂಡಿತರಿಗೆ ಮಾತ್ರ ಗೋಚರವಾಗುವವಲ್ಲದೆ ಸರ್ವಸಾಮಾನ್ಯ ರಿಗೆ ತಿಳಿಯಲಾರವು ಇಂಥಾ ಪರಿಸ್ಥಿತಿಯಲ್ಲಿ ಭವಭೂತಿಯು ಇಂಥಾ ದುರ್ಬೋ ಧವಾದ ಗ್ರಂಥವನ್ನು ಏಕೆ ಬರೆಯುವನೆಂಬ ಪ್ರಶ್ನೆಗೆ ಪ್ರಚಲಿತ ಕಾಲದಲ್ಲಿ ನನ್ನ

ಗ್ರಂಥವನ್ನು ತಿಳಿದುಕೊಳ್ಳುವವರು ಸಿಗಲಿಕ್ಕಿಲ್ಲ; ಸಾಮಾನ್ಯ ಜನರಿರಬಹುದು ಇಂಥವರ ಸಲುವಾಗಿ ನಾನು ಬರೆಯುವದಿಲ್ಲ. ನನಗೆ ಸಮಾನವಾದ ಪಾಂಡಿತ್ಯವುಳ್ಳ ಮಾನವನು ಇಂದಿಲ್ಲ ಇನ್ನೂ ಹತ್ತಿಪ್ಪತ್ತು ಸಾವಿರ ವರ್ಷಗಳಲ್ಲಾದರೂ ಹುಟ್ಟಬಹುದು. ಏಕೆಂದರೆ ಕಾಲವು ಇಲ್ಲಿಗೇ ಮುಗಿಯುವದಿಲ್ಲ. ಪೃಥಿವಿಯೂ ಇಷ್ಟೇ ಪರಿಮಿತವಾದುದಿಲ್ಲ. ವಿಸ್ತೀರ್ಣವಾದ ಪೃಥಿವಿಯ ಯಾವುದಾದರೊಂದು ಭಾಗದಲ್ಲಿ ಎಂದಾದರೊಂದು ದಿನ ನನ್ನಂಥ ಪಂಡಿತನು ಹುಟ್ಟಬಹುದು. ಆತನಿಗಾಗಿ ಬರೆಯುವೆನೆಂದು ಹೇಳಿಕೊಂಡಿರುವನು.

ಭವಭೂತಿಯ ಮುಖದಿಂದ ಹೊರಟ ಈ ಶಬ್ದಗಳನ್ನು ಕೇಳಿದ ಕೂಡಲೇ ಓಹೋ ಭವಭೂತಿಯ ಅಹಂಕಾರವು ಅಷ್ಟಿಷ್ಟಲ್ಲ ಆಕಾಶದ ತುಂಬಾ ಹರಡಿರುವದಲ್ಲಾ ಎಂದು ಭಾಸವಾಗಬಹುದು. ಪರಂತು ಸೂಕ್ಷ್ಮವಾಗಿ ವಿಚಾರ ಮಾಡಿದರೆ ಇಲ್ಲಿ ಅಹಂಕಾರಕ್ಕೆ ಅವಕಾಶವಿಲ್ಲ. ಏಕೆಂದರೆ, ಮಾನವನು ದುರಭಿಮಾನವನ್ನು ಬಿಡಬೇಕೆಂಬುದು ಸಹಜ, ಆ ದುರಭಿಮಾನದ ಜೊತೆಯಲ್ಲಿ ಸ್ವಾಭಿಮಾನವನ್ನು ಬಿಡಬೇಕೆಂದು ಎಲ್ಲಿಯೂ ಯಾರೂ ಹೇಳುವದಿಲ್ಲ. ಭವಭೂತಿಯು ತನ್ನ ಬಗ್ಗೆ ತನ್ನ ಕುಲದ ಬಗ್ಗೆ ಹೇಳಿಕೊಂಡುದು ಸಹಜವಾದ ಉಕ್ತಿಯೇ ಹೊರತು ಅಹಂಕಾರೋಕ್ತಿಯಲ್ಲ. ಕಾಳಿದಾಸನು ವರಕವಿಯು ಅವನಲ್ಲಿ ಆನುವಂಶಕವಾಗಿ ಹರಿದು ಬಂದ ಪಾಂಡಿತ್ಯದ ಪ್ರತಿಭೆಯು ಇಲ್ಲದುದರಿಂದ ಹೇಳಿಕೊಳ್ಳಲು ಅವಕಾಶವಿಲ್ಲ. ಇರಲಿ.

ಈ ಗ್ರಂಥದ ಕರ್ತೃಗಳಾದ ಶ್ರೀ ಚೆನ್ನಬಸವಸ್ವಾಮಿಗಳು ಸಂಪೂರ್ಣವಾಗಿ ಭವಭೂತಿಯ ವರ್ಗಕ್ಕೆ ಸೇರದಿದ್ದರೂ ನಿಜವಾದ ಸಂಗತಿಯನ್ನು ಹೇಳಲು ಭಯಪಡದವರು. ಅಂತೆಯೇ ಅವರು ತಮ್ಮ ಬಗ್ಗೆ "ಷಟ್‌ಸ್ಥಲಸಾರ್ವಭೌಮ, ಚೆನ್ನವೃಷಭೇಂದ್ರಾಭಿಧಾನದ ಚೆನ್ನವೃಷಭೇಶ್ವರ ನಿರೂಪಣಮಾಗಿಯೊಪ್ಪಿದುದು" ಎಂದು ಷಟ್‌ಸ್ಥಲ ಸಾರ್ವಭೌಮ, ಚೆನ್ನವೃಷಭೇಂದ್ರ, ಶಿವಯೋಗೀಂದ್ರ ಇತ್ಯಾದಿ ಉಪಾಧಿಗಳನ್ನು ಹಚ್ಚಿಕೊಂಡು ಹೇಳಿರುವರು. ಈ ಉಪಾಧಿಗಳು ಇವರಿಗೆ ಸಹಜವಾಗಿ ಇದ್ದವುಗಳೇ ಹೊರತು ಕಾರ್ಯತಃ ಬಂದವುಗಳಲ್ಲ. ನೈಜವಾದ ವಿಷಯವನ್ನೇ ಅವರು ಹೇಳಿಕೊಂಡಿರುವರಲ್ಲದೆ ಈಗಿನವರಂತೆ ತಮಗೆ ತಾವೇ ಉಪಾಧಿಗಳನ್ನು ಹಚ್ಚಿಕೊಂಡಿಲ್ಲ. ಹದಿನಾಲ್ಕನೇ ಶತಮಾನದ ಅಂತಿಮ ಭಾಗ ಅಥವಾ ಹದಿನೈದನೇ ಶತಮಾನದ ಆರಂಭ ಭಾಗ ಈ ಕಾಲವು ಅರಮನೆ ಗುರುಮನೆ ಒಂದಾಗಿ ನಡೆಯುವಂತಹ ಭಕ್ತಿ ಪ್ರಧಾನವಾದ ಕಾಲ. ಸತ್ಯ ಸಂಗತಿಯಲ್ಲಿ ಸ್ವಲ್ಪ ವ್ಯತ್ಯಾಸ ಕಂಡು ಬಂದರೆ ಕೂಡಲೇ ಶಾಸನ ಮಾಡುವಂತಹ ಕಾಲ. ಸಾಮಾನ್ಯ ಮಠಾಧಿಕಾರಿಗಳಾದ ಸ್ವಾಮಿಗಳು ಅಂಥಾ ಕಾಲದಲ್ಲಿ ಷಟ್‌ಸ್ಥಲ ಸಾರ್ವಭೌಮ ( ನಿರಂಜನ ಜಗದ್ಗುರು ) ಎಂದು ಬರೆದುಕೊಳ್ಳಲಾರರು. ಇವರು ಹಾಗೆ ಬರೆದುಕೊಂಡುದು ಸತ್ಯ ಸಂಗತಿಯೇ

ಹೊರತು ಅಹಂಕಾರ ದ್ಯೋತಕವಾದುದಲ್ಲ. ಇತ್ತೀಚೆಗೆ ಬ್ರಿಟಿಷರ ಕಾಲದಲ್ಲಿಯೇ ಅರಮನೆ ಗುರುಮನೆಗಳ ಸಂಬಂಧವು ತಪ್ಪುತ್ತ ಬಂದು ಅಲ್ಪ ಸ್ವಲ್ಪ ಉಳಿದಿತ್ತು. ಭಾರತಕ್ಕೆ ಸ್ವಾತಂತ್ರ್ಯ ಬಂದ ನಂತರ ಅವೆರಡರ ಸಂಬಂಧ ಬೆಳೆಯುವದು ಒತ್ತಟ್ಟಿಗಿರಲಿ, ಗುರುಮನೆಗಳನ್ನೇ ಕಿತ್ತು ಹಾಕಬೇಕೆಂಬ ವಿಚಾರವು ಭಾರತದ ತುಂಬ ತಾಂಡವ ವಾಡುತ್ತಿದೆ. ಅಂತೆಯೇ ಈ ಕಾಲದಲ್ಲಿ ಊರೂರಿಗೆ, ಓಣಿ ಓಣಿಗೆ, ಮನೆ ಮನೆಗೆ ಜಗದ್ಗುರುಗಳು, ನ್ಯಾಯಾಚಾರ್ಯರು, ವೇದಾಂತಾಚಾರ್ಯರು, ಧರ್ಮಶಿರೋಮಣಿಗಳು, ಕೀರ್ತನಕಂಠೀರವರು, ವೈಯಾಕರಣಕೇಸರಿಗಳು, ಅಭಿನವ ಕಾಳಿದಾಸರು, ಅಭಿನವಾಲ್ಲಮರು ಆಗಿರುವರು. ಅಂತು ಯಾರು ಏನು ಬರೆದುಕೊಂಡರೂ ಕೇಳುವವರೇ ಇಲ್ಲದಂಥ ಕಾಲವು ಈಗ ಬಂದಿದೆ. ಈಗಿನವರಂತೆಯೇ ಶ್ರೀ ಚೆನ್ನಬಸವಸ್ವಾಮಿಗಳು ಬರೆದುಕೊಂಡಿರುವರೆಂದು ಹೇಳಲಿಕ್ಕೆ ಅವಕಾಶವಿಲ್ಲ. ಕಾಲಾನುಗುಣವಾಗಿ ಕಲ್ಪನೆಯನ್ನು ಮಾಡಬೇಕಾಗುವದು.

ಈ ಚೆನ್ನಬಸವಸ್ವಾಮಿಗಳು ಶಿವಯೋಗದಲ್ಲಿ ಎಷ್ಟು ಬಲ್ಲಿದರಿದ್ದರೆಂಬುದನ್ನು ಊಹಿಸಬೇಕಾದ ಪ್ರಸಂಗವೇ ಇಲ್ಲ. ಈ ಗ್ರಂಥದ ಹನ್ನೊಂದನೇ ಸಂಧಿಯಲ್ಲಿ ಹೇಳಿದ

ಪೂಜೆಭಕ್ತಿ ಧ್ಯಾನಧಾರಣ
ಯೋಜಿತ ಜ್ಞಾನಂಗಳಿಂ ತ
ನ್ನೈಜ ಸಾಕ್ಷಾತ್ಕಾರಮಿಲ್ಲದೆ ಧ್ಯಾನ ಮಾತ್ರಕ್ಕೆ ||
ಆ ಜಲಾಂತರ್ದೀಪದಂತೆ ವಿ
ರಾಜಿಪುದು ನಿಜಮಲ್ಲ ಬಳಿಕಾ
ರಾಜಯೋಗದ ಮೇಲೆ ಶಿವಯೋಗಾನುಭವವಿಹುದು || ೧೪ ||
ಶಸ್ತ ಶಿವಯೋಗಾನುಭವದಿಂ
ವಸ್ತು ಸಾಕ್ಷಾತ್ಕಾರಮಲ್ಲದೆ ........ ನಿ
ರಸ್ತ ಸ್ವಸ್ವೈಶ್ವರ್ಯದಂದದೋ
ರಸ್ತಮಿಸಿ ಒಯಲಪ್ಪುದದು ನಿಜಮಲ್ಲ ತಿಳಿಮದುಳೆ || ೧೮ ||

ಇತ್ಯಾದಿ ವಿಷಯವನ್ನು ಚನ್ನಾಗಿ ಮನನ ಮಾಡಿಕೊಂಡರೆ ಸ್ಪಷ್ಟವಾಗಿ ಅನುಭವಕ್ಕೆ ಬರುವದು. ಆದುದರಿಂದ ಇವರು ಶಿವಯೋಗೀಂದ್ರ ಎಂದು ಬರೆದುಕೊಂಡುದೂ ಅನ್ವರ್ಥಕವಾಗಿದೆ. ಇವರು ತಮ್ಮ ಗ್ರಂಥದ ಬಗ್ಗೆ

ಶ್ರುತಿ ಪುರಾಣಾಗಮರಹಸ್ಯೋ
ದಿತ ಪುರಾತನ ವಚನಶಾಸ್ತ್ರ ಪ್ರ
ತತಿಯೊಳು ಸಾಧಿಸಿದ ಸಂವಿತ್‌ಸಾರ ಸಂಗ್ರವು ||

ವೇದ, ಉಪನಿಷತ್ತು, ಆಗಮ, ಪುರಾಣ, ಶಿವರಹಸ್ಯಾದಿ ಗ್ರಂಥಗಳು ಮತ್ತು ಶಿವಶರಣರ ವಚನಶಾಸ್ತ್ರವು ಇವೆಲ್ಲವುಗಳನ್ನು ಚನ್ನಾಗಿ ಅಧ್ಯಯನ ಮಾಡಿ ಅವುಗಳ ಮಥನದಿಂದುಂಟಾದ ಜ್ಞಾನದ ಸಾರವೇ ಈ ಗ್ರಂಥವು ಎಂದು ಹೇಳಿಕೊಂಡಿರುವರು. ಈ ಮಾತು ಎಷ್ಟು ಸತ್ಯವಾಗಿದೆಂಬುದು ಆ ಗ್ರಂಥವನ್ನು ಪೂರ್ಣವಾಗಿ ಮನನಮಾಡಿ ಕೊಳ್ಳುವುದರಿಂದ ತಾನಾಗಿಯೇ ಸಿದ್ಧವಾಗುತ್ತಿದೆ. ಬೇರೆ ಹೇಳಬೇಕಾದುದಿಲ್ಲ.

ಚೆನ್ನಬಸವಸ್ವಾಮಿಗಳೆಂಬ ಹೆಸರಿನ ಗ್ರಂಥಕರ್ತೃಗಳು ೩-೪ ಜನರು ಆಗಿರುವುದ ರಿಂದ ಕ್ಷೇತ್ರಜ್ಞ ಸುಮನೋವಾದದ ಕರ್ತೃಗಳಾದ ಚೆನ್ನಬಸವಸ್ವಾಮಿಗಳು ಯಾರೆಂಬುದನ್ನು ನಿರ್ಧರಿಸಲಿಕ್ಕೆ ಮೇಲೆ ಹೇಳಿದ ವಿಶೇಷಣಗಳೇ ಮಾರ್ಗದರ್ಶಕ ಗಳಾಗಿವೆ. ಪ್ರಭುಪರಂಪರಾಗತ ಶೂನ್ಯಪೀಠದ ಮುಖ್ಯಾಧಿಕಾರಿಗಳೂ, ಅಘಟಿತ ಘಟನಾ ಸಮರ್ಥರೂ ಪರಮಾಪತಾರಿಗಳೂ ಆದ ಎಡೆಯೂರ ಸಿದ್ಧಲಿಂಗ ಮಹಾ ಶಿವಯೋಗಿಗಳ ಗುರುಗಳೂ ಆದ, ಹರದನಹಳ್ಳಿಯ ಚೆನ್ನಬಸವಸ್ವಾಮಿಗಳೇ ಈ ಗ್ರಂಥಕ್ಕೆ ಕರ್ತೃಗಳು ಎಂದು ಸ್ಪಷ್ಟವಾಗಿ ಹೇಳಬಹುದು. ಇದಕ್ಕೆ ಮೂರು ಕಾರಣಗಳನ್ನು ಕೊಡಬಹುದು. ೧. ಎಡೆಯೂರ ತೋಂಟದ ಶ್ರೀ ಸಿದ್ಧಲಿಂಗ ಶಿವಯೋಗಿಗಳಂತಹ ಮಹಾಮಹಿಮರು ಗುರುವನ್ನು ಹುಡುಕುತ್ತ ಭೂಮಂಡಲದಲ್ಲಿ ಸಂಚ ರಿಸಿ ಈ ಚೆನ್ನಬಸವ ಸ್ವಾಮಿಗಳವರನ್ನು ಗುರುಗಳನ್ನಾಗಿ ಮಾಡಿಕೊಳ್ಳಬೇಕಾದರೆ ಆ ಚೆನ್ನಬಸವಸ್ವಾಮಿಗಳು ಎಂಥ ಶಿವಾನುಭಾವಿಗಳಿದ್ದರೆಂಬುದನ್ನು ಬರೆಯುವ ಸಾಮರ್ಥ್ಯ ಲೇಖಕನಿಗೆ ಇರುವದಿಲ್ಲ. ಆ ಚೆನ್ನಬಸವಸ್ವಾಮಿಗಳು ಅಸಾಧಾರಣ ಪಾಂಡಿತ್ಯವುಳ್ಳ ವರೂ ಅನನ್ಯಸದೃಶವಾದ ಶಿವಯೋಗ ಸಂಪನ್ನರೂ ಇದ್ದರೆಂದೇ ಈ ಕ್ಷೇತ್ರಜ್ಞ ಸುಮನೋವಾದವೆಂಬುವ ಉದ್ಗ್ರಂಥವನ್ನು ಬರೆದಿರುವರು. ಈ ಗ್ರಂಥವನ್ನು ಸಾದ್ಯಂತವಾಗಿ ಸೂಕ್ಷ್ಮ ದೃಷ್ಟಿಯಿಂದ ಚನ್ನಾಗಿ ನಾಲ್ಕಾರು ಸಾರೆ ಪಠನ ಮಾಡಿ ದಾಗ ಅದರ ಮಹತ್ವವು ಸ್ಫುಟವಾಗಿ ತೋರಬಹುದು. ೨. ವೀರಶೈವರ ಮೂಲ ವಸ್ತುವಾದ ಸರ್ವಶೂನ್ಯ ನಿರಾಲಂಬ ಸ್ಥಲವು ಪ್ರವೃತ್ತಿ ಮಾರ್ಗದಲ್ಲಿ ಶೂನ್ಯಸ್ಥಲವಾಗಿ, ನಂತರ ಸತ್, ಚಿತ್, ಆನಂದ ನಿತ್ಯ ಪರಿಪೂರ್ಣವೆಂಬ ಪಂಚಲಕ್ಷಣ ಲಕ್ಷಿತ ನಿಷ್ಕಲ ಶಿವಲಿಂಗವಾಗಿ ಮುಂದೆ ಮಹಾಲಿಂಗಾದಿ ವಿಕಾಸವಾದ ಸನ್ನಿವೇಶವು ಎಡೆಯೂರ ಶ್ರೀತೋಂಟದಾರ್ಯರ ಸಿದ್ಧೇಶ್ವರ ವಚನದಲ್ಲಿಯೂ, ಈ ಕ್ಷೇತ್ರಜ್ಞಸುಮನೋವಾದ ದಲ್ಲಿಯೂ ಒಂದೇ ರೀತಿಯಾಗಿ ಬಂದಿರುವದು. ಗುರು ಶಿಷ್ಯರಲ್ಲಿ ವಿಷಯ ಸಂಯೋಜ ನೆಯು ಏಕವಿಧವಾಗಿರುವದು ಸಹಜವಾಗಿದೆ. ಸಿದ್ಧೇಶ್ವರ ವಚನಕ್ಕಿಂತಲೂ ಈ ಗ್ರಂಥದಲ್ಲಿಯೇ ವಿಷಯ ವಿವೇಚನೆಯು ಬಹು ಸೂಕ್ಷ್ಮವಾಗಿ ಖಂಡನಮಂಡನ ಪೂರ್ವಕವಾಗಿ ಮಾಡಲ್ಪಟ್ಟದೆ. ಇದು ಗುರುವಿನ ವೈಶಿಷ್ಟ್ಯದ್ಯೋತಕವು. ೩. ಎಡೆಯೂರ ತೋಂಟದಾರ್ಯರ ಕಾಲವು ಸರಾಸರಿ ೧೪೭೦ ಇಸ್ವಿ ಎಂದು ಇತಿಹಾಸಕಾರರು ನಿರ್ಧರಿಸಿರುವರು. ಇದಾದರೂ ತೋಂಟದಾರ್ಯರ ಆರಂಭ

ಕಾಲವಲ್ಲ, ಒಳ್ಳೆ ಪ್ರಾಶಸ್ತ್ಯದ ಕಾಲವಿರಬಹುದು. ಈ ಗ್ರಂಥ ಕರ್ತೃಗಳಾದ ಚೆನ್ನಬಸವಸ್ವಾಮಿಗಳವರು ೧೫೩೩ ಅಥವಾ ೧೪೭೩ ಇಸ್ವಿಯಲ್ಲಿ ಈ ಗ್ರಂಥವು ಪೂರ್ಣವಾಗಿದೆಂದು ಉಲ್ಲೇಖಿಸಿರುವುದರಿಂದ ಇಬ್ಬರಿಗೂ ೫೦-೬೦ ವರ್ಷ ಅಂತರ ವಿದ್ದುದರಿಂದ ಗುರುಶಿಷ್ಯ ಭಾವವು ಸುಸಾಧ್ಯವಾಗಿದೆ. ಈ ಕಾರಣಗಳಿಂದ ಇವರು ತೋಂಟದಾರ್ಯರ ಗುರುಗಳಾದ ವಾಣಿಜ್ಯಪುರದ ಶ್ರೀ ಚೆನ್ನಬಸವಸ್ವಾಮಿಗಳೆಂದೇ ನಿರ್ಧರಿಸಲು ಅನುಮಾನವಿಲ್ಲ.

## ಗ್ರಂಥಕಾರರ ಕಾಲ

ಈ ಕ್ಷೇತ್ರಜ್ಞ ಸುಮನೋವಾದವೆಂಬ ಪ್ರಬಂಧವು ಪೂರ್ಣವಾದ ಕಾಲ ವನ್ನು ಗ್ರಂಥಕಾರರು ಗ್ರಂಥದ ಕೊನೆಯಲ್ಲಿ

ಸನ್ನಿಧೀಶ್ವರವದನ ಶಿವ ಶ
ಕ್ತ್ಯನ್ವಯ ಸುಧಾಕರರ ಸಂಖ್ಯೆಯೊ
ಳುನ್ನತ ಕ್ಷೇತ್ರಜ್ಞ ಸುಮನೋವಾದ ಪದಬಂಧಂ ||

ಎಂದು ಸ್ವತಃ ಹೇಳಿರುವುದರಿಂದ ಅನ್ಯವಿಚಾರಕ್ಕೆ ಅವಕಾಶವೇ ಇರುವ ದಿಲ್ಲ. ಅಂಕಾನಾಂ ವಾಮತೋಗತಿಃ ಎಂಬ ಪ್ರಮಾಣಾನುಸಾರ ಎಡಕ್ಕೆ ಎಣಿ ಸಿದರೆ ಈಶ್ವರವದನ ೫-ಶಿವ, ೧-ಶಕ್ತಿ, ೩-ಸುಧಾಕರ, ೧ ಅಂತು ೧೩೧೫ ಶಾಲಿವಾಹನ ಶಕ ಆಗುತ್ತದೆ. ಇಸ್ವಿ ೧೫೩೩ ಆಗುತ್ತದೆ. ಇಲ್ಲಿ ಶಿವ ಶಬ್ದಕ್ಕೆ ಕೆಲವರು ಮೂರು ಎಂದು ಅರ್ಥ ಮಾಡುವರು. ಚಂದ್ರನಂತೆ ಶಿವನು ಒಬ್ಬನೇ ಇರುವುದರಿಂದ ಒಂದು ಹೇಳುವದು ಸಹಜ ಮೂರು ಹೇಳುವುದರ ಕಾರಣ ಅವ ರಿಗೇ ಗೊತ್ತು. ಅರ್ಥಾತ್ ಈ ಗ್ರಂಥಕಾರರು ೧೪ನೇ ಶತಮಾನದ ಉತ್ತರಾರ್ಧದಲ್ಲಿ ಅಥವಾ ೧೫ನೆಯ ಶತಮಾನದ ಪ್ರಾರಂಭದಲ್ಲಿದ್ದರೆಂಬುದು ತಾನಾಗಿ ಸಿದ್ಧವಾಗಿ ರುವದು.

## ಕೊನೆಯ ಮಾತು

ಇದರಲ್ಲಿ ಅಲ್ಲಲ್ಲಿ ಪಾಠಾಂತರ ಕೊಟ್ಟಿದೆ. ಈ ಪಾಠಾಂತರವು ಮೈಸೂರು ಓರಿಯಂಟಲ ಲಾಯಬ್ರರಿಯಿಂದ ಬಂದ ಪದ್ಯಗಳಿಗೂ ನಮ್ಮಲ್ಲಿದ್ದ ಕೈಬರಹದ ಪ್ರತಿಗೂ ನೋಡಲಾಗಿ ಕಂಡು ಬಂದುದನ್ನೇ ಸರಿಮಾಡಿ ಸ್ವಂತ ಹಾಕಿದ್ದು ಇರುತ್ತದೆ. ತ್ರುಟಿತ ಭಾಗದಲ್ಲಿ ಹೆಚ್ಚಾಗಿ ಜೋಡಿಸಿದಲ್ಲಿ ಸ್ವಂತ ಪಾಠವೆಂದು ಅಲ್ಲಲ್ಲಿ ಬರೆದೇ ಇರುವೆವು. ಸಣ್ಣ ಪುಟ್ಟ ಬದಲಾವಣೆ ಮಾಡಿದಲ್ಲಿ ಸ್ವಂತ ಪಾಠವೆಂದು ಬರೆದಿಲ್ಲ

ಅರ್ಥಾತ್ ನಾಲ್ಕಾರು ಪ್ರತಿಗಳಿದ್ದು ಅವುಗಳಲ್ಲಿ ಬೇರೆ ಬೇರೆ ಇದ್ದ ಪಾಠಾಂತರವಲ್ಲ ಎಲ್ಲವೂ ಸ್ವಂತ ಪಾಠಗಳೇ. ಇವುಗಳಲ್ಲಿ ಏನಾದರೂ ಹೆಚ್ಚು ಕಡಿಮೆಯಾಗಿದ್ದರೆ ಅದನ್ನು ಸರಿಮಾಡಿಕೊಳ್ಳಲು ಶಿವಾನುಭವಿಗಳಿಗೆ ಮುಕ್ತದ್ವಾರವಿರುತ್ತದೆ. ಹಾಗೆ ವ್ಯತ್ಯಾಸ ಕಂಡವರು ತಮ್ಮ ಸದಭಿಪ್ರಾಯವನ್ನು ತಿಳುಹಿಸಿದಲ್ಲಿ ಮುಂದಿನ ಮುದ್ರಣದಲ್ಲಿ ಸರಿಪಡಿಸಿಕೊಳ್ಳಲು ಅನುಕೂಲವಾಗುವದು. ಈ ಗ್ರಂಥದ ಮೂಲ ಪ್ರತಿಯ ೧೬೮ ಪುಟದವರೆಗೆ ಧಾರವಾಡದ ರವೀಂದ್ರ ಮುದ್ರಣಾಲಯದಲ್ಲಿ ಮುದ್ರಣವಾಗಿತ್ತು. ಮುಂದಿನ ಮತ್ತು ಇತರ ಯಾವತ್ತೂ ಕಾರ್ಯವು ಹುಬ್ಬಳ್ಳಿಯ. ಮನೋಹರ ಪ್ರೆಸ್ಸಿನಲ್ಲಿ ಮುದ್ರಣವಾಗಿದೆ. ಅತ್ಯಲ್ಪ ಸಮಯದಲ್ಲಿ ಬಹಳ ಶ್ರಮ ವಹಿಸಿ ಮುದ್ರಣ ಕಾರ್ಯವನ್ನು ಪೂರೈಸಿ ಕೊಟ್ಟ ಮನೋಹರ ಪ್ರಿಂಟಿಂಗ ಪ್ರೆಸ್ಸಿನ ಮಾಲಕರ ಉಪಕಾರವನ್ನು ಸದಾ ಸ್ಮರಿಸುವೆವು.

**ಪಂಡಿತ ಬಸವರಾಜಶಾಸ್ತ್ರಿ ಬೃಹನ್ಮಠ ಪಗಡದಿನ್ನಿ**
ವ್ಯಾಕರಣ ತೀರ್ಥ, ವ್ಯಾಕರಣ ರತ್ನ, ವ್ಯಾಕರಣ ಶಾಸ್ತ್ರಿ, ಸಾಹಿತ್ಯ ಶಿರೋಮಣಿ.

---

ಶ್ರೀ ಸಿದ್ಧಲಿಂಗೇಶ ಪ್ರಸೀದ

# ವಿಷಯಾನುಕ್ರಮಣಿಕೆ

ಸಂಧಿ ವಿಷಯ ಪುಟ ೧–೧೮

೧ ಪದ್ಯ–೬೩

**ಮೂಲವಸ್ತು ಯಾವುದೆಂಬುದು ಈ ಸಂಧಿಯಲ್ಲಿ ವಿಶದವಾಗಿ ವಿವರಿಸಲ್ಪಟ್ಟಿರುತ್ತದೆ.**

ಆರಂಭದಲ್ಲಿ ಶ್ರೀ ಬಸವಾದಿಪ್ರಮಥರ ಸ್ತೋತ್ರ, ನಂತರ ಗ್ರಂಥದ ಬಗ್ಗೆ ವೇದ, ಆಗಮ, ಉಪನಿಷತ್ತು, ಪುರಾಣ, ಶಿವರಹಸ್ಯ ಮತ್ತು ಪುರಾತನರ ವಚನಶಾಸ್ತ್ರ ಇವೆಲ್ಲವುಗಳ ಸಾರಸಂಗ್ರಹ ರೂಪ ವಿಷಯವು, ದೀಕ್ಷಾತ್ರಯಗಳಿಂದ ಮಲತ್ರಯಗಳನ್ನು ಕಳೆದುಕೊಂಡು ಜ್ಞಾನಕ್ರಿಯಾಸಮನ್ವಯರೂಪವಾದ ಷಡ್ವಿಧಭಕ್ತಿಯುಳ್ಳವರು ಅಧಿಕಾರಿಗಳು, ಪ್ರತಿಪಾದ್ಯಪ್ರತಿಪಾದಕ ಭಾವ ಸಂಬಂಧವು, ಲಿಂಗಾಂಗ ಸಾಮರಸ್ಯ ರೂಪ ಪರಮ ಪ್ರಯೋಜನ ಎಂಬ ಅನುಬಂಧ ಚತುಷ್ಟಯವನ್ನು ಹೇಳಿ ಮೂಲ ವಸ್ತುವನ್ನು ನಿರೂಪಿಸಿರುವನು.

ನಿರಾಕಾರ, ನಿರವಯವ. ನಿರಂಜನವಾದ, ಆ ಮೂಲ ವಸ್ತುವಿನ ಸ್ವರೂಪ ವನ್ನು ಹೇಳಲು ಶ್ರುತಿಗಳು ಹೆದರಿರುತ್ತವೆ.

ಆ ಮೂಲ ವಸ್ತುವನ್ನು ಗ್ರಂಥಕಾರನು "ಸರ್ವಶೂನ್ಯ ನಿರಾಲಂಬ" ಎಂದು ಕರೆದಿರುವನು. ಇಂತಹ ಮೂಲವಸ್ತುವಿನಲ್ಲಿ ಅವಿನಾಭಾವಸಂಬಂಧದಿಂದ ಲೀನ ವಾಗಿದ್ದ ಚಿಚ್ಛಕ್ತಿಯು ಚಲನೆಗೊಳ್ಳಲು ಆ ಚಲನೆಯಿಂದ ಓಂ ಎಂಬ ನಾದವು ಹುಟ್ಟುತ್ತದೆ. ಆ ನಾದದಿಂದ ಆ ವಸ್ತುವು, ನಿರಾಕಾರವಾದ ವಾಯುವು ಭೂಮ್ಯಾಕಾಶಗಳ ಮಧ್ಯದಲ್ಲಿ ಸುಳಿಗೊಂಡು ದಂಡಾಕಾರವಾಗಿ ತೋರುವಂತೆ, ಸಗುಣ ವಾಗುವದು. ಆಗ ಅನಿರ್ವಾಚ್ಯವಾದ ವಸ್ತುವೇ ವಾಚ್ಯವಾಗುವದು. ಈ ವಸ್ತುವೇ ಪ್ರವೃತ್ತಿ ಮಾರ್ಗದಲ್ಲಿ ಶೂನ್ಯವೆನಿಸಿಕೊಂಡು ಸತ್, ಚಿತ್, ಆನಂದ, ನಿತ್ಯ, ಪರಿಪೂರ್ಣ ಎಂಬ ಐದವಯವಗಳನಂಗೀಕರಿಸಿ ನಿಷ್ಕಲ ಶಿವತತ್ವವೆನಿಸಿಕೊಳ್ಳುವದು. ಇದೇ ಶಿವಾದಿ ಭೂಮ್ಯಂತವಾದ ವಿಶ್ವದ ಸೃಷ್ಟಿಗೆ ಕಾರಣವಾಗಿರುವದು.

ಈ ಶಿವತತ್ವದಲ್ಲಿ ಲೀನವಾಗಿದ್ದ ಚಿಚ್ಛಕ್ತಿಯು ಆರು ಅಂಗ ಸ್ವರೂಪವನ್ನು ಹೊಂದುವದು. ಆಗ ಶಿವನು ಆರು ಲಿಂಗಸ್ವರೂಪವನ್ನು ಹೊಂದುವನು. ಮಹಾ ಸಾದಾಖ್ಯ, ಶಿವಸಾದಾಖ್ಯ, ಅಮೂರ್ತಿಸಾದಾಖ್ಯ, ಮೂರ್ತಿಸಾದಾಖ್ಯ, ಕರ್ತೃ ಸಾದಾಖ್ಯ, ಕರ್ಮಸಾದಾಖ್ಯ ಎಂಬ ಆರು ಸಾದಾಖ್ಯಗಳು ಪ್ರಕಟವಾಗುವವು. ಒಂದೊಂದು ಸಾದಾಖ್ಯದಲ್ಲಿ ಎಂಟೆಂಟು ಬೇರೆಯಾಗಿದ್ದು ಒಟ್ಟಿಗೆ ನಾಲ್ವತ್ತೆಂಟು ಚಿದಾತ್ಮಾದಿಗಳಿರುತ್ತವೆ.

ಶಿವನು ಪರಬ್ರಹ್ಮ, ವಿಜ್ಞಾನಬ್ರಹ್ಮ, ಆನಂದಬ್ರಹ್ಮ, ಕಲಾಬ್ರಹ್ಮ, ಪಿಂಡ ಬ್ರಹ್ಮ, ಮೂರ್ತಿಬ್ರಹ್ಮ ಎಂಬ ಆರು ಬ್ರಹ್ಮ (ಲಿಂಗ) ಸ್ವರೂಪವನ್ನು ಹೊಂದಿದಾಗ ಶಕ್ತಿಯು ಶಿವಾಂಗ, ಭೌತಿಕಾಂಗ, ಯೋಗಾಂಗ, ಕಾಮಾಂಗ, ವಿದ್ಯಾಂಗ, ಕರ್ಮಾಂಗ ಎಂಬ ಆರು ಅಂಗಸ್ವರೂಪವನ್ನು ಹೊಂದುವದು. ಚಿಚ್ಛಕ್ತಿಯಿಂದ ಶಿವಾಂಗವು, ಪರಾಶಕ್ತಿಯಿಂದ ಭೌತಿಕಾಂಗವು, ಆದಿಶಕ್ತಿಯಿಂದ ಯೋಗಾಂಗವು, ಇಚ್ಛಾಶಕ್ತಿಯಿಂದ ಕಾಮಾಂಗವು, ಕ್ರಿಯಾಶಕ್ತಿಯಿಂದ ಕರ್ಮಾಂಗವು ಪ್ರಕಟವಾಗುವವು.

ಇವುಗಳಲ್ಲಿ ಚಿಚ್ಛಕ್ತ್ಯಾದಿ ಕರ್ಮಾಂಗದವರೆಗೆ ಆರು ಸೃಷ್ಟಿಗೆ ಕಾರಣವಾಗಿಯೂ, ಪರಬ್ರಹ್ಮಾದಿ ಮೂರ್ತಿಬ್ರಹ್ಮರವರೆಗೆ ಆರು ಸಂಹಾರ ಕಾರಣವಾಗಿಯೂ ಇದ್ದು ಇವೆಲ್ಲವನ್ನೂ ತನ್ನಲ್ಲಿ ಗರ್ಭೀಕರಿಸಿಕೊಂಡಿರುವ ಶಿವತತ್ವವೇ ವಸ್ತುವು ಎಂದು ವಿವರಿಸಲ್ಪಟ್ಟದೆ.

| ಸಂಧಿ | ವಿಷಯ | ಪುಟ ೧೯–೩೪ |
|---|---|---|
| ೨ | | ಪದ್ಯ–೩೧ |

**ವಿಶ್ವೋತ್ಪತ್ತಿಯು ಹೇಗಾಯಿತೆಂಬುದು**
**ಈ ಸಂಧಿಯಲ್ಲಿ ವಿವರಿಸಲ್ಪಟ್ಟಿದೆ.**

ಸತ್, ಚಿತ್, ಆನಂದ, ನಿತ್ಯ, ಪರಿಪೂರ್ಣ ಎಂಬ ಪಂಚಲಕ್ಷಣವುಳ್ಳ ಪರ, ಗೂಢ, ಶರೀರಸ್ಥ, ಲಿಂಗಕ್ಷೇತ್ರ, ಅನಾದಿಮತ್ ಎಂಬ ಪಂಚ ಸಂಜ್ಞೆಯುಳ್ಳ ನಿಷ್ಕಲ ಶಿವತತ್ವವು ಸಾಕಾರವಾಗಿ ವಿಶ್ವಮೂರ್ತಿಯಾಗಿದೆ. ಈ ವಿಶ್ವಮೂರ್ತಿಯಾದ ಮಹಾ ಲಿಂಗದಿಂದ ಅಹಂಕಾರವು, ಅಹಂಕಾರದಿಂದ ಪಂಚ ತನ್ಮಾತ್ರೆಗಳು, ಇವುಗಳಿಂದ ಚರಾಚರಾತ್ಮಕವಾದ ವಿಶ್ವವು ಪ್ರಕಟವಾಗುತ್ತದೆ. ಹೇಗೆಂದರೆ:–

ಆ ನಿಷ್ಕಲ ಶಿವತತ್ವವು ಚಿಚ್ಛಕ್ತಿಯ ಸಂಗದಿಂದ ಸಾಕಾರವಾಗಿ ಮಹಾ ಸಾದಾಖ್ಯ ರೂಪ ಮಹಾಲಿಂಗವಾಗುವದು, ಈ ಮಹಾಲಿಂಗದಿಂದ ಶಿವಸಾದಾಖ್ಯದ ಉದಯವು, ಅದರಿಂದ ಪ್ರಸಾದಲಿಂಗ, ಅದರಿಂದ ಈಶಾನಮುಖ, ಅದರಿಂದ ಯಕಾರ ಪ್ರಣವ, ಅದರಿಂದ ಶಾಂತ್ಯತೀತ ಕಲೆ, ಅದರಿಂದ ಪರಾಶಕ್ತಿ, ಈ ಪರಾಶಕ್ತಿಯಿಂದ ಜ್ಞಾನರೂಪಾಂತಃಕರಣ, ಇದರಿಂದ ಶಬ್ದತನ್ಮಾತ್ರದ ಉದಯವು.

ಆ ಶಿವತತ್ವದಿಂದ ಅಮೂರ್ತಸಾದಾಖ್ಯದ ಉದಯ, ಅದರಿಂದ ಜಂಗಮಲಿಂಗ, ಅದರಿಂದ ತತ್ಪುರುಷ ಮುಖ, ಅದರಿಂದ ವಾಕಾರ ಪ್ರಣವ, ಆ ಪ್ರಣವದಿಂದ ಶಾಂತಿ ಎಂಬ ಕಲೆ, ಅದರಿಂದ ಆದಿಶಕ್ತಿ, ಆ ಶಕ್ತಿಯಿಂದ ಮನಸ್ಸು, ಮನಸ್ಸಿನಿಂದ ಸ್ಪರ್ಶ ಎಂಬ ತನ್ಮಾತ್ರದ ಉದಯವು.

ಶಿವತತ್ವದಿಂದ ಮೂರ್ತಿಸಾದಾಖ್ಯದ ಉದಯ, ಅದರಿಂದ ಶಿವಲಿಂಗ, ಆ ಶಿವ ಲಿಂಗದಿಂದ ಅಘೋರ ಮುಖ, ಅದರಿಂದ ಶಿಕಾರಪ್ರಣವ, ಆ ಪ್ರಣವದಿಂದ ವಿದ್ಯಾಕಲೆ, ಇದರಿಂದ ಇಚ್ಛಾಶಕ್ತಿ, ಈ ಶಕ್ತಿಯಿಂದ ಅಹಂಕಾರ, ಇದರಿಂದ ರೂಪ ತನ್ಮಾತ್ರದ ಉದಯವು.

ಆ ಶಿವತತ್ವದಿಂದ ಕರ್ತೃಸಾದಾಖ್ಯದ ಉದಯ, ಅದರಿಂದ ಗುರುಲಿಂಗ, ಅದರಿಂದ ವಾಮದೇವಮುಖ, ಅದರಿಂದ ಮಃಪ್ರಣವವು, ಈ ಪ್ರಣವದಿಂದ ಪ್ರತಿಷ್ಠಾ ಕಲೆ, ಅದರಿಂದ ಜ್ಞಾನಶಕ್ತಿಯು, ಈ ಶಕ್ತಿಯಿಂದ ಬುದ್ಧಿ ಎಂಬ ಅಂತಃಕರಣ, ಇದರಿಂದ ರಸತನ್ಮಾತ್ರದ ಉದಯವು.

ಆ ಶಿವತತ್ವದಿಂದ ಕರ್ಮಸಾದಾಖ್ಯದ ಉದಯ, ಅದರಿಂದ ಆಚಾರಲಿಂಗ, ಆ ಲಿಂಗದಿಂದ ಸದ್ಯೋಜಾತ ಮುಖವು, ಅದರಿಂದ ನಕಾರ ಪ್ರಣವ, ಇದರಿಂದ ಪ್ರವೃತ್ತಿ ಎಂಬ ಕಲೆ, ಈ ಕಲೆಯಿಂದ ಕ್ರಿಯಾಶಕ್ತಿ, ಇದರಿಂದ ಚಿತ್ತ, ಈ ಚಿತ್ತದಿಂದ ಗಂಧ ಎಂಬ ತನ್ಮಾತ್ರದ ಉದಯವು.

ಶಬ್ದ ತನ್ಮಾತ್ರ ಒಂದರಿಂದ ಆಕಾಶದ ಉದಯವು. ಶಬ್ದ, ಸ್ಪರ್ಶ ಎರಡು ತನ್ಮಾತ್ರಗಳಿಂದ ವಾಯುವಿನ ಉದಯವು. ಶಬ್ದ, ಸ್ಪರ್ಶ, ರೂಪ ಈ ಮೂರು ತನ್ಮಾತ್ರೆಗಳಿಂದ ಅಗ್ನಿಯ ಉದಯ. ಶಬ್ದ, ಸ್ಪರ್ಶ, ರೂಪ, ರಸ ಈ ನಾಲ್ಕು ತನ್ಮಾತ್ರೆಗಳಿಂದ ಜಲದ ಉದಯವು. ಶಬ್ದ, ಸ್ಪರ್ಶ, ರೂಪ, ರಸ, ಗಂಧ ಈ ಪಂಚ ತನ್ಮಾತ್ರೆಗಳಿಂದ ಭೂಮಿಯ ಉದಯ.

ಈ ಆಕಾಶಾದಿ ಪಂಚಭೂತಗಳಲ್ಲಿ ಒಂದೊಂದರೊಳಗೆ ಐದೈದು ಭಾಗವಾಗಿ ಒಟ್ಟಿಗೆ ಇಪ್ಪತ್ತೈದು ತತ್ವಗಳಾಗುವವು. ಆಕಾಶದಲ್ಲಿ ಅಂತಃಕರಣ ಪಂಚಕವು, ವಾಯುವಿನಲ್ಲಿ ಪ್ರಾಣಾದಿಗಳು,ಅಗ್ನಿಯಲ್ಲಿ ಜ್ಞಾನೇಂದ್ರಿಯಗಳು, ಜಲದಲ್ಲಿ ಶಬ್ದಾದಿ ವಿಷಯಗಳು, ಭೂಮಿಯಲ್ಲಿ ಕರ್ಮೇಂದ್ರಿಯಗಳು ಆಗುವವು.

ಅವುಗಳ ಸಮರಸವು ಕೆಳಗಿನಂತಿದೆ,

| | ಆಕಾಶ | ವಾಯು | ಅಗ್ನಿ | ಜಲ | ಪೃಥಿವೀ |
|---|---|---|---|---|---|
| ಗಗನ ಪಂಚಕ : | ಜ್ಞಾನ | ಸಮಾನ | ಶ್ರವಣ | ಶಬ್ದ | ವಾಕ್ |
| ವಾಯುಪಂಚಕ : | ಮನಸ್ಸು | ಉದಾನ | ತ್ವಕ್ | ಸ್ಪರ್ಶ | ಪಾಣಿ |
| ಅಗ್ನಿಪಂಚಕ : | ಅಹಂಕಾರ | ವ್ಯಾನ | ಚಕ್ಷು | ರೂಪ | ಪಾದ |
| ಜಲಪಂಚಕ : | ಬುದ್ಧಿ | ಅಪಾನ | ಜಿಹ್ವಾ | ರಸ | ಗುಹ್ಯ |
| ಭೂಮಿಪಂಚಕ : | ಚಿತ್ತ | ಪ್ರಾಣ | ಘ್ರಾಣ | ಗಂಧ | ಗುದ |

ಇದರ ವಿವರವು:— ಆಕಾಶ ಆಕಾಶವನ್ನು ಕೂಡಿಕೊಳ್ಳಲು ಜ್ಞಾನ ಹುಟ್ಟಿತು. ಆಕಾಶ ವಾಯುವನ್ನು ಕೂಡಿಕೊಳ್ಳಲು ಮನಸ್ಸು ಹುಟ್ಟಿತು. ಆಕಾಶ ಅಗ್ನಿಯನ್ನು ಸೇರಲು ಅಹಂಕಾರ ಹುಟ್ಟಿತು, ಆಕಾಶ ಜಲವನ್ನು ಸೇರಲು ಬುದ್ಧಿ ಹುಟ್ಟಿತು, ಆಕಾಶ ಭೂಮಿಯನ್ನು ಕೂಡಿಕೊಳ್ಳಲು ಚಿತ್ತ ಹುಟ್ಟಿತು, ಇದೇ ರೀತಿ ಇನ್ನುಳಿದವುಗಳಲ್ಲಿಯೂ ತಿಳಿದುಕೊಳ್ಳಬೇಕು.

ಆಕಾಶದ ಅಂಶವಾದ ಜ್ಞಾನದಿಂದಾದ ಹದಿನೇಳು ತತ್ವಗಳಿಂದ ಸೂಕ್ಷ್ಮ ಶರೀರವಾಗುವದು. ಉಳಿದಿಪ್ಪತ್ತುನಾಲ್ಕು ತತ್ವಗಳಿಂದ ವಿವಿಧವಾದ ಅಗಣಿತ ಸ್ಥೂಲ ಶರೀರಗಳಾಗುವವು. ಈ ಸ್ಥೂಲ ಶರೀರದಲ್ಲಿ ಚರ್ಮ, ಕೂದಲು, ಮಾಂಸ, ಎಲುವು, ನರಗಳು ಇವೆಲ್ಲವು ಪೃಥ್ವಿಯ ಅಂಶಗಳು. ಬೆವರು, ರಕ್ತ, ಮಲ, ಮೂತ್ರ, ವೀರ್ಯ ಇವು ಜಲದ ಅಂಶಗಳು. ಆಲಸ್ಯ, ನಿದ್ರಾ, ಹಸಿವು, ತೃಷೆ ಇವು ಅಗ್ನಿಯ ಅಂಶಗಳು. ಚಲನ, ವಲನ, ಓಡುವದು, ಮಡಿಚುವದು, ನಡುಗು, ಇವು ವಾಯುವಿನ ಅಂಶಗಳು. ಲಜ್ಜಾ, ಭಯ, ಕಾಮಕ್ರೋಧಾದಿಗಳು ಆಕಾಶದ ಅಂಶಗಳು. ಈ ಪ್ರಕಾರ ಪಾಂಚ ಭೌತಿಕವಾದ ಅಂಗ (ದೇಹ) ವು ತಯಾರಾಗಲು ಅದರಲ್ಲಿ ಆತ್ಮನು ಬಂದು ಸೇರಿಕೊಂಡು ತತ್ತದಭಿಮಾನಿಯಾಗುವನು. ಈ ಆತ್ಮನೇ ದೇಹಿ ಎನಿಸಿಕೊಳ್ಳುವನು.

| ಸಂಧಿ | ವಿಷಯ | ಪುಟ ೩೫–೭೩ |
|---|---|---|
| ೩. | | ಪದ್ಯ–೭೧ |

## ಪಿಂಡಸ್ಥಲ

**ಪಿಂಡ ಎಂದರೆ ಯಾರು ಎಂಬುದು ಈ ಸಂಧಿಯಲ್ಲಿ ವಿಶದವಾಗಿ ವಿವರಿಸಲ್ಪಟ್ಟಿರುತ್ತದೆ.**

ಸರ್ವಶೂನ್ಯ ನಿರಾಲಂಬವೆಂಬ ಪರವಸ್ತುವಿನಿಂದ ಪ್ರಕಟವಾದ ನಿಷ್ಕಲ ಶಿವ ತತ್ವರೂಪ ವಸ್ತುವಿನಿಂದ ಆತ್ಮನು, ಈ ಆತ್ಮನಿಂದ ಆಕಾಶಾದಿ ಪಂಚಭೂತಗಳೂ, ಉದಯವಾಗಿ ಪಂಚವಿಂಶತಿ ೨೫ ತತ್ವಗಳು ವಿಕಾಸವಾದುದನ್ನು ಮೇಲೆ ವಿವರಿಸಿದೆ. ಈ ಪಂಚಭೂತಗಳ ಪಂಚೀಕರಣ ರೂಪವಾದ ೨೫ ತತ್ವಮಯವಾದುದೇ ದೇಹ, ಆತ್ಮನೇ ದೇಹಿಯಾದ ಕಾರಣ ಈ ದೇಹ ದೇಹಿಗಳೆರಡು ಸಮರಸವಾಗಿ ಪಿಂಡವೆನಿಸಿ ಕೊಳ್ಳುವದು.

### ಶಂಕಾ

ದೇಹ ದೇಹಿಗಳೆರಡು ಸಮರಸವಾಗಿರುವದರಿಂದ ದೇಹವನ್ನೇ ಆತ್ಮನೆಂದು ಹೇಳಬಹುದಲ್ಲಾ—ಏಕೆಂದರೆ ಪುಣ್ಯಪಾಪಗಳೂ ಅವುಗಳಿಂದುಂಟಾದ ಸುಖದುಃಖಾನುಭವವು, ಕರ್ಮಾನುಗುಣವಾಗಿ ವರ್ತಿಸುವಿಕೆಯೂ ಚಾತುರ್ಯವೂ ಮತ್ತು ನಾನು

ಗಿಡ್ಡನು, ನಾನು ಉದ್ದ, ನಾನು ಕೆಂಪು, ನಾನು ಕಪ್ಪು, ನಾನು, ಕೃಶ, ನಾನು ಸುಂದರ ಇತ್ಯಾದಿ ವ್ಯವಹಾರಗಳೆಲ್ಲವೂ ದೇಹವನ್ನಾಶ್ರಯಿಸಿಯೇ ನಡೆಯುತ್ತವೆ. ಇದರಿಂದ ದೇಹವೇ ಚೇತನವಾದುದೆಂದು ಕಂಡುಬರುತ್ತದೆ.

## ಸಮಾಧಾನ

ಶಿವತತ್ವದಿಂದ ಹೊರಬಿದ್ದ ಮಾಯೆಯೇ ಮೊದಲು ಅಚೇತನವಾದುದು, ಅದರಿಂದಾದ ಪಂಚಭೂತಗಳು ಅಚೇತನಗಳು, ಅವುಗಳಿಂದಾದ ದೇಹವೂ ಅಚೇತನ ವಾದುದು, ಅಂತೆಯೇ ಸುಷುಪ್ತಿ ಮೂರ್ಛಾದಿಗಳಲ್ಲಿ ದೇಹವು ಕಾರ್ಯವನ್ನು ಮಾಡಲಾರದು. ಮತ್ತು ಮೃತದೇಹದಲ್ಲಿ ಚೈತನ್ಯವಿಲ್ಲದುದರಿಂದ ದೋಷ ಪ್ರಾಪ್ತವಾಗುವದು ಕಾರಣ, ದೇಹವು ಚೇತನವಲ್ಲ.

ವಾಕ್, ಪಾಣಿ, ಪಾದಾದಿ ಕರ್ಮೇಂದ್ರಿಯಗಳು ಕಾರ್ಯ ಮಾಡುತ್ತಿರು ವುದರಿಂದ ಇವು ಚೇತನಗಳಾಗಬಹುದಲ್ಲಾ ಎಂದರೆ ಕರ್ಮೇಂದ್ರಿಯಗಳು ಕಾರ್ಯ ವನ್ನೇನೋ ಮಾಡುತ್ತವೆ, ಪರಂತು ಮನಸ್ಸನ್ನು ಕೂಡಿಕೊಂಡೇ ಮಾಡುತ್ತವೆ, ಮನಸ್ಸನ್ನು ಬಿಟ್ಟು ಕಾರ್ಯ ಮಾಡುವ ಸಾಮರ್ಥ್ಯ ಅವಕ್ಕಿಲ್ಲವಾದುದರಿಂದ ಅಸ್ವತಂತ್ರಗಳಾದ ಕರ್ಮೇಂದ್ರಿಯಗಳು ಚೇತನಗಳಾಗಲಾರವು. ಇದರಂತೆ ಜ್ಞಾನೇಂದ್ರಿಯಗಳೂ ಸಹ ಚೇತನಗಳಾಗಲಾರವು, ಏಕೆಂದರೆ, ಕುರುಡ, ಕುಂಟ, ಕಿವುಡ, ಮೂಕ, ಇವರಲ್ಲಿ ಆಯಾಯ ಜ್ಞಾನ ಕರ್ಮೇಂದ್ರಿಗಳಿಲ್ಲದಿದ್ದರೂ ನಾನು ಎಂಬ ಆತ್ಮಪ್ರತೀತಿ ಇರುವದರಿಂದ ಇಂದ್ರಿಯಗಳು ಚೇತನಗಳಲ್ಲ. ಇದೇ ರೀತಿ ಯಾಗಿ ಶಬ್ದಾದಿ ಪಂಚವಿಷಯಗಳೂ, ಪ್ರಾಣಾದಿ ಪಂಚವಾಯುಗಳೂ, ಮನ, ಬುದ್ಧಿ, ಚಿತ್ತ, ಅಹಂಕಾರ ಎಂಬ ಅಂತಃಕರಣ ಚತುಷ್ಟಯವೂ ಚೇತನಗಳಲ್ಲದೆಂದು ನಿರ್ಧರಿಸಿ ಇವೆಲ್ಲವುಗಳಿಗಿಂತಲೂ ಭಿನ್ನನಾದ ಆತ್ಮನೇ ಚೇತನನು. ಸ್ಥೂಲಶರೀರವು ಜಡ ವಾದುದು. ಸೂಕ್ಷ್ಮ ಶರೀರವು ಜಡಾಜಡವಾದುದು. ಕಾರಣಶರೀರವು ಅಜಡ ವಾದುದು. ಚಂದ್ರಕಾಂತ ಶಿಲೆಯು ಜಪಾಕುಸುಮದ (ಕೆಂಪು ದಾಸವಾಳದ ಹೂವಿನ) ಬಳಿಯಲ್ಲಿ ಕೆಂಪಗೆ ಕಾಣುವಂತೆ ಈ ಆತ್ಮನು ಅಹಂಕಾರದ ಯೋಗದಿಂದ ಮಾಯಾ ಕಾರ್ಯವಾದ ಈ ದೇಹದಲ್ಲಿ ಸೇರಿ ಜೀವನೆನಿಸಿಕೊಳ್ಳುವನು. ಆತ್ಮರಲ್ಲಿ ವಿಶ್ವ, ತೈಜಸ, ಪ್ರಾಜ್ಞ ಎಂಬ ಮೂರು ಭೇದಗಳು ಶರೀರ ಸಂಬಂಧದಿಂದ ಪ್ರಾಪ್ತ ವಾಗುತ್ತವೆ. ಶರೀರೇಂದ್ರಿಯ ವಿಷಯಾದಿಗಳ ಸಂಗದಿಂದ ಜೀವನು ಸಂಚಿತ ಪ್ರಾರಬ್ಧಾ ದಿಗಳಿಗೆ ಒಳಪಟ್ಟು ಸುಖದುಃಖಾದಿಗಳನ್ನು ಅನುಭವಿಸುತ್ತ ನಾನಾಯೋನಿಯಲ್ಲಿ ತಿರುಗುತ್ತಿರುವನು. ಇಂಥಾ ಜೀವನು ಅನೇಕ ಜನ್ಮಗಳಲ್ಲಿ ಸಂಗೃಹೀತವಾದ ಪುಣ್ಯ ವಿಶೇಷದಿಂದ ಪಾಪ ಪಂಜರವು ನಾಶನಾಗಲು ಶುದ್ಧಜೀವನಾಗುವನು. ಆಗ ಈ ಶುದ್ಧ ಜೀವನಿಗೆ ಪಿಂಡ ಎಂಬ ಹೆಸರು ಪ್ರಾಪ್ತವಾಗುತ್ತದೆ.

| ಸಂಧಿ | ವಿಷಯ | ಪುಟ ೫೪–೬೨ |
|---|---|---|
| ೪ | | ಪದ್ಯ–೧೧೦ |

## ಪಿಂಡಜ್ಞಾನ

ಚರಮ ಶರೀರಿಯಾದ ಪಿಂಡನು (ಶುದ್ಧ ಜೀವನು) ಚಂದ್ರಕಾಂತ ಶಿಲೆಯಲ್ಲಡಗಿದ ಜಲದಂತೆ, ಸೂರ್ಯಕಾಂತ ಶಿಲೆಯಲ್ಲಡಗಿದ ಅಗ್ನಿಯಂತೆ, ಹಾಲಿನೊಳಡಗಿದ್ದ ತುಪ್ಪದಂತೆ, ಎಳ್ಳಿನೊಳಗಿದ್ದ ತೈಲದಂತೆ, ಬೀಜದೊಳಗಡಗಿದ್ದ ವೃಕ್ಷದಂತೆ, ಪಿಂಡದೊಳಡಗಿದ್ದ ಶಿವತ್ವವು ಪಿಂಡನಲ್ಲಿ ಉದಯವಾಗಿ, ಇದು ಆತ್ಮತತ್ವ, ಇದು ಶಿವತತ್ವ, ಇದು ಸತ್, ಇದು ಅಸತ್ ಎಂಬ ವಿವೇಕ ತಲೆದೋರಲು ಶಿವತತ್ವದ ಆದಿ ಮಧ್ಯ ಅವಸಾನಗಳನ್ನು ತಿಳಿಯುವವನಾಗಿ ಪಿಂಡಜ್ಞಾನಿ ಎನಿಸಿಕೊಳ್ಳುವನು.

ಶಿವನ ಕರುಣಾ ಕಟಾಕ್ಷದಿಂದ ಶಕ್ತಿಯು ಪಿಂಡ (ಶುದ್ಧ ಜೀವ) ನಲ್ಲಿ ಭಕ್ತಿಯಾಗಿ ಪರಿಣಮಿಸಿ ನಿವೃತ್ತಿಮಯವಾಗಿರುತ್ತದೆ. ಆದುದರಿಂದ ಪಿಂಡಜ್ಞಾನಿಯ ವಿಷಯ ವರ್ತನೆಗಳೆಲ್ಲವೂ ನಿವೃತ್ತಿಮಯವಾಗಿಯೇ ಇರುತ್ತವೆ. ಈ ನಿವೃತ್ತಿಮಯವಾದ ಭಕ್ತಿರೂಪ ಶಕ್ತಿಯೇ ಚಿಚ್ಛಕ್ತಿಯು, ಈ ಶಕ್ತಿಯಿಂದ ಸತ್, ಅಸತ್ ರೂಪ ಪದಾರ್ಥಗಳ ನಿಶ್ಚಿತವಾದ ವಿವರವನ್ನು ತಿಳಿಯುವವನೇ ಪಿಂಡಜ್ಞಾನಿಯು. ಬ್ರಹ್ಮನಿಗಿರುವ ಸದ್ರೂಪಕ್ಕೆ ಪ್ರತಿಯಾಗಿ ಯಾವುದೊಂದು ಅಸದ್ರೂಪವು ಇರುವದಿಲ್ಲ. ಆ ಬ್ರಹ್ಮವು ಸತ್, ಚಿತ್, ಆನಂದ, ನಿತ್ಯ, ಪರಿಪೂರ್ಣ, ಅಖಂಡ ಎಂಬ ಲಕ್ಷಣವುಳ್ಳದ್ದು ಆಕಾಶಕ್ಕಿಂತಲೂ ದೊಡ್ಡದೂ ನಿರವಯವವೂ ಆಗಿದೆ.

ಅವಯವ ವಿಶಿಷ್ಟವಾದ ವೃಕ್ಷದಲ್ಲಿ ಬೇರು, ಬೊಡ್ಡೆ, ಶಾಖೆ, ಎಲೆ, ಹೂವು, ಕಾಯಿಗಳು ಸ್ವಗತ ಭೇದಗಳಾಗಿ ತೋರುವದು ಸಹಜ. ನಿರವಯವವಾದ ವಸ್ತುವಿನಿಂದ ಮಾಯೆಯು ಹೇಗೆ ಹುಟ್ಟುವದು. ಈ ಮಾಯೆಯು ಶುಕ್ತಿರಜತದಂತೆ, ರಜ್ಜುಸರ್ಪದಂತೆ, ಸ್ಥಾಣು (ಮೋಂಡ ಬೊಡ್ಡೆ) ಚೋರರಂತೆ ಬರಿ ತೋರಿಕೆಯದಾಗಿರುವದಾಗಿದೆಯಲ್ಲದೆ ವಿಚಾರದ ಒರೆಗಲ್ಲಿಗೆ ನಿಲ್ಲದು. ಕಾರಣ ಮಾಯೆಯು ಮಿಥ್ಯವಾದುದು. ಬ್ರಹ್ಮ ಒಂದೇ ಸತ್ಯವಾಗಿರುವದಲ್ಲಾ ಎಂಬ ಶಂಕೆಗೆ, ಮೂಲವಸ್ತುವು ಸತ್, ಚಿತ್ ಆನಂದಸ್ವರೂಪವಾದುದೆಂದು ಹೇಳುತ್ತೇನೆ. (ಸತ್) ಅಸ್ಮಿ ನಾನು ಇದ್ದೇನೆ. (ಚಿತ್) ಪ್ರಕಾಶೇ ನಾನು ಪ್ರಕಾಶಿಸುತ್ತೇನೆ. (ಆನಂದ) ನಂದಾಮಿ ನಾನು ಆನಂದಿಸುತ್ತೇನೆ ಎಂಬ ಅನುಭವದಿಂದ ಕೂಡಿರುತ್ತದೆಂದು ಹೇಳಿದಂತಾಯಿತು. ಈ ಅನುಭವವೇ ವಸ್ತುವಿನಲ್ಲಿರುವ ವಿಮರ್ಶ ಶಕ್ತಿಯು. ಇದಕ್ಕೇನೆ ಮಾಯೆಯೆನ್ನುವರು. ಈ ಶಕ್ತಿರೂಪ ಮಾಯೆಯು, ಚಂದ್ರನಲ್ಲಿರುವ ಕಲಂಕವು ಚಂದ್ರನಿಂದ ಬೆಳಗಿಸಿಕೊಳ್ಳುವಂತೆ, ವಸ್ತುವಿನಿಂದಲೇ ಅರುಹಿಸಿಕೊಳ್ಳುವದಾಗಿ

ವಸ್ತುವಿಗೆ ವಿಲಕ್ಷಣವಾಗಿ ತೋರದೆ ಯಾವಾಗಲೂ ವಸ್ತುವಿನಲ್ಲಿ ಅವಿನಾ ಭಾವದಿಂದ ಲೀನವಾಗುತ್ತದೆಯಲ್ಲದೆ ಅದು ಹುಟ್ಟುವದಿಲ್ಲ. ಮಿಥ್ಯ ವಾದುದೂ ಅಲ್ಲ, ಎಂದು ಸಮಾಧಾನ

ಈ ಮಾಯೆಯು ಮೂಲವಸ್ತುವಿಗೆ ಉಪಾಧಿಯಾಗಿರುವದು. ಶಕ್ತಿರೂಪ ಮಾಯೆಯಿಂದ ಮಹತತ್ತ್ವವುದಯವಾಗುವದು, ಮಹತ್ತತ್ವದಿಂದ ಮೂಲಾ ಹಂಕಾರವು. ಇದರಿಂದ ಗುಣತ್ರಯಗಳು ಪ್ರಕಟವಾಗುವವು. ಸತ್ವಗುಣದಿಂದ ಜ್ಞಾನೇಂದ್ರಿಯಗಳು, ರಜೋಗುಣದಿಂದ ಕರ್ಮೇಂದ್ರಿಯಗಳು, ತಮೋಗುಣದಿಂದ ಆಕಾಶಾದಿ ಪಂಚಭೂತಗಳು ಉದಯವಾಗುವವು, ಈ ಪಂಚಭೂತಗಳ ಪಂಚೀಕರಣ ದಿಂದ ಬ್ರಹ್ಮಾಂಡ ಉದಯವಾಗುವದು. ಈ ಬ್ರಹ್ಮಾಂಡದಲ್ಲಿ ಇಪ್ಪತ್ತುನಾಲ್ಕು ತತ್ವಗಳಿಂದ ಕೂಡಿದ ಶರೀರದಲ್ಲಿ ನಾನು ಮಾಯಾಧೀನನಾಗಿ ಸೇರಿರುವೆನಲ್ಲದೆ ಆ ಶರೀರವೇ ನಾನಲ್ಲ ಎಂಬ ಜ್ಞಾನವನ್ನು ಪಡೆದವನು ಪಿಂಡಜ್ಞಾನಿಯು.

| ಸಂಧಿ | ವಿಷಯ | ಪುಟ ೮೩-೯೯ |
|---|---|---|
| ೫ | ಸಂಸಾರ ಸಂಬಂಧ | ಪದ್ಯ-೬೩ |

ಮೂಲ ವಸ್ತುವಿನ ಜ್ಞಾನವೇ ಅರಿವು. ಆ ಜ್ಞಾನವಿಲ್ಲದಿರು ವದೇ ಮರವೆ. ಈ ಅರಿವು ಮರವೆಗಳಿದ್ದಲ್ಲಿ ವಾಸನೆ ಇರು ವದು. ವಾಸನೆ ಇದ್ದಲ್ಲಿ ಸಂಸಾರ ಸಂಬಂಧ ತಪ್ಪಲಾರದು. ಇದರಿಂದ ಜನನಮರಣಗಳು ಪ್ರಾಪ್ತವಾಗುತ್ತಲೇ ಇರುತ್ತವೆ.

ಮಾನವನು ಕೇವಲ ಇದು ಸದ್ವಸ್ತು, ಇದು ಅಸತ್ತು ಎಂದು ಎಷ್ಟು ಚನ್ನಾಗಿ ತಿಳಿದುಕೊಂಡರೂ ಸಾಲದು. ದೀಪದ ಬುಡದಲ್ಲಿ ಕತ್ತಲೆ ಇರುವಂತೆ ವಾಸನೆ ಇದ್ದೇ ಇರುತ್ತದೆ. ಜನ್ಮಜನ್ಮಾಂತರಗಳಿಂದ ಅಂಟಿಕೊಂಡಿರುವ ಸಂಚಿತ, ಆಗಾಮಿ, ಪ್ರಾರಬ್ಧ ಎಂಬ ಕರ್ಮತ್ರಯಗಳಲ್ಲಿ ಪ್ರಬಲವಾದ ಪ್ರಾರಬ್ಧವನ್ನು ನಾಶ ಮಾಡಿಕೊಳ್ಳದಿರುವ ಭೌತಿಕ ಜೀವನದಿಂದ ಪ್ರಯೋಜನವಿಲ್ಲ. ಮಾತಿನಲ್ಲಿ ಬ್ರಹ್ಮವನ್ನು ಸುರಿಸುತ್ತ ಮನದಲ್ಲಿ ತನುಕರಣ ಭೋಗದ ಉದ್ರೇಕವೃತ್ತಿಯಿದ್ದರೆ ಪ್ರಯೋಜನವೇನು ? ಒಳಗೂ ಹೊರಗೂ ಒಂದಾಗಿ ಮೂಲವಸ್ತುವಿನಲ್ಲಿ ಮನವು ಚಲಿಸದಂತೆ ನಿಂತರೆ ಪರಮಪದವಿ ಪ್ರಾಪ್ತವಾಗುತ್ತದೆ,

ಪವಿತ್ರವಾದ ಚರಿತ್ರದಿಂದ ಪರಿಶುದ್ಧವಾದ ತನುವಿನಲ್ಲಿ ಅರಿವು ಆಚಾರವು ಅಚ್ಚೊತ್ತಿದಂತೆ ಇರುವಾಗ ಮನವು ಎಲ್ಲಿ ತಿರಗಿದರೂ ಏನಾಗುವದು, ತೋಟಕ್ಕೆ ಬೇಲಿ ಹಚ್ಚುವರಲ್ಲದೆ ಪ್ರತಿಯೊಂದು ಗಿಡಕ್ಕೂ ಬೇಲಿ ಹಚ್ಚುವರೆ, ಶಿವನು ಅರ್ಧನಾರೀಶ್ವರ ನಾಗಿಲ್ಲವೇ ? ಅರ್ಧನಾರೀಶ್ವರನಾದ ಮಾತ್ರಕ್ಕೆ ಶಿವನಲ್ಲಿ ಕೊರತೆಯುಂಟೆ ಎಂಬ

ಸಂದೇಹ ಮುಂದೆ ಬರಬಹುದು. ಆದರೆ ಶಿವನು ಅರ್ಧನಾರೀಶ್ವರನಾಗಿದ್ದರೂ ಆ ಅರ್ಧತನುವಿನ ಪಾಲನ ಪೋಷಣಾದಿ ಕಾರ್ಯಭಾರವನ್ನು ಭವಾನಿಗೆ ಒಪ್ಪಿಸಿಲ್ಲ., ಕಾರಣ, ತನುವು ಎಷ್ಟು ಕಾಲವಿದ್ದರೂ ಪ್ರಯೋಜನವಿಲ್ಲ. ಮನವನ್ನು ಕಟ್ಟಿ ನೊಳಗಿಡದಿದ್ದರೆ ಸಂಸಾರದ ಸಂಬಂಧ ತಪ್ಪಲಾರದು. ಜನ್ಮಜನ್ಮಾಂತರದಲ್ಲಿ ಅನು ಭವಿಸಿದ ವಿಷಯ ಸುಖದ ಸವಿಗಳು ವಾಸನಾಬಲದಿಂದ ಬಂದು ಬಂದು ಮುತ್ತಿ ಮನವನ್ನು ಮೂಲವಸ್ತುವಿನ ಕಡೆಗೆ ಅಲೆಯದಂತೆ ಮಾಡಿಬಿಡುವವು. ಮನವೇ ಮಾನವನ ಬಂಧನಕ್ಕೂ ಮೋಕ್ಷಕ್ಕೂ ಸಾಧನವಾಗಿರುವದು. ವಾಸನಾ ಬಲದಿಂದ ವಿಷಯ ಭೋಗಕ್ಕೆಳಸಿದ ಮನವು ಬಂಧನಕಾರಿಯಾಗುವದು, ಮಲತ್ರಯ ನಾಶ ವಾಗುವದರಿಂದ ವಾಸನಾರಹಿತವಾಗಿ ನಿಜದಲ್ಲಿ ನಿಂದ ಮನವೇ ಮೋಕ್ಷಕ್ಕೆ ಸಾಧನ ವಾಗಿರುವದು. ಮನದಲ್ಲಿರುವ ವಿಷಯವಾಸನಾ ನಾಶವಾಗಬೇಕಾದರೆ ಪ್ರಬಲವಾದ ಸಂಸ್ಕಾರ ಬೇಕು. ಅಂಥ ಸಂಸ್ಕಾರವೆಂದರೆ ದೀಕ್ಷಾಸಂಸ್ಕಾರವು. ಈ ದೀಕ್ಷಾಸಂಸ್ಕಾರ ದಿಂದ ಮಲತ್ರಯ ರಹಿತನಾದರೆ ಪ್ರಾರಬ್ಧಾದಿಗಳು ನಾಶವಾಗುವವು. ಮನಸ್ಸಿನ ಚಂಚಲತೆ ಹೋಗಲು ಇಷ್ಟಲಿಂಗಬೇಕು. ಈ ಮಾತನ್ನು ಮುಂದೆ ಹೇಳುವವರಿದ್ದು ಈ ಸಂಧಿಯಲ್ಲಿ ಅದರ ಪೀಠಿಕೆಯನ್ನು ಹಾಕಿರುವರು.

| ಸಂಧಿ | ವಿಷಯ | ಪುಟ ೧೦೦-೧೧೭ |
|---|---|---|
| ೬ | ಸಂಸಾರವು ಹೇಯವಾದುದು | ಪದ್ಯ-೬೯ |

> ಅಂತರಂಗದಲ್ಲಿ ಶಿವಜ್ಞಾನ ಉಂಟಾಗಲು ಆ ಶಿವಜ್ಞಾನ ಪ್ರಕಾಶದ ಮಧ್ಯದಲ್ಲಿ ಸಚ್ಚಿದಾನಂದ ನಿತ್ಯ ಪರಿಪೂರ್ಣವಾದ ಕೇವಲ ಪರಶಿವ ತತ್ವವೇ ತನ್ನ ನಿಜವೆಂದರಿದು ಆ ಪರಮ ಜ್ಞಾನದ ಮುಂದೆ ಇದಿರಿಟ್ಟು ತೋರುವ ಮರವೆಯೆಂಬ ಮಾಯಾ ಪ್ರಪಂಚವನ್ನು ಅರುಹಿನ ಮುಖದಿಂದ ಅತ ಗಳೆವುದೇ ಸಂಸಾರ ಹೇಯುವು.

ಮನವೇ ಮಾನವನ ಬಂಧಮೋಕ್ಷಗಳಿಗೆ ಕಾರಣವಾಗಿರುವುದರಿಂದ ಆ ಮನವನ್ನು ಕುರಿತು ಬೋಧಿಸುವನು. ಎಲೈ ಮನಸ್ಸೇ ಮಾಯಾ ಜನ್ಯಗಳಾದ ನಾಮರೂಪುಳ್ಳ ವಿಷಯಗಳಲ್ಲಿ ಬಹಿರಿಂದ್ರಿಯ ಸುಖವೇ ನನ್ನ ಸುಖವೆಂದು ತಿಳಿದು ಅಧಿಕವಾದ ಮದದಿಂದ ವಿಷಯಾನಂದದಲ್ಲಿ ಮರೆದು ಮಲಗಬೇಡ, ಚಿತ್ತೆಂಬ ಅಂತಃಪುರದಲ್ಲಿ ಯಾವಾಗಲೂ ಸಚ್ಚಿದಾನಂದ ನಿತ್ಯಪರಿಪೂರ್ಣ ಲಕ್ಷಣವುಳ್ಳ ಮೂಲವಸ್ತುವಿನೊಡನೆ ಕೂಡಿದವನಾಗಿ ಅತ್ಯಂತ ಶ್ರೇಷ್ಠವಾದ ಆನಂದದಲ್ಲಿ ನಲಿದಾಡುತ್ತ ನಿತ್ಯ ಸುಖಿಯಾಗಿರು.

ತನುಗುಣಗಳನ್ನು ಕಳೆದುಕೊಳ್ಳದೆ ಅವುಗಳ ತೊಂದರೆಯಲ್ಲಿ ಸಿಕ್ಕುಪೇಚಾಡುವ

ಮಾನವನು ನಾನು ಬ್ರಹ್ಮವನ್ನು ಅರಿತಿರುವೆನೆಂದು ಕೋಟಿಗಟ್ಟಲೆ ಮಾತುಗಳನ್ನು ಹೇಳಿದರೆ ಆ ನುಡಿಗಳಿಂದ ಪ್ರಯೋಜನವೇನು ? ಭೋಗ ಮೋಕ್ಷಾಪೇಕ್ಷಿಯಾಗಿ ಯಜ್ಞ ಯಾಗಾದಿ ಶ್ರುತ್ಯಾಗಮೋಕ್ತ ಸತ್ಕರ್ಮಗಳನ್ನು ಮಾಡುತ್ತ ಇಹ ಪರೋಭಯ ಸುಖಾನುರಾಗದಿಂದ ಸಂಚರಿಸುತ್ತ ನಾನು ಬ್ರಹ್ಮವನ್ನು ಚನ್ನಾಗಿ ಅರಿತಿರುವೆನೆಂದು ಹೇಳಿದರೆ ವಿವೇಕಿಗಳು ಒಪ್ಪುವರೇ ?

ನಾಶವಾಗುವ ಸಂಸಾರದಲ್ಲಿ ಪಾಶರೂಪವಾದ ಮನೆಯೊಳಗೆ ಮನಸ್ಸಿನ ದುರಾಶೆಯಿಂದ ಕಟ್ಟಿಕೊಂಡಿರುವ ಹೆಂಡರು ಮಕ್ಕಳೆಂಬ ನಾಯಿಗಳು ಮಾನವನ ತನುವೆಂಬ ಮಾಂಸವನ್ನು ಹಸಿ ಹಸಿದು ಭೋಗಿಸುತ್ತಿರುವವು, ಈ ಭೋಗಾವೇಶದ ಸೌಖ್ಯವು ತನುಕರಣಗಳಲ್ಲಿ ಸಾಮರ್ಥ್ಯವಿರುವವರೆಗೆ ಇರುವದಲ್ಲದೆ ನಿತ್ಯವಾದುದಲ್ಲ. ಅನಿತ್ಯವಾದ ಸಂಸಾರಸುಖದ ಬೆನ್ನು ಹತ್ತಿ ನಿತ್ಯ ಸುಖವನ್ನು ಮರೆಯುವದು ಮಾನವನ ಧರ್ಮವಲ್ಲ.

ಕುರೂಪ, ದುರ್ಗಂಧ, ಕೆಟ್ಟ ರೋಗಗಳಿಗೆ ಆಶ್ರಯವಾದ ಸ್ಥೂಲ ತನುವಿನ, ಕಾಮ ಕ್ರೋಧಾದಿಗಳಿಗೆ ಆಶ್ರಯವಾದ ಸೂಕ್ಷ್ಮ ತನುವಿನ, ತಾಪತ್ರಯಗಳಿಗಾಶ್ರಯವಾದ ಕಾರಣ ತನುವಿನ ದುಃಖದಿಂದ ನಾನೇಕೆ ಸಂತಾಪ ಪಡಲಿ ತನುವಿಗೂ ನನಗೂ ಎನು ಸಂಬಂಧ ಎಂದು ಮಾತಿನಲ್ಲಿ ಬ್ರಹ್ಮವನ್ನು ಸುರಿಸುತ್ತ ನೀತಿಯಲ್ಲಿ ಅಧಮನಾಗಿರುವ ಎಲೇ ಬಾಯಿಬಡಕಾ ಹೋಗು ಹೋಗು ನೀನೆಂತಹ ತತ್ವಜ್ಞಾನಿ. ಹೊಲೆಯರ ಮನೆಯ ಬಾವುಗವು ದುರಾಶೆಯಿಂದ ಹಾಲು ತುಪ್ಪವನ್ನು ಬಯಸಿದಂತೆ ತನುವಿಕಾರಗಳನ್ನು ಕಳೆದುಕೊಳ್ಳದೆ ಅಂತಿಮ ಪದವನ್ನು ಇಚ್ಛಿಸಿದರೆ ಅದು ಹೇಗೆ ಸಾಧ್ಯವಾದೀತು. ತನುವಿಗೂ ನಿನಗೂ ಸಂಬಂಧವಿಲ್ಲವೆಂದು ಹೇಗೆ ಹೇಳುವಿ, ಪರಶಿವನಲ್ಲಿ ಸಾಮರಸ್ಯವನ್ನು ಹೊಂದುವ ವರೆಗೆ ತನುವಿಗೂ ಆತ್ಮನಿಗೂ ಸಂಬಂಧವಿದ್ದೇ ಇರುತ್ತದೆ. ತನುವಿಲ್ಲಿದಿದ್ದರೆ ಇಹಲೋಕದ ಭೋಗವನ್ನು ಪರಲೋಕದ ಸುಖವನ್ನು ಕೊನೆಗೆ ಸಾಯುಜ್ಯ. ಸಾಮರಸ್ಯಗಳನ್ನು ಹೊಂದುವದು ಹೇಗೆ ಸಾಧ್ಯವಾದೀತು. ದಿನದಿನಕ್ಕೆ ಒಂದೊಂದು ವಿಧವಾಗಿ ವೃದ್ಧಿಕ್ಷಯಗಳನ್ನು ಹೊಂದುವ ತನುವಿನ, ನಿಮಿಷ ನಿಮಿಷಕ್ಕೆ ಒಂದೊಂದು ಪರಿಯಾಗುವ ಸಂಕಲ್ಪ ವಿಕಲ್ಪಾತ್ಮಕವಾದ ಮನಸ್ಸಿನ ವಿಕಾರಗಳನ್ನು ಕಳೆದುಕೊಳ್ಳದೆ ಹಸಿವು ತೃಷೆಗಳುಂಟಾದಾಗ ಅನ್ನ ಪಾನಾದಿ ಆಹುತಿಯನ್ನು ಹಾಕುತ್ತಿರುವ ನಿನ್ನ ಕೈಯನ್ನು ಮೋಕ್ಷಾಂಗನೆಯು ಎಂದೂ ಹಿಡಿಯಲಾರಳು. ಒಣ ಅರಿವಿನಿಂದ ಏನು ಪ್ರಯೋಜನ ಆ ಅರಿವು ಕ್ರಿಯಾರೂಪದಲ್ಲಿ ಇಳಿದು ಬರಬೇಕು. ಅರಿವು ಕ್ರಿಯೆಗಳೆರಡು ಒಂದಾಗಬೇಕು. ಅಂಗ ಗುಣಗಳು ಲಿಂಗ ಗುಣಗಳಾಗಿ ಪರಿಣಮಿಸಬೇಕು. ಸಂಸಾರವು ಶಿವಮಯವಾದುದು ಭೋಗಿಸುವವನು ಶಿವನೇ ಶಿವನ ಪ್ರಸಾದ ರೂಪವಾದ ಸಂಸಾರದ ಭೋಗವೂ ಶಿವನದೇ ಎಂಬುವವನಿಗೆ ಸಂಸಾರವು ಉಪಾದೇಯವಾಗಿದೆ. ಸಂಸಾರವು ಮಿಥ್ಯವಾದುದೆಂದು ಭಾವಿಸಿ ನಾನು ನನ್ನದು ಎಂಬ ಅಭಿಮಾನದಿಂದ ಭೋಗಿಸುವವನಿಗೆ ಸಂಸಾರವು ಹೇಯವಾಗಿರುವದು.

ಸಂಧಿ ವಿಷಯ ಪುಟ ೧೧೭-೧೩೦
೭ ಲಿಂಗನಿಜಸ್ಥಾಪನ ಪದ್ಯ ೪೭

ಜ್ಞಾನದಿಂದ ಜನನ ಮರಣ ರೂಪವಾದ ಸಂಸಾರವು ನಾಶವಾಗುತ್ತದೆ ಎಂದು ಕೇವಲ ತಿಳಿದುಕೊಳ್ಳುವದರಿಂದ ಪ್ರಯೋಜನವಿರುವದಿಲ್ಲ. ಉತ್ತಮುಗಳಾದ ಸಾಧನಗಳಿಂದ ಪರವಸ್ತುವನ್ನು ಸಾಕ್ಷಾತ್ಕಾರ ಮಾಡಿಕೊಳ್ಳಬೇಕು. ಎಲ್ಲಿಯ ವರೆಗೆ ವಸ್ತು ಸಾಕ್ಷಾತ್ಕಾರವಾಗುವದಿಲ್ಲವೋ ಅಲ್ಲಿಯ ವರೆಗೆ ತನುವು ಇದ್ದೇ ಇರುತ್ತದೆ. ವಸ್ತು ಸಾಕ್ಷಾತ್ಕಾರದಲ್ಲಿ ಮುಖ್ಯವಾದ ಸಾಧನವೆಂದರೆ ಲಿಂಗ ಮುರ್ತಿಯು ಆದುದರಿಂದ ಲಿಂಗವು ಅವಶ್ಯವಾಗಿ ಬೇಕು. ಎಂಬುದೇ ಲಿಂಗ ನಿಜಸ್ಥಾಪನವು.

ಜ್ಞಾನ, ವೈರಾಗ್ಯ, ಉಪರತಿ ಇವುಗಳಲ್ಲಿ ಜ್ಞಾನವೊಂದೇ ಎಲ್ಲಕ್ಕೂ ಕಾರಣವಾಗಿದೆ. ಆನಂದದಾಯಕವಾದ ಈ ಜ್ಞಾನಜ್ಯೋತಿಯನ್ನು ಚಲನೆಗೆ ಅವಕಾಶ ಕೊಡದೆ ಅತ್ಯಂತ ಸಾವಧಾನದಿಂದ ನಿರೀಕ್ಷಿಸಲು ಮನವೆಂಬ ಕಮಲದಲ್ಲಿ ಪರವಸ್ತುವಿನ ಸಾಕ್ಷಾತ್ಕಾರ ವಾಗುವದು. ಈ ಅನುಸಂಧಾನವು ಸಿದ್ಧಿಸಬೇಕಾದರೆ ನವನಾಳದ ದ್ವಾರವನ್ನು ಒಳ್ಳೆ ಎಚ್ಚರಿಕೆಯಿಂದ ಬಂಧಿಸಬೇಕು, ಹೃದಯ ಕಮಲದಲ್ಲಿ ಲಿಂಗಮೂರ್ತಿ ಇರಬೇಕು. ಇವಿಲ್ಲದೆ ಸಾಧಿಸಿದರೆ ಸಿದ್ಧಿಸಲಾರದು ಮತ್ತು ಪ್ರಾಣವಾಯುವಿನ ಚಲನೆಯಿಂದ ನಾಶವಾಗುವ ಆ ಜ್ಞಾನದೀಪವು, ಬರಿದಾದ ಹಾಳ ಮನೆಯಲ್ಲಿಯ ದೀಪದಂತೆ ನಿಷ್ಪ್ರಯೋಜನ ವಾಗುವದು.

ಲಿಂಗದ ಅವಶ್ಯಕತೆಯ ಬಗ್ಗೆ ಗ್ರಂಥಕಾರನು ಕೆಲವು ಮಾತುಗಳನ್ನು ಕ್ಷೇತ್ರಜ್ಞ ಸುಮನಃ (ಗುರು ಶಿಷ್ಯರ) ಸಂವಾದ ರೂಪವಾಗಿ ತೋರಿಸಿರುವನು. ಹೇಗೆಂದರೆ,

ಶಿಷ್ಯ:– ಗುರುದೇವ ಸಚ್ಚಿದಾನಂದ ಸ್ವರೂಪವಾದ ಬ್ರಹ್ಮವನ್ನು ಸಮ್ಯಗ್ ಜ್ಞಾನದಿಂದ ತಿಳಿದುಕೊಂಡು, ಮಾಯಾ ರೂಪ ದೇಹ ಧರ್ಮವನ್ನು ಕಳೆದುಕೊಂಡು ಪರಿಪೂರ್ಣ ತೇಜೋರೂಪವಾದ ವಸ್ತುವನ್ನು ಚಿತ್ತಕಮಲದಲ್ಲಿರಿಸಿ ಧ್ಯಾನ ಮಾಡುತ್ತ ನಿತ್ಯ ಸುಖಿಯಾಗಿರುವ ನನಗೆ ಲಿಂಗದ ಅವಶ್ಯಕತೆ ಏಕೆ ?

ಗುರು:– ಶಿಷ್ಯನೇ ಪರಬ್ರಹ್ಮ ಸ್ವರೂಪವಾದ ಲಿಂಗವನ್ನು ಬಾಹ್ಯದಲ್ಲಿ ದೇಹದ ಮೇಲೆ ಧರಿಸದಿದ್ದರೆ ದೇಹಾಭಿಮಾನವು ಅಳಿಯುವದಿಲ್ಲ, ದೇಹ ಭಾವವು ಕೆಡದ ಹೊರತು ಜೀವ ಭಾವವು ನಾಶವಾಗುವದಿಲ್ಲ. ಇಂಥವನಿಗೆ ಮೋಕ್ಷವಿಲ್ಲ, ದೇಹ ಭಾವವನ್ನು ಕಳೆದುಕೊಳ್ಳುವದಕ್ಕಾಗಿ ಲಿಂಗವು ಅವಶ್ಯವಾಗಿ ಬೇಕು,

ಶಿಷ್ಯ:- ಗುರುದೇವಾ ದೇಹಭಾವವಾಗಲಿ, ಜೀವಭಾವವಾಗಲಿ, ಈ ದೇಹ ಜೀವರ ಸೂತಕಾದಿಗಳಾಗಲಿ ಮನಸ್ಸು ನಿರ್ಮಲ ವಾಗುವವರೆಗೆ ಇರುತ್ತವೆ. ಮನಸ್ಸು ನಿರ್ಮಲವಾದ ಕೂಡಲೇ ಇವೆಲ್ಲವು ಪಲಾಯನ ಮಾಡುವವು, ನಿರ್ಮಲ ಮನಸ್ಸಿಗೆ ಬ್ರಹ್ಮ ಸಾಕ್ಷಾತ್ಕಾರವಾಗುವದು.

ಗುರು:- ಶಿಷ್ಯೋತ್ತಮನೇ ಮನಸ್ಸು ನಿರ್ಮಲ ವಾಗಿದೆ ಎಂದು ಬರಿ ಮಾತು ಹೇಳಿದರೆ ಅದು ನಿರ್ಮಲವಾಗಬಲ್ಲದೇ ? ವೈರಿಗಳನ್ನು ಕತ್ತರಿಸಿ ಬಿಡುವೆನೆಂದು ಹೇಳಿದ ಮಾತಿನಿಂದಲೇ ಶತ್ರುಗಳ ಶಿರಸ್ಸು ಹಾರಿ ಹೋಗುತ್ತಿದ್ದರೆ ಶೂರರು ಶಸ್ತ್ರಗಳನ್ನೇ ಹಿಡಿಯುತ್ತಿರಲಿಲ್ಲ. ಜ್ಞಾನ ಕರ್ಮೇಂದ್ರಿಯಗಳಲ್ಲಿ ಪ್ರಾಣವಾಯುವಿನ ಸಂಗದಿಂದ ಸಂಚರಿಸುತ್ತಿರುವ ಮಲಿನವಾದ ಮನಸ್ಸು ನಿರ್ಮಲವಾಗುವ ಬಗೆ ಹೇಗೆ ? ಇಂತಹ ಮಲಿನವಾದ ಮನಸ್ಸಿನಲ್ಲಿ ಪರಶಿವನು ನೆಲೆಸುವದಾದರೂ ಹೇಗೆ ಸಾಧ್ಯ.

ಶಿಷ್ಯ:- ಗುರುವರೇಣ್ಯಾ ಅರಿವು ಮರವೆಗಳಿಗೆ ಆಸ್ಪದವಾದ ಮನದ ಮಾಲಿನ್ಯ ವನ್ನು ಶಾಂತಿ ಜಲದಿಂದ ತೊಳೆದು, ಅರಿವಿನ ಬಲದಿಂದ ನಡೆಯುವ ಯೋಗವೆಂಬ ಯಂತ್ರದಿಂದ ಜಡವಾದ ತನುವನ್ನು ಹಿಂಡಿ ಹಿಪ್ಪೆಮಾಡಿ ಚಿದ್ರಸವನ್ನಾಸ್ವಾದಿಸು ವೆನಲ್ಲಾ ಮನದಲ್ಲಿ ಮಾಲಿನ್ಯವೆಲ್ಲಿರುವದು.

ಗುರು:- ಶಿಷ್ಯನೇ ಮನವನ್ನು ನಿರ್ಮಲ ಮಾಡಿಕೊಂಡು ಪರಶಿವನೊಡನೆ ಬೆರಸುವೆನೆಂದು ಹೇಳುವ ಯೋಗಿಗಳು ಯಾರಿರುವರು ? ಮನವನ್ನು ತಡೆಯುವೆ ವೆಂಬುವವರನ್ನು ನಾನಾತರದ ಕಷ್ಟಕ್ಕೊಳಗೆ ಮಾಡುವದು ಮನವು, ಪರವಸ್ತುವನ್ನು ಅರಿತದ್ದು ನಿಜವಾದರೆ ಮನವೇ ಇಲ್ಲದಂತೆ ಇರಬೇಕಾಗುತ್ತದೆ. ಇದಲ್ಲದೆ ವಾಙ್ಮನೋ ತೀತವಾದ ವಸ್ತುವು ವಿಚಾರಕ್ಕೆ ಸಿಲ್ಕುವದೇ ? ಅರಿದಿರುವೆವೆಂಬುವವರನ್ನು ವಿಚಾರದ ಗೊಂದಲಕ್ಕೆ ತೊಡರಿಸಿ ತಾನು ಬೇರೇ ಉಳಿಯುವದು. ಮತ್ತು ದೇಹದ ನವನಾಳಗಳ ಸುಳುವನ್ನರಿದು, ಐವತ್ತೆರಡಕ್ಷರಗಳ ಸಕೀಲವನ್ನು ತಿಳಿದು, ಪದ್ಮಾಸನವನ್ನು ಹಾಕಿ ಸುಷುಮ್ನಾ ಮಾರ್ಗವಾಗಿ ನಡೆದು, ಬ್ರಹ್ಮರಂಧ್ರ ಸ್ಥಿತವಾದ ಅಮೃತವನ್ನು ಸೇವಿಸುವೆ ವೆಂಬುವವರನ್ನು ದಂಗುಬಡಿಸುವ ಶಿವಯೋಗವುಂಟು, ಈ ಶಿವಯೋಗವು ಅತ್ಯ ತಿಷ್ಠದ್ದ ಶಾಂಗುಲಂ ಎಂಬ ಶ್ರುತಿಯಂತೆ ಲಯ, ಹಠ, ಮಂತ್ರ, ರಾಜ ಎಂಬ ನಾಲ್ಕು ಯೋಗ ಗಳಿಗಿಂತಲೂ ಮಿಗಿಲಾದುದಿರುವದು. ನಾಲ್ಕು ಯೋಗಗಳಿಂದ ಅಷ್ಟ ಸಿದ್ಧಿಗಳು ದೊರೆಯಬಹುದು, ವಸ್ತು ಸಾಕ್ಷಾತ್ಕಾರವೂ ಆಗಬಹುದು. ಆದರೆ ಆ ಪರವಸ್ತುವಿನಲ್ಲಿ ಸಮರಸ ವಾಗುವದು ಸಾಧ್ಯವಿಲ್ಲ, ಹಾಗು ಷಟ್ಚಕ್ರಗಳ ಮೇಲಿಲ್ಲದ ಆ ಪರವಸ್ತು ವನ್ನು ಬ್ರಹ್ಮರಂಧ್ರದಲ್ಲಿ ಕಂಡೆನೆಂದು ಹೇಳುವದಾದರೂ ಹೇಗೆ ಸಾಧ್ಯವಾದೀತು. ಬುದ್ಧಿಶಕ್ತಿಯನ್ನು ಮೀರಿದ ಶಿವನನ್ನು ಬುದ್ಧಿಯ ಬಲದಿಂದ ಕಾಣಲು ಸಾಧ್ಯವಾಗಲಾರದು.

ಶಿಷ್ಯ:- ಗುರುಪುಂಗವ ತನು ಮನ ಪ್ರಾಣ ಇಂದ್ರಿಯಾದಿಗಳ ಕಳವಳವಿರ ಹಿತನಾದ ದೇಹದ ಮಧ್ಯದಲ್ಲಿರುವ ಹೃದಯಾಕಾಶದಲ್ಲಿ ಜ್ಯೋತಿರ್ಮಯವಾದ, ಆತ್ಮ ಲಿಂಗವು ನೆಲೆಸಿದ್ದು ಅದು ಒಳಗೂ ಹೊರಗೂ ಕಲೆಗಳಲ್ಲಿಯೂ ಎಲ್ಲಾ ಕಡೆಯಲ್ಲಿಯೂ ತುಂಬಿಕೊಂಡಿರುವದು, ಅದನ್ನು ಬದಿಗಿರಿಸಿ ಮಿಥ್ಯವಾದ ದೇಹದ ಮೇಲೆ ನಷ್ಟವಾಗುವ ಇಷ್ಟಲಿಂಗವನ್ನು ಧರಿಸಿದರೆ ಆ ಪರವಸ್ತುವು ಹೇಗೆ ದೃಷ್ಟವಾಗುವದು ಹೇಳು.

ಗುರು:- ಶಿಷ್ಯನೆ ಬಿಂಬ ಪ್ರತಿಬಿಂಬ ಭಾವದ ಅನುಭವವನ್ನು ಚನ್ನಾಗಿ ಮಾಡಿಕೊ ದರ್ಪಣದಲ್ಲಿ ಪ್ರತಿಬಿಂಬ ಬೀಳಬೇಕಾದರೆ ಹೊರಗೆ ಬಿಂಬವಿರಬೇಕಾಗುತ್ತದೆ. ಬಿಂಬವಿಲ್ಲದೆ ಪ್ರತಿಬಿಂಬ ತೋರಲಾರದು. ಇದರಂತೆ ಹೊರಗೆ ಇಷ್ಟಲಿಂಗವಿದ್ದರೇನೆ ಅದರ ಪ್ರಭೆಯು ಹೃದಯ ಕಮಲದಲ್ಲಿ ಪ್ರತಿಫಲಿಸಿ ಪ್ರಾಣಲಿಂಗವಾಗಿ ತೋರುವದು. ಗುರುವಿನಿಂದ ವಿಧಾನಪೂರ್ವಕ ಪಡೆದುಕೊಂಡ ಗುರೂ ಪದಿಷ್ಟ ಆಚಾರ ವಿಚಾರ ಯುಕ್ತವಾದ ಇಷ್ಟಲಿಂಗವಿಲ್ಲದ ಎಂಥಾ ಜ್ಞಾನಿಗಳಿಗೂ ಒಳಗಿರುವ ಮಹಾಲಿಂಗವು ಗೋಚರವಾಗಲಾರದು. ಗುರುವಿನಿಂದ ಪ್ರಾಪ್ತವಾದ ಇಷ್ಟಲಿಂಗದ ಅರ್ಚನೆ ಅರ್ಪಣ ಅನುಭವಗಳಲ್ಲಿ ಆಸಕ್ತರಾದವರಿಗೆ ಮಾತ್ರ ಪ್ರಾಣಲಿಂಗವು ಗೋಚರವಾಗುವದು. ಅಪರಿಪಕ್ವಮತಿಯಾದ ಎಲೊ ಶಿಷ್ಯನೆ ಒಳಗಿರುವ ಆತ್ಮನೇ ಲಿಂಗವೆಂದು ಹೇಳುವಿ ಯಲ್ಲಾ ಚನ್ನಾಗಿ ವಿಚಾರ ಮಾಡು ಕಾಮಕ್ರೋಧಾದಿ ಅರಿಷಡ್ವರ್ಗದಿಂದಲೂ, ಹಸಿವು ತೃಷೆ ಮೊದಲಾದ ಷಡೂರ್ಮಿಗಳಿಂದಲೂ ಉತ್ಪತ್ಯಾದಿ ಷಡ್ಭಾವ ವಿಕಾರಗಳಿಂದಲೂ, ಗರ್ಭಜನ್ಮಾದಿ ಸಪ್ತಾವಸ್ಥೆಗಳಿಂದಲೂ ಆವರಿಸಲ್ಪಟ್ಟ ಕಿಂಚಿಜ್ಜ್ಞತ್ವ, ಕಿಂಚಿತ್ ಕರ್ತೃತ್ವ, ಅಸ್ವತಂತ್ರತ್ವಾದಿ ಗುಣಗಳಿಂದ ಕೂಡಿದ, ಕ್ರೂರವಾದ ಮಲತ್ರಯ ವಿಶಿಷ್ಟ ಶರೀರಾಂತಃಕರಣಗಳೊಡನೆ ಸಂಚರಿಪ ಆತ್ಮನನ್ನು ಲಿಂಗವೆಂದು ಒಮ್ಮಿಗೆ ಹೇಳಲಿಕ್ಕಾಗು ವದಿಲ್ಲ ಮೇಲೆ ಹೇಳಿದ ಪ್ರಕಾರ ಮಲಿನನಾದ ಆತ್ಮನು ಬಹುಜನ್ಮಾರ್ಜಿತ ಪುಣ್ಯ ವಿಶೇಷದಿಂದ ಅಂಗನಾದಾಗ ಆ ಅಂಗನನ್ನು ಲಿಂಗವನ್ನಾಗಿ ಮಾಡುವದಕ್ಕಾಗಿಯೇ ತನುವಿನ ಮೇಲೆ ಇಷ್ಟಲಿಂಗವು ಅವಶ್ಯವಾಗಿ ಬೇಕಾಗಿದೆ.

ಶಿಷ್ಯ:- ಗುರುವರ ಸಿಡಿಲೊಡನೆ ಯುದ್ಧ ಮಾಡುವ ಸಮರ್ಥನಿಗೆ ಕೊಡೆಯ ಮರೆಯು ಬೇಕೆ ? ಗುಡ್ಡವನ್ನೇ ಹೊರುವವನಿಗೆ ಸಿಂಬಿಯು ಸಹಾಯವಾಗುವದೆ ? ಹಸಿವು ತೃಷೆ ಮೊದಲಾದ ಶರೀರ ಧರ್ಮವನ್ನು ಜಯಿಸಿದವನು ಜೀವಿಸುವದಕ್ಕಾಗಿ ಹೆದರುವನೆ ? ಯಥಾರ್ಥ ಜ್ಞಾನದಿಂದ ಬ್ರಹ್ಮವೇ ಆದ ನನಗೆ ಲಿಂಗದ ಹಂಗೇಕೆ ?

ಗುರು:- ಪ್ರಕ್ಷಿಪ್ತ ಮತಿಯಾದ ಎಲೊ ಶಿಷ್ಯನೇ ಸಾವಧಾನದಿಂದ ಅರಿತು ಕೊಳ್ಳುವವನಾಗು, ಮಹಾಫಲವನ್ನು ಕೊಡುವಂತಹ ಒಂದು ಮಂತ್ರವಿದ್ದು ಅದನ್ನು ಒಬ್ಬನು ಚೆನ್ನಾಗಿ ತಿಳಿದುಕೊಂಡಿರುವನೆಂದು ಭಾವಿಸು. ಆ ಮಂತ್ರವು ತಿಳಿದುಕೊಂಡ ಮಾತ್ರಕ್ಕೆ ಸಿದ್ಧಿಸುವದಿಲ್ಲ ಪುನಶ್ಚರಣ ಮಾಡಿದರೆ ಮಾತ್ರ ಸಿದ್ಧಿಸುವದು, ಒಬ್ಬನು

ಬಹುಕಾಲದ ವರೆಗೆ ವೈದ್ಯಶಾಸ್ತ್ರವನ್ನು ಅಭ್ಯಾಸ ಮಾಡಿ ಅದರಲ್ಲಿ ಮಹಾಜ್ಞಾನಿಯಾಗಿರುವನೆಂದು ಭಾವಿಸು, ಶರೀರಕ್ಕೆ ರೋಗವು ಅಂಟಿಕೊಂಡಾಗ ಮಾತ್ರ ಆ ವೈದ್ಯನ ಜ್ಞಾನವು ಸಫಲವಾಗಬಹುದು. ಶರೀರಕ್ಕೆ ರೋಗವೇ ಬರದಿದ್ದಾಗ ಆ ಜ್ಞಾನದಿಂದ ಏನು ಪ್ರಯೋಜನ. ಇದರಂತೆ ನೀನು ಬ್ರಹ್ಮವನ್ನು ಚನ್ನಾಗಿ ತಿಳಿದುಕೊಂಡಿರಬಹುದು. ಇಷ್ಟಲಿಂಗವಿಲ್ಲದ ಆ ಕೇವಲ ಜ್ಞಾನದಿಂದ ಏನು ಪ್ರಯೋಜನ. ಮತ್ತು ಮಧುರವಾದ ಹಣ್ಣಿನ ರಸವನ್ನು ಇಚ್ಛಿಸುವವನಿಗೆ ಹಣ್ಣು ಅವಶ್ಯವಾಗಿ ಬೇಕು. ಹಣ್ಣಿಲ್ಲದೆ ಹಣ್ಣಿನ ರಸವನ್ನು ಆಸ್ವಾದಿಸಲಿಕ್ಕಾಗುವದಿಲ್ಲ. ಇದರಂತೆ ಗುರು ಕರುಣದಿಂದ ಲಬ್ಧವಾದ ಇಷ್ಟಲಿಂಗದ್ವಾರಾ ಪ್ರಾಣಲಿಂಗದ ನಿಲವನರಿಯಲು ಸಾಧ್ಯ, ಇಷ್ಟಲಿಂಗವಿಲ್ಲದೆ ಸಾಧ್ಯವಿಲ್ಲ. ಒಂದು ದೊಡ್ಡ ಮರದ ಬುಡದಲ್ಲಿ ಹಬ್ಬಿದ ಬಳ್ಳಿಯು ಆ ಮರದ ಶಾಖೋಪ ಶಾಖೆಗಳಲ್ಲಿ ಬುಡದಿಂದ ತುದಿಯ ವರೆಗೆ ಬಿಟ್ಟುಬಿಡದೆ ವ್ಯಾಪಿಸಿರುವಂತೆ ಸ್ಥೂಲ ತನುವಿನ ಮೇಲೆ ಧಂಸಿದ ಈ ಇಷ್ಟಲಿಂಗವೇ ಸೂಕ್ಷ್ಮ ಶರೀರದಲ್ಲಿ ಪ್ರಾಣಲಿಂಗವಾಗಿಯೂ, ಕಾರಣತನುವಿನಲ್ಲಿ ಭಾವಲಿಂಗವಾಗಿಯೂ, ಘ್ರಾಣೇಂದ್ರಿಯದಲ್ಲಿ ಆಚಾರಲಿಂಗವಾಗಿಯೂ, ಜಿಹ್ವೇಂದ್ರಿಯದಲ್ಲಿ ಗುರುಲಿಂಗವಾಗಿಯೂ, ನೇತ್ರೇಂದ್ರಿಯದಲ್ಲಿ ಶಿವಲಿಂಗವಾಗಿಯೂ, ತ್ವಗಿಂದ್ರಿಯದಲ್ಲಿ ಜಂಗಮಲಿಂಗವಾಗಿಯೂ, ಶ್ರೋತ್ರೇಂದ್ರಿಯದಲ್ಲಿ ಪ್ರಸಾದಲಿಂಗವಾಗಿಯೂ, ಮನದಲ್ಲಿ ಮಹಾಲಿಂಗವಾಗಿಯೂ ವಿರಾಜಿಸುತ್ತಿರುವದು. ಆದುದರಿಂದ ಇಷ್ಟಲಿಂಗವು ಅವಶ್ಯವಾಗಿ ಬೇಕು.

| ಸಂಧಿ | ವಿಷಯ | ಪುಟ ೧೩೧-೧೪೪ |
|---|---|---|
| ೮ | ಗುರುಕಾರುಣ್ಯ | ಪದ್ಯ-೫೧ |

**ಕೃಪಾಸಮುದ್ರನಾದ ಶ್ರೀ ಗುರುವು ಶಿಷ್ಯನ ಮಾಯಾಮಯವಾದ ಸಂಸಾರದ ಸಂಬಂಧವನ್ನು ತಪ್ಪಿಸಿ, ಲಿಂಗಾನುಭವವನ್ನು ಹೇಳಿ ರಕ್ಷಿಸುವನು.**

ಶಿವಶಿವ:—"ನಾಭುಕ್ತಂ ಕ್ಷೀಯತೇ ಕರ್ಮ ಕಲ್ಪಕೋಟಿಶತೈರಪಿ" ಎಂಬ ಹಣೆಯ ಬರಹವನ್ನು ಹೊಡೆದು ಹಾಕಿ ನಿರಾಕಾರವಾದ ಪರವಸ್ತುವನ್ನು ಸಾಕಾರವಾಗಿ ಎನ್ನಕರದಲ್ಲಿರಿಸಿ ಅದರಲ್ಲಿ ನನ್ನ ಪ್ರಾಣ ಮನ ಕರಣಗಳನ್ನು ಲೀನವಾಗುವಂತೆ ಮಾಡುವ ಕರುಣಾಸಾಗರನಾದ ಗುರುವು ಎಂದು ದೊರೆಯುವನೋ, ಸಂಸಾರವೆಂಬ ರೋಗದಿಂದ ನೊಂದು ಸಂತಾಪಾಗ್ನಿಯಲ್ಲಿ ಬೆಂದು ನಿಂತಿರುವ ನನಗೆ ಗುರುವು ಕರುಣಾಮೃತವನ್ನು ಎಂದು ಎರೆಯುವನೋ?

ಅಹೋ ಪುಣ್ಯವಿರುವ ಕಾಲದಲ್ಲಿ ಮಣ್ಣೇ ಹಿರಣ್ಯವಾಗುವಂತೆ ನನ್ನ ಪುಣ್ಯ ವಿಶೇಷದಿಂದ ಅಪ್ರತ್ಯಕ್ಷನಾದ ಪರಮಾತ್ಮನು ಗುರುರೂಪದಿಂದ ಪ್ರತ್ಯಕ್ಷನಾಗಿ ತನ್ನ

ಪಂಚಮುಖ, ದಶಭುಜ, ತ್ರಿನೇತ್ರ, ಉಗ್ರರೂಪಗಳನ್ನು ಬಿಟ್ಟು ಎರಡೆರಡುಪಾದ, ಹಸ್ತನೇತ್ರಗಳಿಂದಲೂ, ಕ್ರೂರನಾದ ಕಾಮದಹನ ಭಸ್ಮಭೂಷಿತ ತನುವಿನಿಂದಲೂ, ಶಾಂತವಾದ ರೂಪದಿಂದಲೂ ಬಂದು ನಿಂತಿರುವನು. ಬಯಸಿದಂಥ ಬಳ್ಳಿಯು ತಾನಾಗಿ ಕಾಲಿಗೆ ತೊಡಕು ಬಿದ್ದ ಹಾಗೆ ಆಗಿದೆ. ಇದು ನನ್ನ ಭಾಗ್ಯವಿಶೇಷವು. ಸಕಲ ನಿಃಕಲ ಉಭಯ ರೂಪನಾದ ಗುರುಮೂರ್ತಿಯ ದರ್ಶನದಿಂದ ನನಗೆ ನಿತ್ಯ ತೃಪ್ತಿಯೇ ಪ್ರಾಪ್ತವಾದಂತಾಗಿದೆ, ಈ ಮಹಾಲಿಂಗರೂಪನಾದ ಗುರುವರೇಣ್ಯನ ಬೆರಸಿ ನೋಡುವೆನು.

ಭಗವನ್—ಗುರುಪುಂಗವ ತಮ್ಮ ಪಾದದ ನಿಜವನ್ನರಿಯದೇ ದೇಹವೇ ನಾನೆಂಬ ಹಮ್ಮಿನಿಂದ ಭವಭವಗಳಲ್ಲಿ ಬಂದು ತೊಳಲಿ ಬಳಲಿ ಬೆಂದು ಬೆಂಡಾಗಿ ನಿಂತಿರುವ, ನಿರಂಕುಶವಾದಭವರೋಗಿಯಾದ ನಾನು ತಮ್ಮ ಪಾದಕ್ಕೆ ಶರಣು ಬಂದಿರುವೆನು. ತಮ್ಮ ನಿಜಸ್ವರೂಪವನ್ನು ತಿಳುಹಿಸಿಕೊಟ್ಟು, ಶರೀರಭಾರವನ್ನು ಇಳುಹಿಸಿ ನಿತ್ಯ ಸುಖದಲ್ಲಿರುವಂತೆ ಮಾಡಯ್ಯ ತಂದೆ.

ಗುರು :—ಆದಿಯಲ್ಲಿ ಗುರುಪಿಂಡವಾದವನಿಗೆ ಅನಾದಿಯನ್ನು ಹೇಳಲಾದೀತೇ. ಕಾಯವು ಆದಿಯು ಜೀವವು ಅನಾದಿಯು ಈ ಕಾಯ ಜೀವರ ಯೋಗವನ್ನು ಬೇರೆ ಬೇರೆಯಾಗಿ ತಿಳಿಯಲು, ಮೊದಲಿಗೆ ಸೋಹಂ ಎಂಬುದೇ ಯೋಗ್ಯವು. ಎರಡನೆ ಯವರು ಹೇಳಿದ್ದನ್ನು ಕೇಳಿ ಬ್ರಹ್ಮವನ್ನು ಕಂಡುಕೊಳ್ಳುವೆನೆಂದರೆ ಸಾಧ್ಯವಿಲ್ಲ.

ಶಿಷ್ಯ :—ಗುರುದೇವ, ತಮ್ಮ ಪಾದದ ಪ್ರಭಾವವನ್ನರಿತ ನಾನು ಯಾರೆಂದು ಕೃಪಾದೃಷ್ಟಿಯಿಂದ ನೋಡು. ಬ್ರಹ್ಮವೊಂದೇ ಸತ್ಯವಾದುದು ಜಗತ್ತು ಮಿಥ್ಯ ವಾದುದು, ಜೀವವು ಬ್ರಹ್ಮವೇ ಬೇರೆಯಲ್ಲ ಎಂದು ಅರಿವಾಯಿತು. ಕೇವಲ ಈ ಅರಿವಿನಿಂದ ಫಲವೇನು, ನಾನು ಅರಿತ ಅರಿವಿನ ಬೆಳಕನ್ನು ಕಾಣುವದು ಹೇಗೆ, ಕಂಡುದನ್ನು ದೇಹದಲ್ಲಿಟ್ಟು ಧ್ಯಾನಮಾಡುವ ರೀತಿ ಯಾವದು, ಇದೆಲ್ಲವನ್ನು ಕೃಪೆಯಿಂದ ನನ್ನ ಮನಸ್ಸನ್ನು ಕರೆದು ತಿಳುಹಿಸಿ ಕೊಡಲು ತಮಗೆ ಅಸಾಧ್ಯವೇ ದೇವಾ ಹೀಗೇಕೆ ಅಪ್ಪಣೆ ಮಾಡುವಿರಿ. ಆ ಪರವಸ್ತುವು ವಿಶ್ವದೊಳು ಪರಿಪೂರ್ಣ ವಾಗಿರುವದರಿಂದ ವಿಶ್ವವು ಅದಕ್ಕೆ ಆಲಯವಾಗಿದೆ. ಆದುದರಿಂದ ವಿಶ್ವಮಯ ನೆಂದು ಭಾವಿಸಿ ದೇಹವೇ ಪೀಠ, ಜೀವವೇ ಲಿಂಗವೆಂದರಿದು ವಿಶ್ವಭಾವನೆಯಲ್ಲಿರುವೆನು. ನನಗೆ ಸ್ವಾತಂತ್ರ್ಯವಿರುವದಿಲ್ಲ.

ಗುರು :—ಅರೆಮರುಳನಾದ ಭಕ್ತಿಹೀನನೇ, ಕೇಳು, ಪರಶಿವನು ಪರಿಪೂರ್ಣ ನಾಗಿರುವದರಿಂದ ಅಣುರೇಣು ತೃಣಕಾಷ್ಠಗಳಲ್ಲಿ ತುಂಬಿಕೊಂಡಿರುವನೆಂಬುದು ಸಹಜ. ಆದರೆ ಅವುಗಳಲ್ಲಿ ಅವ್ಯಕ್ತ ರೂಪದಿಂದಿರುವನು. ಭಕ್ತದೇಹಿಕದೇವ

ನಾಗಿರುವುದರಿಂದ ಭಕ್ತರಲ್ಲಿ ವ್ಯಕ್ತರೂಪದಿಂದಿರುವನು. ವಿಶ್ವವ್ಯಾಪಿಯಾಗಿರುವನೆಂದು ಕೂತರೆ ದೇಹದಲ್ಲರಿಯಲು ಹೇಗೆ ಸಾಧ್ಯವಾದೀತು. ಬೇರೆ ಕಡೆಗೆ ಕಾಣುವೆನೆಂದರೆ ಅರಿವಿಗೆ ಮೀರಿರುವನು. ಕೋಟಿಗಟ್ಟಲೆ ವೇದಾಂತ ( ಉಪನಿಷತ್ ) ವಾಕ್ಯಗಳು ಉರುಳಿ ಹೋಗಿರುವವು ಅರಿಯುವದಾಗಿಲ್ಲ ತೋರಿಸಿಕೊಡಲಿಕ್ಕೆ ಧನುರ್ವೇದದ ಶಸ್ತ್ರ ಸಂಧಾನದಂತಲ್ಲ. ಶಾಸ್ತ್ರಗಳ ಮಥನದಿಂದಲೂ ತಿಳಿಯಲು ಸಾಧ್ಯವಿಲ್ಲ. ಕಾಯ ವಾಕ್ ಮನಸ್ಸುಗಳೆಂಬ ತ್ರಿಕರಣಗಳ ವಾ. ಸ್ಥೂಲ ಸೂಕ್ಷ್ಮ ಕಾರಣ ತನುಗಳ ನೆಲೆ ಕಲೆಗಳನ್ನು ತಿಳುಹಿಸದಿರುವ ಶಾಸ್ತ್ರದಿಂದ ಫಲವೇನು ? ಅರಿದೆನೆಂದರೆ ಅರಿವಿಗೆ ದೂರ, ಮರೆದೆನೆಂದೊಡೆ ಮನಕ್ಕೆ ದೂರ, ಅರಿದು ಮರೆದಿರುವೆನೆಂದರೆ ಉಪಮೆಗೆ ದೂರವಾಗಿರುವದು. ಹೀಗೆ ನಿರ್ಭಾವದೊಳು ಭಾವದ ಬರಿಯ ಸಂಕಲ್ಪಗಳೇ ಕೆಡದಿದ್ದರೆ ಮನವು ಪರವಸ್ತುವಿನಲ್ಲಿ ಹೇಗೆ ಮಗ್ನವಾದೀತು. ಲಿಂಗವನರಿದ ಶರಣನಿಗೆ ಮನವು ತೋರುವದೂ ಇಲ್ಲ ಅಡಗುವದೂ ಇಲ್ಲ. ಮತ್ತು ಚನ್ನಾಗಿ ಅರಿತಿರುವೆನು ಎಂದು ಹೇಳುವಲ್ಲಿಯೇ ಮರೆಯನ್ನು ತಂದೊಡ್ಡಿ ಆ ಪರಶಿವನು ಕಾಣದಂತಾಗುವನು. ಮರೆಯದಿರು ನೀನೇ ಪರಬ್ರಹ್ಮ ಸ್ವರೂಪನಿರುವಿ.

ಶಿಷ್ಯ :—ಶಿವಶಿವಾ ಎಂಥ ಮಾತನ್ನು ಹೇಳಿದಿ ಗುರುದೇವ. ನಾನೇ ಸ್ವತಂತ್ರ ಪರಿಪೂರ್ಣ ಬ್ರಹ್ಮಸ್ವರೂಪನಾಗಿದ್ದರೆ ತಮ್ಮ ಅವಿರಳ ಚರಣ ಕಮಲ ಸೌರಭಕ್ಕೆ ಭ್ರಮರನಂತೆರಗಿ ಶರಣು ಬರುತ್ತಿದ್ದೆನೇ. ಕಾಡಬೇಡ, ನನ್ನನ್ನು ರಕ್ಷಿಸು ದೇವಾ, ಪಾಪಿಯಾದ ನಾನು ದೊಡ್ಡ ಪಾಪವನ್ನು ಮಾಡಿರುವೆನು, ಆ ಪಾಪವೇ ತನುವಾಗಿ ರೂಪುಗೊಂಡಿದೆ, ಸಂಸಾರ ತಾಪದಿಂದ ಬೆಂದ ಈ ತನುವು ಲೋಪವಾಗುವವರೆಗೂ, ಯಜ್ಞದಲ್ಲಿ ಆಹುತಿಗಾಗಿ ತಂದ ಆಡು ಅಲ್ಪಾವಧಿಯಲ್ಲಿ ಸಂಭವಿಸುವ ತನ್ನ ನಾಶವನ್ನು ಅರಿಯದೆ ಯಜಮಾನನು ಕಟ್ಟಿಸಿದ ತೋರಣದ ಎಲೆಗಳನ್ನು ತಿನ್ನಲು ಆತುರ ಪಡುವಂತೆ, ಶರೀರಾದಿಗಳ ಅನಿತ್ಯತ್ವವನ್ನು ಲಕ್ಷಿಸದೆ ವನಿತಾದಿ ವಿಷಯೋಪಭೋಗ ಮಾಡುತ್ತಿರುವ ದುರ್ಗುಣಿಯಾದ ನನ್ನನ್ನು ರಕ್ಷಿಸು ರಕ್ಷಿಸು ಗುರುದೇವಾ ....

ಗುರು :–ಮುಮುಕ್ಷುವಾದ ಶಿಷ್ಯನೇ ತಾತ್ವಿಕ ಶಾಸ್ತ್ರದಲ್ಲಿ ನಾಹಂ, ಕೋಽಹಂ ಸೋಽಹಂ, ದಾಸೋಽಹಂ ಎಂಬ ನಾಲ್ಕು ವಾಕ್ಯಗಳಿರುವವು. ಆತ್ಮಭಿನ್ನವಾದ ಶರೀರಾದಿ ಸಮಸ್ತವು ನಾನಲ್ಲ ಎಂಬ ಅರ್ಥವುಳ್ಳದ್ದು ನಾಹಂ ಭಾವವು ನಾನು ಯಾರು ಎಂಬ ಪ್ರಶ್ನಾರ್ಥಕವಾದುದು ಕೋಽಹಂ ಭಾವವು, ಸರ್ವಸಾಕ್ಷಿಯಾದ ಆತ್ಮನೇ ನಾನು ಎಂಬ ಅರ್ಥವುಳ್ಳದ್ದು ಸೋಽಹಂ ಭಾವವು, ಆತ್ಮನಾದ ಶಿವನಿಗೆ ನಾನು ಸೇವಕನು ಎಂಬ ಅರ್ಥವುಳ್ಳದ್ದು ದಾಸೋಽಹಂ ಭಾವವು. ಶಾಂಕರ ಮತದಂತೆ ಮಾನವನು ಮೊದಲಿಗೆ ದೇಹವೇ ನಾನು ಎಂದು ತಿಳಿದುಕೊಂಡಿರುತ್ತಾನೆ. ಅವನು ಮುಮುಕ್ಷುವಾಗಿ ಸಾಧನ ಚತುಷ್ಟಯ ಸಂಪನ್ನನಾದಾಗ ಆ ತಿಳುವಳಿಕೆಯು ನಷ್ಟವಾಗಿ ನಾಹಂ ಭಾವವು ಆಳವಡುವದು. ಶರೀರಾದಿಗಳು ನಾನಲ್ಲವೆಂದು ಸಿದ್ಧ

ವಾದ ಮೇಲೆ ನಾನು ಯಾರು? ಎಂಬ ಪ್ರಶ್ನೆಯುಂಟಾಗುವದರಿಂದ ಕೋಽಹಂ ಭಾವವು ಹುಟ್ಟುವದು. ಇದು ವಿಚಾರದ ವರೆಗಲ್ಲಿಗೆ ಸಿಕ್ಕು ಕಟ್ಟಕಡೆಗೆ ಸೋಽಹಂ ಭಾವವು ಉಂಟಾಗುವದು. ಇಲ್ಲಿಗೆ ಶಾಂಕರ ಮತವು ಮುಗಿಯಿತು. ವಿಶಿಷ್ಟಾದ್ವೈತ ಸಿದ್ಧಾಂತದಂತೆ ಪರಮಾತ್ಮನೇ ನಾನಲ್ಲ ನಾನು ಪರಮಾತ್ಮನ ಭೃತ್ಯನು. ಅವಸಾನದಲ್ಲಿ ನಾನು ಪರಮಾತ್ಮನ ಉದರದಲ್ಲಿ ಸ್ವತಂತ್ರವಾಗಿ ನೆಲೆಸುವೆನು ಎಂಬ ವಿಚಾರವಿರುವದರಿಂದ ದಾಸೋಽಹಂ ಭಾವವು ಕೊನೆಗೊಳ್ಳುವದು.

ಶಕ್ತಿ ವಿಶಿಷ್ಟಾದ್ವೈತಮತದ ಷಟ್ಸ್ಥಲ ಸಿದ್ಧಾಂತದ ರೀತಿಯಂತೆ ನಾಲ್ಕು ವಿಧವಾದ ಅಹಂಭಾವವೂ ಶರಣನಿಗೆ ಉಂಟಾಗುವದಿಲ್ಲ. ಹೇಗೆಂದರೆ, ದೇಹವೇ ನಾನು ಎಂಬ ಭ್ರಾಂತಿಯು ಶರಣನಿಗೆ ಮೊದಲಿಂದಲೂ ಇಲ್ಲವಾದುದರಿಂದ 'ನಾಹಂ' ಎಂದು ಹೇಳಿಕೊಳ್ಳುವದಿಲ್ಲ, ತಾನು ಅನಾದಿ ಸಂಸಿದ್ಧ ಪರಶಿವನೇ ಆಗಿರುವೆನೆಂದು ನಿಶ್ಚಯವಿರುವದರಿಂದ, ನಾನು ಯಾರು ಎಂಬ ಸಂಶಯಾರ್ಥದ ಕೋಽಹಂ ಎಂಬ ವಾಕ್ಯವನ್ನು ಶರಣನು ನುಡಿಯುವದಿಲ್ಲ. ತನಗೆ ಭಿನ್ನವಾದ ಬೇರೊಂದು ವಸ್ತುವನ್ನು ಮುಂದಿರಿಸಿಕೊಂಡು ಆ ವಸ್ತುವೇ ನಾನೆಂದು ಹೇಳುವ ಉಭಯಭಾವ ಕಲ್ಪನೆಯುಳ್ಳವನಲ್ಲವಾದ ಕಾರಣ ಶರಣನು ಸೋಽಹಂ ಎಂಬ ವಾಕ್ಯವನ್ನು ಹೇಳತಕ್ಕವನಲ್ಲ. ಮತ್ತು ತಾನೇ ಉಪಾಸ್ಯನಾಗಿರುವ ಮೂಲಕ ಸ್ವಾಮಿ ಭೃತ್ಯತ್ವರೂಪ ಉಭಯ ಭಾವವೂ ಇಲ್ಲದಿರುವದರಿಂದ ತದರ್ಥಕವಾದ ದಾಸೋಽಹಂ ಎಂಬ ವಾಕ್ಯವನ್ನು ಶರಣನು ನುಡಿಯತಕ್ಕವನಲ್ಲ.

ಸುಕುಮಾರಮತಿಯಾದ ಶಿಷ್ಯನೇ ಕೇಳು, ಶರಣನೂ ದಾಸೋಹಂ ಎಂದು ಹೇಳುವನು. ಇದರ ಅರ್ಥವು ಭಿನ್ನವಾಗಿದೆ, ಮೊದಲಿಗೆ ದಾಸೋಹಂ ಎಂಬಲ್ಲಿ ದಾಸಃ ಅಹಂ ಎಂದು ಪದ ವಿಭಾಗವಾಗಿತ್ತು. ಶರಣನು ಹೇಳುವ ವಾಕ್ಯದಲ್ಲಿ ದಾ, ಸಃ, ಅಹಂ ಎಂದು ಪದ ವಿಭಾಗವಾಗುತ್ತದೆ (ಇಲ್ಲಿ ಮೂರು ಪದಗಳಿರುತ್ತವೆ) 'ದಾ, ದಾನೆ' ಎಂದು ಧಾತುವಿದೆ. ದಾನವೆಂದರೆ ಪದಾರ್ಥಗಳನ್ನು ಸಮರ್ಪಿಸುವದು ಎಂದು ಅರ್ಥ, ವಾಕ್ಯಾರ್ಥವನ್ನು ನೋಡು ದಾ–ಕೊಡಲಿಕ್ಕೆ ಯೋಗ್ಯಗಳಾದ ತನ್ನ ದೇಹ ಮನಃ ಪ್ರಾಣಾದಿಗಳನ್ನೆಲ್ಲಾ ಶಿವನಿಗೆ ಸಮರ್ಪಿಸಿದ, (ಸಕಲ ಪದಾರ್ಥಗಳಲ್ಲಿಯೂ ನಾನು ನನ್ನದು ಎಂಬ ಅಭಿಮಾನವನ್ನು .ಹೊಂದದೆ ಎಲ್ಲ ಪದಾರ್ಥಗಳಲ್ಲಿಯೂ ಶಿವಭಾವವಳವಟ್ಟು, ಪೂಜಾ ಜ್ಞಾನ ಧ್ಯಾನ ಚಿತ್ತೈಕಾಗ್ರತೆ ಮೊದಲಾದವುಗಳಲ್ಲಿ ಅದೇ ವಿಧವಾದ ನಿಷ್ಠೆಯನ್ನು ಪಡೆದು ಆತ್ಮಾರ್ಪಣವನ್ನು ಮಾಡಿ ನಿರಹಂ ಭಾವಿಯಾದ) ಅಹಂ ನಾನು ಸಃ ಆ ಶಿವನು ಎಂಬುದು ಆ ಶರಣನು ಹೇಳುವ ದಾಸೋಹಂ ಶಬ್ದದ ಅರ್ಥವು. ಶಿಷ್ಯೋತ್ತಮನೆ ನಿನ್ನನ್ನು ಸಂಸಾರವಲ್ಲಿ ದೂಡಬೇಕೆಂದು ನಾವು ಬಯಸುವದಿಲ್ಲ. ಆದರೆ ಮಾತಿನಲ್ಲಿ ಬ್ರಹ್ಮವನ್ನು ಸುರಿಸುತ್ತ ಆಚಾರಹೀನರಾದ

ಕುಟಿಲವಾಗದ್ವೈತಿಗಳಿಗೆ ಷಟ್‌ಸ್ಥಲ ಸಿದ್ಧಾಂತಮಾರ್ಗವು ಅಳವಡಲಾರದೆಂದು ತಡೆದಿರುವೆವು.

ಶಿಷ್ಯ :—ಅಹಹ! ಎಂಥ ಮಾತನ್ನಾಡಿದಿ ಗುರುದೇವಾ-ಹಾಲಿನಲ್ಲಿ ತುಪ್ಪವಿದ್ದಂತೆ ಆತ್ಮನಲ್ಲಿ ಶಿವನಿರುವನೆಂದು ಬೋಧೆ ಮಾಡುವವರು ಬಹು ಜನರುಂಟು. ಆ ಹಾಲಿನಲ್ಲಿದ್ದ ತುಪ್ಪವು ಕುರುಹಿಗೆ ಬರುವಂತೆ ಆತ್ಮನಲ್ಲಿರುವ ಶಿವನನ್ನು ಕುರುಹಿಗೆ ತಂದುಕೊಡುವವರೊಬ್ಬರನೂ ಕಾಣೆ. ವೇದಾಂತಾದಿ ಬಹುಮತದ ಬೋಧೆಗೀಡೆಗಳು ನನಗೆ ಬೇಡ. ನನ್ನ ಮೂರೂ ಶರೀರಗಳಲ್ಲಿ ಅಂಟಿಕೊಂಡಿರುವ, ಸಾಕ್ಷಾತ್ಕಾರಕ್ಕೆ ಪ್ರತಿಬಂಧಕಗಳಾದ ಮಲತ್ರಯಗಳನ್ನು ಮೂರು ವಿಧವಾದ ದೀಕ್ಷೆಯಿಂದ ನಾಶಮಾಡಿ ಪರವಸ್ತುವಿನ ಸಾಕ್ಷಾತ್ಕಾರ ಮಾಡಿಕೊಡಲು ತಾವೇ ಸಮರ್ಥರೆಂದು ನಿರ್ಧರಿಸಿ ತಮ್ಮ ಪಾದಕ್ಕೆ ಶರಣು ಬಂದಿರುವೆನು. ಹಾಲಿನಲ್ಲಿ ಸೇರಿಸಿದ ನೀರನ್ನು ಬೇರೆ ಮಾಡುವ ಮರ್ಮವನ್ನು ಕಲಹಂಸವು ಅರಿತಿರುವಂತೆ, ಕಾಯದ ಜೀವದ ಹೊಲಿಗೆಯನ್ನು ಬಿಡಿಸಿ ಜೀವನಲ್ಲಿ ಅಡಗಿದ್ದ ಪರವಸ್ತುವನ್ನು ಕಡೆಗೆ ತಂದು ಆಯತಸ್ವಾಯತ ಮಾಡುವ ಗುಟ್ಟನ್ನರಿಯಲು ತಾವೇ ಸಮರ್ಥರಿರುವಿರಿ. ಗುರುವೇ ನಿನ್ನ ಕೃಪೆಯಾದರೆ ಕೊರಡು ಕೊನರುವದು (ಚಿಗಿಯುವದು), ಬರಡು ಹಯನಹುದು, ವಿಷವು ಅಮೃತವಾಗುವದು ಎಂದು ನಂಬಿ ಹಂಬಲಿಸಿ ಬಂದ ನನ್ನನ್ನು ದೀಕ್ಷಾ ಸಂಸ್ಕಾರದಿಂದ ಪುನೀತನನ್ನಾಗಿ ಮಾಡಿ ರಕ್ಷಿಸು ರಕ್ಷಿಸು ದೇವಾ.

| ಸಂಧಿ | ವಿಷಯ | ಪುಟ ೧೪೫-೧೫೫ |
| --- | --- | --- |
| ೯ | ದೀಕ್ಷಾವಿಧಾನ | ಪದ್ಯ ೪೧ |

**ಗುರುವರನು ತನ್ನ ನಿಜಸ್ವರೂಪವನ್ನು ತೋರಿಸಿ ಶಿಷ್ಯನಲ್ಲಿರುವ ತಾನು ಬೇರೆ ಶಿವನು ಬೇರೆ ಎಂಬ ಭಾವವನ್ನು ಹೋಗಲಾಡಿಸಿ, ಶಿಷ್ಯನ ಹಸ್ತದಲ್ಲಿ ಶಿಷ್ಯನ ಸ್ವಸ್ವರೂಪವಾದ ಲಿಂಗವನ್ನು ಕೊಟ್ಟು ರಕ್ಷಿಸುವನು.**

ಕರಗಳನ್ನು ಜೋಡಿಸಿ ಶಿರಬಾಗಿ ನಿಂತು ಭಕ್ತಿಯಿಂದ ನಾನಾ ಪ್ರಕಾರವಾಗಿ ಪ್ರಾರ್ಥಿಸುತ್ತಿರುವ ಶಿಷ್ಯನನ್ನು ಗುರುವರೇಣ್ಯನು ಕೃಪಾದೃಷ್ಟಿಯಿಂದ ನೋಡಿ, ಮಗನೇ ಹೆದರಬೇಡೆಂದು ವರದಹಸ್ತವನ್ನು ಎತ್ತಿ ಶಿಷ್ಯನನ್ನು ಸ್ನಾನಮಾಡಿಸಿ ಬಿಳಿ ಬಟ್ಟೆಗಳನ್ನು ಧರಿಸಿ ಕರೆತಂದು ಶಿವಗಣ ಮಧ್ಯದಲ್ಲಿ ನಿಲ್ಲಿಸಿ, ಶಾಸ್ತ್ರೋಕ್ತಪ್ರಕಾರ ಸಲಕ್ಷಣವಾಗಿ ನಿರ್ಮಿಸಿದ ಮುಕ್ತಿಮಂದಿರವಾದ ದೀಕ್ಷಾಮಂಟಪದಲ್ಲಿ ಪಂಚಮುದ್ರೆಯನ್ನು ತಯಾರಿಸಿ, ಪಂಚವರ್ಣದ ಅಥವಾ ಬಿಳೆ ವರ್ಣದ ಅಕ್ಕಿಯಿಂದ ಮಂಡಲವನ್ನು ರಚಿಸಿ, ಸುತ್ತಲು ಚೌಕಾಗಿ ಅಕ್ಕಿಯನ್ನು ಹರವಿ, ಕಮಲವನ್ನು ಬರೆದು ಅದರ ಮಧ್ಯ ಕರ್ಣಿಕೆಯಲ್ಲಿ ಓಂಕಾರವನ್ನು ಪಂಚಕೋನಗಳಲ್ಲಿ ಪಂಚಪ್ರಣವಗಳನ್ನು ಬರೆದು

ಮಧ್ಯದಲ್ಲಿ ಒಂದು ಕಲಶವನ್ನು ಐದು ಕೋನಗಳಲ್ಲಿ ಐದು ಕಲಶಗಳನ್ನು ಸ್ಥಾಪಿಸಿ, ದಾರವನ್ನು ಸುತ್ತಿ ತೀರ್ಥೋದಕವನ್ನು ತುಂಬಿ, ಆ ಕಲಶಗಳ ಮೇಲೆ ಪಂಚಪಲ್ಲವ, ದರ್ಭೆಕಂಕೆ ಮೊದಲಾದವನ್ನಿಟ್ಟು ವಿಧಾನೋಕ್ತವಾಗಿ ಋತ್ವಿಜರಿಂದ ಪೂಜಾ ಮಾಡಿಸಿ ಮಧ್ಯ ಕಲಶವನ್ನು ತಾನು ( ಗುರು ) ಪೂಜಾ ಮಾಡುವದು. ನಂತರ ಗುರುವು ಉತ್ತರಾಭಿಮುಖನಾಗಿ ಕೂತು ಪವಿತ್ರಪಾಣಿಯಾದ ಶಿಷ್ಯನನ್ನು ಪೂರ್ವ ಮುಖವಾಗಿ ಕೂಡಿಸಿಕೊಂಡು ಋತ್ವಿಕ್ಕುಗಳೊಡನೆ ಕಲಶೋದಕದಿಂದ ಮೂರುಸಾರೆ ಶಿಷ್ಯನಿಗೆ ಅಭಿಷೇಕ ಮಾಡಿಸಿ, ಶಕ್ತಿಪಾತವನ್ನು ಮಾಡುವದು.

ಪಂಚಸೂತ್ರ ಪ್ರಮಾಣಬದ್ಧವಾಗಿ ತಯಾರಿಸಿದ ಲಿಂಗವನ್ನು ಪಂಚಗವ್ಯ ದಿಂದಲೂ, ಗುರುಪಾದೋದಕದಿಂದಲೂ ಅಭಿಷೇಕ ಮಾಡಿ ಪಂಚೋಪಚಾರಗಳಿಂದ ಪೂಜಿಸಿ, ಜಲಾಧಿವಾಸ, ಧಾನ್ಯಾಧಿವಾಸ, ಶಯನಾಧಿವಾಸಗಳನ್ನು ಒಂದೊಂದು ರಾತ್ರಿಯಲ್ಲಿ ಮಾಡಿ ಬಳಿಕ ಪ್ರಾಣಪ್ರತಿಷ್ಠಾ, ಕಲಾನ್ಯಾಸ, ಮಂತ್ರನ್ಯಾಸಾದಿಗಳನ್ನು ಮಾಡಿ ಬಳಿಕ ಕಲಶೋದಕದಿಂದ ಅಭಿಷೇಕ ಮಾಡಿ ಗುರುವು ಅಷ್ಟೋಪಚಾರಗಳಿಂದ ಪೂಜಿಸಿ ಶುದ್ಧಮಾಡಿಟ್ಟುಕೊಳ್ಳುವದು. ಶಿಷ್ಯನಿಗೆ ಇಪ್ಪತ್ತೊಂದು ವಿಧವಾದ ದೀಕ್ಷೆ ಯನ್ನು ಮಾಡಿ ಕಾಯ, ಪ್ರಾಣ, ಮನಸ್ಸು ಇವುಗಳ, ಕಾಲ, ಕರ್ಮ, ಮಲತ್ರಯಗಳ ಕೀಲ ಮುರಿದು, ಪ್ರಾಜ್ಞ, ತೈಜಸ, ವಿಶ್ವ ಇವರ ಜೀವಗುಣಗಳನ್ನು ಕಳೆದು, ಶಿಷ್ಯನ ಮಸ್ತಕದಲ್ಲಿ ಗುರುವು ಭಸ್ಮಾಂಕಿತವಾದ ತನ್ನ ವರದಹಸ್ತವನ್ನಿಟ್ಟು, ಪರಶಿವ ಚಿತ್ಕಲೆ ಯನ್ನು ಪಶ್ಚಿಮ ಚಕ್ರದಿಂದ ಮೆಲ್ಲ ಮೆಲ್ಲನೆ ಭಾವಕ್ಕೆ ತಂದು ಅಲ್ಲಿಂದ ಮನದಲ್ಲಿ ನೆಲೆಗೊಳಿಸಿ, ಅಲ್ಲಿಂದ ನೇತ್ರಕ್ಕೆ ತಂದು ಅಲ್ಲಿಂದ ಲಿಂಗದಲ್ಲಿ ಪ್ರತಿಷ್ಠಿಸಿ, ಆ ಇಷ್ಟಲಿಂಗದಲ್ಲಿ ಪ್ರಾಣವನ್ನು, ಪ್ರಾಣದಲ್ಲಿ ಇಷ್ಟವನ್ನು ಬೆರೆಸಿ ಎರಡನ್ನು ಒಂದೇ ಮಾಡಿ ಶಿಷ್ಯನ ಹಸ್ತಕ್ಕೆ ಕೊಡುವನು. ಸೂಕ್ಷ್ಮ ಶರೀರದಲ್ಲಿ ಪ್ರಾಣಲಿಂಗವನ್ನು, ಕಾರಣಶರೀರದಲ್ಲಿ ಭಾವಲಿಂಗವನ್ನು, ಮಂತ್ರದೀಕ್ಷೆ, ವೇಧಾದೀಕ್ಷೆ ಗಳಿಂದ ಸಂಬಂಧಮಾಡಿ ಈ ಇಷ್ಟಲಿಂಗವನ್ನು ನಿನ್ನ ಶರೀರದಿಂದ ಒಂದು ನಿಮಿಷವೂ ಅಗಲಿಸತಕ್ಕದ್ದಲ್ಲ. ಪ್ರತಿದಿವಸ ಸ್ನಾನಾದಿಗಳಿಂದ ಪರಿಶುದ್ಧನಾಗಿ ಲಿಂಗವನ್ನು ಪೂಜಿಸತಕ್ಕದ್ದು. ಈ ಲಿಂಗವು ಕೇವಲ ಸ್ವಸ್ವರೂಪವಾದುದು. ಇದನ್ನು ನಿನ್ನ ಪ್ರಾಣದಂತೆ ರಕ್ಷಿಸಬೇಕು. ಲಿಂಗಕ್ಕರ್ಪಿಸದೇ ಏನನ್ನೂ ಸೇವಿಸತಕ್ಕದ್ದಲ್ಲವೆಂದು ಶ್ರೀ ಗುರುವು ಬೋಧಿಸುವನು. ಋಷಿ, ಛಂದಸ್ಸು, ದೇವತಾ, ಬೀಜ, ಶಕ್ತಿ, ಕೀಲಕ ಎಂಬ ಮಂತ್ರಪಲ್ಲವಗಳನ್ನು ನ್ಯಾಸಾದಿಗಳನ್ನು ತಿಳಿಸಿ. ಮಂತ್ರೋಪದೇಶ ಮಾಡುವನು. ..... .....

| ಸಂಧಿ | ವಿಷಯ | ಪುಟ ೧೫೩–೧೬೭ |
|---|---|---|
| ೧೦ | ಜ್ಞಾನಾಚಾರ | ಪದ್ಯ ೪೫ |

ಗುರುವರನು, ಎಲೈ ಶಿಷ್ಯನೇ ಜ್ಞಾನವಿಶಿಷ್ಟವಾದ ಆಚಾರ

**ನಿಷ್ಠೆಯಿಂದ ಯಾವಾಗಲೂ ಲಿಂಗವನ್ನು ಒಳ್ಳೆಯ ಉಪಕರಣ ಗಳಿಂದ ತಪ್ಪದೆ ಸೇವಿಸತಕ್ಕದ್ದೆಂದು ಅಪ್ಪಣೆ ಮಾಡಿದನು.**

ಷಟ್‌ಸ್ಥಲ ಸಿದ್ಧಾಂತಕ್ಕನುಸರಿಸಿ ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗ, ಈ ಆರು ಲಿಂಗಗಳ ಯೋಗವು ಉಂಟಾಗಬೇಕಾದರೆ ಮೊದಲಿಗೆ ಸದಾಚಾರವು ಅತ್ಯಾವಶ್ಯಕವಾದುದು. ಸದಾಚಾರ ವುಳ್ಳವನ ಬಳಿಗೆ ಗುರುವು (ಗುರುಲಿಂಗ) ಬರುವನು. ಶಿಷ್ಯನ ಆಚಾರನಿಷ್ಠೆ (ಆಚಾರಲಿಂಗ) ಯನ್ನು ನೋಡಿ ಲಿಂಗವನ್ನು (ಶಿವಲಿಂಗ) ಧರಿಸುವನು. ಇಷ್ಟ ಲಿಂಗಧಾರಿಯಾದವನ ಬಳಿಗೆ ಜಂಗಮನು (ಜಂಗಮಲಿಂಗ) ಬರುವನು. ಆ ಜಂಗಮ ನಿಂದ ಪ್ರಸಾದ (ಪ್ರಸಾದಲಿಂಗ)ವು ಪ್ರಾಪ್ತವಾಗುವದು. ಈ ಪ್ರಸಾದ ಸೇವನೆಯಿಂದ ತೃಪ್ತಿ (ಮಹಾಲಿಂಗ) ಸ್ವರೂಪನಾಗುವನು. ಆದುದರಿಂದ ಜ್ಞಾನ ವಿಶಿಷ್ಟ ಸದಾಚಾರವನ್ನು ಎಂದೂ ಬಿಡತಕ್ಕದ್ದಲ್ಲ.

ಶಿಷ್ಯ:—ಗುರುದೇವ, ಬ್ರಹ್ಮಾನುಸಂಧಾನದಿಂದ ಸಾಕ್ಷಾತ್ ಬ್ರಹ್ಮವೇ ತಾನಾಗಿರಲು, ಶರಣರೊಡನೆ ಶಿವಾನುಭವ ಮಾಡುವದೇತಕ್ಕೆ, ಆ ಶಿವಾನುಭವದಿಂದ ತಿಳಿಯಬೇಕಾದುದು ಏನಿದೆ, ಸಮ್ಯಗ್ ಜ್ಞಾನವೇ ತಾನಾದ ಬಳಿಕ ಆಚಾರದಿಂದ ಪ್ರಯೋಜನವೇನು? ಜ್ಞಾನಬಲದಿಂದ ಶಿವನಲ್ಲಿ ಲೀನವಾದ ಚಿತ್ತವು ಆಚಾರದ ಸಲುವಾಗಿ ಬಹಿರ್ಮುಖವಾಗಲು ವಿಪರೀತವಾಗಬಹುದು. ಏಕೆಂದರೆ, ಮಾನವನು ಆಚರಿಸುವ ಕ್ರಿಯೆಯಿಂದಲೇ ಸಂಸಾರದಬಂಧವಾಗಲಿ, ತಾತ್ವಿಕ ಮೋಕ್ಷವಾಗಲಿ ಉಂಟಾಗುತ್ತವೆ. ಆದಕಾರಣ ಬಾಹ್ಯಕ್ರಿಯೆಗಳು ಪ್ರಯೋಜನವಿಲ್ಲವಲ್ಲಾ?

ಗುರು:—ಶಿಷ್ಯನೇ, ಬ್ರಹ್ಮಜ್ಞಾನವೇ ಪರಿಪೂರ್ಣವೆಂದು ಬ್ರಹ್ಮವನ್ನು ಧಿಕ್ಕರಿಸಬೇಡ, ಶಿವನನ್ನು ತಿಳಿದಿರುವೆನೆಂದು ಶಿವಶರಣರೊಡನೆ ವಿರೋಧಬೇಡ, ನಾನು ಮಹಾಜ್ಞಾನಿಯೆಂದು ಆಚಾರದ ನಿಂದೆ ಬೇಡ, ಬ್ರಹ್ಮದ ತಿರಸ್ಕಾರ, ಶರಣರ ವೈರ, ಆಚಾರನಿಂದೆ ಈ ಮೂರು ಮೋಕ್ಷಮಾರ್ಗಕ್ಕೆ ದೊಡ್ಡ ಉತ್ಪಾತಗಳು ಇವಿದ್ದರೆ ಮೋಕ್ಷವೇ ದೊರೆಯಲಾರದು. ಮತ್ತು ಅಂಗ, ಲಿಂಗ, ಎಂಬ ಉಪಾಧಿ ಮೂಲಕ ವಾದ ಭೇದವಿರುವವರೆಗೆ ಜ್ಞಾನವಿಶಿಷ್ಟವಾದ ಆಚಾರ ಬೇಕೇ ಬೇಕು. ಶಿವಭಾವ ರಹಿತವಾದ ವಾಸನಾವಿಶಿಷ್ಟ ಸಕಾಮಕರ್ಮವೇ ಸಂಸಾರ ಬಂಧಕ್ಕೆ ಕಾರಣವು, ಎಲ್ಲವೂ ಶಿವಮಯವಾದುದೆಂದು ಭಾವಿಸಿದ ವಾಸನಾರಹಿತ ನಿಷ್ಕಾಮಕರ್ಮವು ಮೋಕ್ಷಕ್ಕೆ ಸಾಧನವಾಗಿರುವುದರಿಂದ ಸದಾಚಾರವು ಬೇಕೇ ಬೇಕು.

ಶಿಷ್ಯ:—ಗುರುವೇ, ಸಮ್ಯಗ್‌ಜ್ಞಾನ ಒಂದೇ ಮೋಕ್ಷಕ್ಕೆ ಸಾಧನವಾಗಿರುವದು. ಭಾವದಿಂದ, ಕ್ರಿಯೆಯಿಂದ ಏನು ಪ್ರಯೋಜನ, ನಿರಾಕಾರವಾದ ಪರವಸ್ತುವನ್ನು

ಭಾವದಿಂದ ಸಾಕಾರ ಮಾಡಿಕೊಂಡು ನಾನಾ ಕ್ರಿಯೆಗಳಿಂದ ಅದನ್ನು ಪೂಜಿಸು ವದರಿಂದ ಆ ಕರ್ಮಗಳು ಯಾವ ಜನ್ಮವನ್ನು ಕೊಡುವವೊ ತಿಳಿಯದು. ಇದಲ್ಲದೆ ದೃಷ್ಟವಾದ ಆ ಇಷ್ಟಲಿಂಗವನ್ನು ಅಷ್ಟವಿಧಾದಿ ನಾನಾ ಉಪಚಾರಗಳಿಂದ ಶ್ರೇಷ್ಠ ವಾದ ಪೂಜೆಯನ್ನು ಎಷ್ಟು ಮಾಡಿದರೂ ನಷ್ಟವಲ್ಲದೆ ತೃಪ್ತಿಯು ದೊರೆಯಬಲ್ಲದೆ? ಅಂತರಂಗದಲ್ಲಿಯ ಪ್ರಾಣಲಿಂಗವನ್ನು ನಿಷ್ಠೆಯಿಂದ ಅರಿತುಕೊಂಡರೆ ಸಾಕು, ಆ ಸಮ್ಯಗ್ ಜ್ಞಾನದಿಂದಲೇ ಮೋಕ್ಷವು ಲಭಿಸುವಾಗ ಆಚಾರ ಮಾಡುವ ಕಷ್ಟಕ್ಕೆ ಏಕೆ ಹಚ್ಚುವಿರಿ.

ಗುರು :—ಶಿಷ್ಯನೇ, ನಿಃಕಲ ನಿರಾಕಾರವಾದ ಪರವಸ್ತುವು ಅರಿವಿಗೆ ದೂರ ವಾದುದು. ಸಕಲ ನಿಃಕಲ ರೂಪವಾದ ಪ್ರಾಣಲಿಂಗವು ಅನೇಕ ವಿಧೋಪಚಾರ ಪೂಜೆಗೆ ನಿಲುಕದು ಅಂದ ಬಳಿಕ ನೀನು ಧ್ಯಾನಪೂಜಾದಿಗಳನ್ನು ಹೇಗೆ ಮಾಡುವಿ, ಅದು ಸಾಧ್ಯವಿಲ್ಲ. ಅದಕ್ಕಾಗಿಯೇ ಶ್ರೀ ಗುರುವು ನಿರಾಕಾರವಾದ ಪರವಸ್ತುವನ್ನು ಸಾಕಾರ ಮಾಡಿ ನಿನ್ನ ಕೈಗೆ ಕೊಟ್ಟಿರುವನು, ಕರದಲ್ಲಿರುವ ಈ ಲಿಂಗದಲ್ಲಿ ಒಳಗಿರುವ ಪ್ರಾಣಲಿಂಗವನ್ನು ತಂದು ಎರಡನ್ನು ಏಕ ಮಾಡಿರುವನು. ಈ ಇಷ್ಟ ಪ್ರಾಣಗಳೆರಡು ವೃಕ್ಷಬೀಜದಂತೆ ಇರುತ್ತವೆ. ಇಷ್ಟಲಿಂಗವು ಕೇವಲ ಕುರುಹಲ್ಲ. ಒಳಗಿರುವ ಪ್ರಾಣಲಿಂಗವೇ ಇದೆಂದು ಚನ್ನಾಗಿ ತಿಳಿದುಕೊಂಡು ಶುದ್ಧ ಮನಸ್ಸಿನಿಂದ ಇದನ್ನು ಪೂಜಿಸು.

ಶಿಷ್ಯ :—ಗುರುದೇವಾ, ಕಣ್ಣು ಯಾವ ಯಾವ ಸ್ಥಾನವನ್ನು ಮುಟ್ಟುವದೋ ಆ ಸ್ಥಾನವನ್ನು ಕಾಲು ಮುಟ್ಟಲು ಸಾಧ್ಯವಾಗಬಹುದೇ? ಮನದಿಂದ ಹೊಂದಲು ಸಾಧ್ಯವಾದ ಘನವಸ್ತುವು ತನುವಿಗೆ ದೊರೆಯುವದೇ? ಶರೀರದ ಮಾತು ದೂರವೇ ಇರಲಿ. ಕ್ರಿಯೆಯೇ ಜಡವೆಂದ ಬಳಿಕ ಒಳಗಿರುವ ಲಿಂಗವು ಹೊರಗೆ ಬಂದು ಹೇಗೆ ನೆಲೆಸುವದು ಇದನ್ನು ಚನ್ನಾಗಿ ತಿಳಿಸಿಕೊಡು.

ಗುರು :—ಶಿಷ್ಯನೇ ಕೇಳು, ಕಟ್ಟಿಗೆಯಲ್ಲಿ ಸೂಕ್ಷ್ಮರೂಪವಾಗಿ ಬೆಂಕಿ ಇದೆ ಎಂಬುದು ನಿನಗೆ ಗೊತ್ತಿದೆ. ಕಟ್ಟಿಗೆಯಲ್ಲಿರುವ ಬೆಂಕಿಯು ಪ್ರಕಟವಾಗಬೇಕಾದರೆ ಹೊರಗೆ ಬೆಂಕಿಯ ಸಂಬಂಧವು ಅದಕ್ಕೆ ಆಗಬೇಕು. ಹೊರಗಿನ ಬೆಂಕಿಯ ಸಂಬಂಧ ದಿಂದ ಒಳಗಿನ ಬೆಂಕಿಯು ಪ್ರಜ್ವಲಿಸಿ ಹೊರಗೆ ಬಂದು ಒಳಗೂ ಹೊರಗೂ ಏಕಾಕಾರ ವಾಗಿ ಕಟ್ಟಿಯನ್ನೇ ತನ್ನಲ್ಲಿ ಅಡಗಿಸಿಕೊಂಡು ಬಿಡುವದು. ಇದರಂತೆ ತನುವಿಗೆ ಇಷ್ಟ ಲಿಂಗ ಸಂಬಂಧವಾದರೆ ಅದರ ಪೂಜಾಧ್ಯಾನಾನುಭವಗಳ ದ್ವಾರಾ ಪ್ರಾಣಲಿಂಗವು ಪ್ರಕಟವಾಗುವದು. ಶ್ರೀ ಗುರುವು ಪ್ರಾಣಲಿಂಗವನ್ನೇ ಇಷ್ಟಲಿಂಗದಲ್ಲಿ ಸಂಬಂಧ ಮಾಡಿಕೊಟ್ಟಿರುವದರಿಂದ ಇದು ಒಳಗಿನ ಪ್ರಾಣಲಿಂಗ, ಇದು ಹೊರಗಿನ ಇಷ್ಟಲಿಂಗ ಎಂಬ ಭೇದವ್ಯವಹಾರವು ಇಲ್ಲವೇ ಇಲ್ಲ. ಎರಡು ಒಂದಾಗಿಯೇ ಇರುತ್ತವೆ.

ಶಿಷ್ಯ :—ಗುರುವೇ, ಲಿಂಗದ ನಿಜವನ್ನು ಕಾಣದೆ ಮಾಡುವ ಅಷ್ಟವಿಧೋಪ ಚಾರ ಪೂಜೆಯಿಂದ ಫಲವೇನು ? ಲಿಂಗದ ಮುಖವನ್ನು ಕಾಣದೆ ಸಕಲ ಪದಾರ್ಥ ವನ್ನು ಸಮರ್ಪಿಸಿ, ಶ್ರೇಷ್ಠವಾದ ಪ್ರಸಾದವನ್ನು ಸೇವಿಸಿದೆನೆಂಬುದು ಯೋಗ್ಯವೇ ? ಕೃತ್ರಿಮ ( ಮನಃಕಲ್ಪಿತ ) ಫಲಗಳನ್ನು ತಿಂದು ತೃಪ್ತನಾಗಿರುವೆನೆಂದರೆ ಯಾರು ಒಪ್ಪುವರು.

ಗುರು :—ಪರವಸ್ತುವು ಪ್ರಯತ್ನ ವಿಶೇಷದಿಂದ ಕಾಣಬಹುದು. ಆದರೆ ಅದು ಕೈಗೆ ಸಿಗಲಾರದು. ಅದನ್ನು ಮನಸ್ಸಿನಿಂದ ಅರಿಯಬಹುದು, ಆದರೆ ಹೀಗೇ ಇದೆಯೆಂದು ಕುರುಹು ಮಾಡಿ ತೋರಿಸಲು ಸಾಧ್ಯವಿಲ್ಲ, ಭಾವಿಸಬಹುದು ಆದರೆ ಅದರಲ್ಲಿ ಬೆರೆಯಲು ಸಾಧ್ಯವಿಲ್ಲ. ಕಾಣಲಾರದಂತಹ ವಸ್ತುವನ್ನು ಕಂಡೆನೆಂದು ಹೇಳುವದು ವೀರಮಾಹೇಶ್ವರಾಚಾರ ಮಾರ್ಗದಲ್ಲಿ ಸಹಜವಾದುದಲ್ಲ. ಮತ್ತು ವರ್ಣರಹಿತನಾದ ಪರಶಿವನನ್ನು ಹುಡುಕಿ ಕಾಣದಂತಾದಾಗ ವರ್ಣರಹಿತನೆಂದು ಹೇಳಿ ತೊಂದರೆಗೊಳಗಾಗುವದು ಬೇಡ. ಸಕಲ ನಿಷ್ಕಲ ಅಣುರೇಣುತೃಣಕಾಷ್ಠ ಗಳಲ್ಲಿ ಪೂರ್ಣನಾಗಿರುವನೆಂದು ಹೇಳುವ ವೇದಮಂತ್ರಗಳಿಗೆ ವಿರೋಧಿಯಾಗದೆ ಇಷ್ಟ ಲಿಂಗರೂಪ ಬ್ರಹ್ಮವೇ ಸಕಲಕ್ಕೂ ಮೂಲಸ್ತಂಭವಾಗಿದೆಯೆಂದು ನಿಶ್ಚಯಿಸಿ ಸಾವಧಾನದಿಂದ ಪೂಜಿಸು.

ಶಿಷ್ಯ :—ಗುರುದೇವಾ, ಕಣಿಯನ್ನು ಪೂಜಿಸಿ ಮಣಿಗಳನ್ನು ಎಡೆಬಿಡದೆ ಎಣಿಸುತ್ತ ಏಕೆ ಕಾಲ ಕಳೆಯಬೇಕು ? ಒಂದು ಕ್ಷಣವಾಗಲಿ, ಅರ್ಧ ಕ್ಷಣವಾಗಲಿ, ನಿಷ್ಕಲಂಕವಾದ ಆ ಪ್ರಾಣಲಿಂಗದ ಧ್ಯಾನವೇ ( ನೆನಹೇ ) ಸಾಕು. ಮತ್ತು ವಿಷದ ಬಾಧೆಗೊಳಗಾದವನು ಗಾರುಡ ಮಂತ್ರವನ್ನು, ಶೀತಕ್ಕೆ ಹೆದರಿದವನು ಅಗ್ನಿಯನ್ನು ಆತುರದಿಂದ ಆದರಿಸುವಂತೆ, ಈ ಶರೀರಕ್ಕೆ ಪ್ರಾಪ್ತವಾಗುವ ರೋಗರುಜೆಗಳನ್ನು ಕಾಲ ಕರ್ಮಾದಿಗಳನ್ನು ಕಳೆದುಕೊಂಡರೆ ಸಾಕು, ಶಿವಾರ್ಚನೆಯು ಏತಕ್ಕೆ.

ಗುರು :—ಧ್ಯಾನವೇ ಸಾಕು ಎಂದು ಹೇಳುವ ಅನನುಭವಿಯಾದ ಶಿಷ್ಯನೇ, ಧ್ಯಾನದ ಪೂರ್ಣತೆಯು ಎಲ್ಲಿ ಆಗುತ್ತದೆಂಬುದನ್ನು ಚನ್ನಾಗಿ ತಿಳಿದುಕೊ, ಮೊದಲಿಗೆ ಲೋಕಾನುಭವವನ್ನು ಮಾಡಿಕೊ. ಲೋಕದಲ್ಲಿಯ ಹೊನ್ನೋ ಹೆಣ್ಣೋ ಯಾವದೋ ಒಂದು ಪದಾರ್ಥವನ್ನು ನೀನು ನೆನೆಸುತ್ತಿರುವಿಯೆಂದು ತಿಳಿದುಕೋ, ಎಷ್ಟೋ ದಿವಸ ನೀನು ನೆನೆಸುತ್ತಿದ್ದರೂ ನೆನಹಿನಕಾಂಕ್ಷೆಯು ಪೂರ್ಣವಾಗುವದೇ ಇಲ್ಲ. ಆದರೆ ನೀನು ನೆನೆಸುತ್ತಿದ್ದ ವಸ್ತು ನೀನಿರುವ ಗ್ರಾಮಕ್ಕೆ ಬಂದಿದೆ ಎಂದು ಕೇಳಿದಾಗ ನೆನೆಸುವದು ಅಲ್ಲಿಗೆ ನಿಂತುಹೋಗುತ್ತಿದೆ. ಆಗ ಅದನ್ನು ನೋಡಬೇಕೆಂಬ ವಾಂಛೆಯು ಹುಟ್ಟುವದು. ಆ ವಸ್ತುವಿದ್ದಲ್ಲಿಗೆ ಹೋಗಿ ಅದನ್ನು ದೂರದಿಂದ ನೋಡಿದಾಗ ನೋಡುವ ಅಭಿಲಾಷೆಯು ಮುಗಿದು ಅದನ್ನು ಮುಟ್ಟಬೇಕೆಂಬ

ಆಶೆಯು ಹುಟ್ಟುತ್ತದೆ, ಮುಟ್ಟಿದಾಗ ಮುಟ್ಟುವ ಆಶೆಯು ಪೂರ್ಣವಾಗಿ ಅದನ್ನು ಯಾವಾಗಲೂ ತನ್ನಲ್ಲಿಯೇ ಇಟ್ಟುಕೊಳ್ಳಬೇಕೆಂಬ ಭಾವವು ಉಂಟಾಗುವದು. ಈ ಲೋಕಾನುಭವದಂತೆ ಆ ಪರಶಿವನ ಧ್ಯಾನಕ್ಕಿಂತಲೂ ದರ್ಶನವು ಅಧಿಕವಾದುದು. ಧ್ಯಾನದರ್ಶನಗಳೆರಡಕ್ಕಿಂತಲೂ ಸ್ಪರ್ಶನವೂ, ಅದಕ್ಕಿಂತಲೂ ಪೂಜಿಸುವದು ಅಧಿಕವಾಗಿರುವದು. ಈ ಧ್ಯಾನದರ್ಶನ ಪೂಜಾದಿಗಳಿಗಿಂತಲೂ ಮಂಗಲಮಯವಾದ ಲಿಂಗವನ್ನು ಅಂಗದ ಮೇಲೆ ಎಡೆಬಿಡದೆ ಧರಿಸುವದು ಅತ್ಯಂತ ಶ್ರೇಷ್ಠವಾದುದು. ಹೇಗೆಂದರೆ, ಧ್ಯಾನದ (ನೆನಹಿನ) ಲ್ಲಿರುವ ಬಯಕೆಯು ದರ್ಶನದಲ್ಲಿ ಅಡಗಿಹೋಗುವದು, ದರ್ಶನದ ಬಯಕೆಯು ಸ್ಪರ್ಶನದಲ್ಲಿ ಅಡಗುವದು, ಸ್ಪರ್ಶನಾಭಿಲಾಷೆಯು ಕೂಟದಲ್ಲಡಗುವದು, ಕೂಟದ ಮಹಾಕಾಂಕ್ಷೆಯು ಪರವಶದಲ್ಲಿ ಬಯಲಾಗುವದು, ಕಾರಣ ಸದಾಚಾರದಿಂದ ಅಂಗನು ಲಿಂಗದಲ್ಲಿ ಪರವಶನಾಗಿ ಬೆರೆತು ಪರಮಾನಂದವನ್ನು ಹೊಂದುವವರೆಗೂ ಲಿಂಗವನ್ನು ಪೂಜಿಸಲೇ ಬೇಕು. ಪ್ರಾರಬ್ಧಾದಿ ಕರ್ಮಗಳಿಗೆ ಹೆದರಿದ ಎಲೋ ಶಿಷ್ಯನೇ ಕೇಳು, ಶ್ರೀ ಗುರುವಿನ ಕಾರುಣ್ಯದಿಂದ ಪ್ರಾಪ್ತವಾದ ಆನಂದಮಯವಾದಿಷ್ಟಲಿಂಗದಲ್ಲಿ ದೃಷ್ಟಿಯನ್ನು ನಿಲ್ಲಿಸಿದರೆ ಪ್ರಾಣವಾಯುವು ನಿಲ್ಲುವದು. ಆಗ ಮನಸ್ಸಿನ ಚಲನವಲನವು ನಿಂತು ಹೋಗುವದು. ಮನಸ್ಸಿನ ಚಾಂಚಲ್ಯವು ಅಡಗಿ ಅದು ಲಿಂಗದಲ್ಲಿ ಸ್ಥಿರವಾಗಿ-ನಿಂತುಬಿಟ್ಟರೆ ಕಾಲಕರ್ಮಾದಿಗಳನ್ನು ಜಯಿಸುವದು ಏನು ಆಶ್ಚರ್ಯವು. ಅವು ತಾವೇ ಓಡಿಹೋಗುವವು.

ಶಿಷ್ಯ :—ಶಿವಶಿವ ಗುರುಸಾರ್ವಭೌಮ ಎಂಥ ಯುಕ್ತಿಯನ್ನು ತೋರಿಸಿ ಕೊಟ್ಟಿರಿ. ನನ್ನ ಶರೀರವು ಕಂಪಿಸಿ, ಪುಳಕವು ಅಂಕುರಿಸಿ, ರೋಮಾಂಚವು ಕಂಚುಕದಂತೆ ಆವರಿಸಿ, ಆನಂದೋದಕದ ಸಮುದ್ರದಲ್ಲಿ ತೆರೆ, ನೊರೆಗಳುಂಟಾಗಿ, ಕಂಠವು ಗದ್ಗದಿಸಿ, ದೇಹವು ಪರವಶವಾಗಿ, ಮನವು ಲಿಂಗದಲ್ಲಿ ಲೀನವಾಗುವಂತೆ ಅನಿಮಿಷ ದೃಷ್ಟಿಯಿಂದ ಲಿಂಗವನ್ನು ನಿರೀಕ್ಷಿಸುತ್ತ ಆನಂದ ಪರವಶದಲ್ಲಿ ಎಂದಿರುವೆನೋ? ನನ್ನ ತನು, ಮನ, ಪ್ರಾಣ, ಕರಣ, ಭಾವ ಇವುಗಳ ಒಳಗೂ ಹೊರಗೂ ಪರಿಪೂರ್ಣವಾಗಿ ತುಂಬಿರುವ ಲಿಂಗದಲ್ಲಿ ಆನಂದದಿಂದ ಪರವಶನಾಗಿ ಪೂಜಿಸಿ ಗದ್ಗದ ಕಂಠದಿಂದ ಸ್ತೋತ್ರ ಮಾಡುತ್ತ ಎಂದಿರುವೆನೋ?

ತನುವೆಂಬ ವೃಕ್ಷಕ್ಕೆ ಮನವೇ ಬೇರು, ಪುಳಕವೇ ಅಂಕುರ, ರೋಮಾಂಚವೇ ಪಲ್ಲವ, ಹರುಷವೇ ಶಾಖೆ, ಅನಿಮಿಷ ದೃಷ್ಟಿಯೇ ಕುಸುಮ (ಹೂವು), ಗದ್ಗದವೇ ಫಲ, ಆನಂದೋದಕವೇ ರಸ, ನರನಾಡಿಗಳೇ ಬಳ್ಳಿಗಳ ಆವರಣ, ಇಂತಹ ವೃಕ್ಷವನ್ನಾಶ್ರಯಿಸಿರುವ ಇಷ್ಟಲಿಂಗವನ್ನು ಜಾಗ್ರಾವಸ್ಥೆಯಲ್ಲಿ ಕಣ್ಣು ತುಂಬಾ ನೋಡಿ, ಅಷ್ಟವಿಧಾರ್ಚನೆ ಷೋಡಶೋಪಚಾರಗಳಿಂದ ಪೂಜೆಯನ್ನು ಕೈಯಿಂದ ಮಾಡಿ, ಮನವರಳಿ ವಾಕ್ಯದಿಂದ ಸ್ತೋತ್ರಗಳನ್ನು ಮಾಡುವೆನು, ಗುರುದೇವ ಕರುಣಿಸು ಕರುಣಿಸು.

ಗುರು :—ನಿಷ್ಕಾಮ ಭಕ್ತಿಯುಳ್ಳ ಶಿಷ್ಯೋತ್ತಮನೇ, ವೀರಶೈವರ ಇಷ್ಟಲಿಂಗ ಪೂಜೆಯು ಹನ್ನೆರಡು ವಿಧವಾದ ಅರ್ಚನೆ, ಇಪ್ಪತ್ತುನಾಲ್ಕು ವಿಧವಾದ ಉಪಚಾರ ಕೂಡಿ ೩೬ ತತ್ತ್ವಸ್ವರೂಪವಾಗಿದೆ. ವೀರಶೈವನು ಲಿಂಗಭೋಗೋಪಭೋಗಿಯಾಗಿರುವುದರಿಂದ ಅವನ ಕಾರ್ಯಕಲಾಪಗಳೆಲ್ಲ ಲಿಂದಮುಖವಾಗಿಯೇ ನಡೆಯುತ್ತವೆ. ವೀರಶೈವನ ಪೂಜೋಪಚಾರಗಳು ಇತರರಂತೆ ಕೇವಲ ಪೂಜೋಪಚಾರಗಳಲ್ಲ. ಅವು ಅರ್ಪಣಸಾಪೇಕ್ಷೆಯುಳ್ಳವುಗಳಾಗಿರುತ್ತವೆ. ಅಂದರೆ ಹನ್ನೆರಡು ವಿಧವಾದ ಪೂಜೆ, ಇಪ್ಪತ್ತುನಾಲ್ಕು ವಿಧವಾದ ಉಪಚಾರಗಳನ್ನು ಮಾಡುವಾಗ್ಗೆ ಆಯಾಯ ಪದಾರ್ಥಗಳ ಅರ್ಪಣವಾಗುತ್ತದೆ. ಈ ಅರ್ಪಣದಿಂದ ಆ ಪದಾರ್ಥಗಳು ಪ್ರಸಾದಗಳಾಗಿ ವೀರಶೈವನ ಉಪಭೋಗಕ್ಕೆ ಅರ್ಹಗಳಾಗುತ್ತವೆ. ಯಾವ ಯಾವ ಪೂಜೋಪಚಾರಗಳಿಂದ ಯಾವ ಪದಾರ್ಥದ ಅರ್ಪಣವಾಗಿ ಅದು ಪ್ರಸಾದವಾಗುತ್ತದೆಂಬುದನ್ನು ವಿವರಿಸುವೆವು, ಸಾವಧಾನ ಭಕ್ತಿಯಿಂದ ಕೇಳು,

ಇಷ್ಟಲಿಂಗಕ್ಕೆ ಭಸ್ಮವನ್ನು ಧರಿಸುವಾಗ ಪೃಥ್ವೀತತ್ವದ ಅರ್ಪಣವಾಗುತ್ತದೆಂದೂ ಅದರಿಂದ ಅದು ಪ್ರಸಾದವಾಗಿ ವೀರಶೈವನ ಉಪಭೋಗಕ್ಕೆ ಅರ್ಹವಾಗುತ್ತದೆಂದೂ ತಿಳಯಬೇಕು. ಇದರಂತೆ ಅಭಿಷೇಕ ಮಾಡುವದರಿಂದ ಜಲತತ್ವದ ಅರ್ಪಣವಾಗಿ ಅದು ಪ್ರಸಾದವಾಗುವದು. ಅಭಿಷೇಕಾ ನಂತರ ದ್ರವವನ್ನು ತೆಗೆದು ಬೆಂಕಿ ಕಾಸಬೇಕು. ಈ ಅಂಗಾರ ತಾಪನದಿಂದ ಅಗ್ನಿ ತತ್ವದ ಸಮರ್ಪಣವಾಗಿ ಪ್ರಸಾದವಾಗುವದು. ಆ ಬೆಂಕಿಯಲ್ಲಿ ಧೂಪಹಾಕಿ ಅದಕ್ಕೆ ಕೈಬೀಸಿ ವಾಯುವನ್ನು ಹುಟ್ಟಿಸಬೇಕು. ಈ ಧೂಪಸಂವೀಜನದಿಂದ ವಾಯುತತ್ವದಸಮರ್ಪಣವಾಗಿ ಅದು ಪ್ರಸಾದವಾಗುವದು. ಆ ಧೂಪದ ಹೊಗೆಯು ಪೂಜಾಗೃಹದ ತುಂಬಾ ಹರಡುವಂತೆ ಮಾಡಬೇಕು. ಈ ಧೂಪಪ್ರಸಾರಣದಿಂದ ಆಕಾಶ ತತ್ವದ ಅರ್ಪಣವಾಗಿ ಅದು ಪ್ರಸಾದವಾಗುವದು. ಇದರಂತೆಯೇ ಗಂಧವನ್ನು ಧರಿಸುವದರಿಂದ ಚಂದ್ರನೂ, ಅಕ್ಷತೆಗಳನ್ನು ಧರಿಸುವದರಿಂದ ನಕ್ಷತ್ರಗಳೂ, ಪತ್ರಿಪುಷ್ಪಗಳನ್ನು ಧರಿಸುವದರಿಂದ ಸೂರ್ಯನೂ, ತುಪ್ಪದ ದೀಪವನ್ನು ಬೆಳಗುವದರಿಂದ ಬಿಸಿಲೂ, ಕರ್ಪೂರದೀಪದಿಂದ ಬೆಳದಿಂಗಳೂ, ಆ ದೀಪಗಳನ್ನು ಹಿಂದೆ ಮುಂದೆ ಸುತ್ತಲೂ ಬೆಳಗುವದರಿಂದ ಕತ್ತಲೆ ಬೆಳಕುಗಳೂ, ಮತ್ತು ಆ ದೀಪವನ್ನು ದೂರ ಹಾಗು ಸಮಿಪಕ್ಕೆ ಸರಿಸುವದರಿಂದ ಶೀತೋಷ್ಣಗಳು, ನೈವೇದ್ಯದಿಂದ ದೇಹ ಪ್ರಾಣಗಳೂ, ತಾಂಬೂಲದಿಂದ ಸತ್ವ ರಜಸ್ತಮೋಗುಣಗಳೂ. ಘಂಟಾಮೃದಂಗಾದಿ ನಾದದಿಂದ ಶಬ್ದವೂ, ಛತ್ರ, ಚಾಮರ, ವ್ಯಜನ, ಗೀತ, ನೃತ್ಯ, ಶಾಸ್ತ್ರ, ಪುರಾಣ, ಸ್ತೋತ್ರ ಮೊದಲಾದವನ್ನರ್ಪಿಸುವದರಿಂದ ಆಯಾಯ ಪದಾರ್ಥಗಳೂ, ಮತ್ತು ವಸ್ತ್ರವನ್ನು ಮುಖದ ತುಂಬಾ ಮುಚ್ಚಿಕೊಳ್ಳುವದರಿಂದ ದಶದಿಕ್ಕುಗಳೂ ಅರ್ಪಿತಗಳಾಗಿ ಪ್ರಸಾದಗಳಾಗುತ್ತವೆ. ಈ ಪ್ರಕಾರ ಜ್ಞಾನದಿಂದ ಕೂಡಿದ ಕ್ರಿಯೆಗಳಿಂದ ಸರ್ವಾರ್ಪಣಪೂರ್ವಕ ನಿಷ್ಕಾಮನಾಗಿ ಇಷ್ಟ

ಲಿಂಗಾರ್ಚನೆ ಮಾಡಿ ಆ ಲಿಂಗದಲ್ಲಿ ತನು, ಮನ, ಪ್ರಾಣ, ಇಂದ್ರಿಯಗಳೆಲ್ಲವೂ ಅಂತರ್ಮುಖವಾಗಿ ಹೃದಯವು ತರಹರವಾಗಿ ಅನಿಮಿಷ ದೃಷ್ಟಿಯಿಂದ ದಹರಾಕಾಶ ದಲ್ಲಿ ಕೋಟಿ ಸೂರ್ಯರಂತೆ ಝುಗಝುಗಾಯಮಾನವಾಗಿ ಬೆಳಗುವ ಪ್ರಾಣಲಿಂಗ ವನ್ನು ನಿರೀಕ್ಷಿಸುತ್ತ ಅನುಸಂಧಾನ ಮಾಡುವದು. ಪ್ರಾಣಲಿಂಗದ ಪೂಜೆಯಲ್ಲಿ ಶಾಂತಿ ಜಲ, ಶಿವಯೋಗ ಗಂಧ, ನಿರಹಂಕಾರ ಅಕ್ಷತೆ, ವಿವೇಕ ವಸ್ತ್ರ, ಸತ್ಯವೇ ಆಭರಣ, ವೈರಾಗ್ಯವೆ ಪತ್ರಿಪುಷ್ಪ, ವಿಶ್ವಾಸವೇ ಧೂಪ, ಶಿವಜ್ಞಾನವೇ ದೀಪ, ವಿಷಯಾರ್ಪಣವೇ ನೈವೇದ್ಯ, ಭಕ್ತಿಯೇ ತಾಂಬೂಲ, ವಿಷಯವಿಜಯವೇ ಪ್ರದಕ್ಷಿಣ, ಸುಬುದ್ಧಿಯೇ ನಮಸ್ಕಾರಗಳಾಗಿರುತ್ತವೆ.

| ಸಂಧಿ | ವಿಷಯ | ಪುಟ ೧೩೮–೧೭೭ |
| --- | --- | --- |
| ೧೧ | ಲಿಂಗಧಾರಣ | ಪದ್ಯ ೩೭ |

> ಶಿಷ್ಯನು ತನ್ನ ಸ್ವರೂಪವಾದ ಲಿಂಗವನ್ನು ಪೂಜಿಸಿ, ಆ ಲಿಂಗವು ಶರೀರದಿಂದ ಒಂದು ನಿಮಿಷವೂ ಅಗಲದಂತೆ ಶರೀರದ ಮಸ್ತಕ, ಕಂಠ, ಎದೆ, ಕಕ್ಷ (ಬಗಲು) ಹೊಟ್ಟೆ, ಕೈ ಅಥವಾ ಅಮಳೈಕ್ಯ ಎಂಬ ಆರು ಸ್ಥಾನಗಳಲ್ಲಿ ಯಾವಾಗಲೂ ಧರಿಸ ಬೇಕೆಂದೂ ಜಡೆಯ ತುದಿಗೆ, ಬೆನ್ನುಕಡೆಗೆ, ಹೊಕ್ಕಳ ಕೆಳಗೆ ಧರಿಸಬಾರದೆಂದೂ ಗುರುವು ಅಪ್ಪಣೆ ಮಾಡುವನು.

ಅಂಗದೊಡನೆ ಉದಯಿಸಿದ ಪ್ರಾಣವನ್ನು ಅಂಗದಿಂದ ಬೇರೆ ಮಾಡದೆ ಲಿಂಗ ದೊಳಗೆ ಸಂಬಂಧ ಮಾಡಿ, ಆ ಪ್ರಾಣವಿಶಿಷ್ಟ ಲಿಂಗವನ್ನು ತಂದು ಅಂಗದಲ್ಲಿ ಪ್ರತಿಷ್ಠೆ ಮಾಡಲು ಆ ಘನಲಿಂಗವು ಆರು ಪ್ರಕಾರವಾಗುವದು. ಲಿಂಗಪಂಚಕವನ್ನೂ ಪಂಚ ಸಾದಾಖ್ಯಗಳನ್ನೂ ತನ್ನಲ್ಲಡಗಿಸಿಕೊಂಡಿರುವ ಮಹಾಲಿಂಗವು ಸಾಕಾರವಾಗಿ ಅಂಗದಲ್ಲಿ ಆಚಾರ ಲಿಂಗವಾಗಿಯೂ, ಆತ್ಮನಲ್ಲಿ ಗುರುಲಿಂಗವಾಗಿಯೂ, ಪ್ರಾಣದಲ್ಲಿ ಶಿವ ಲಿಂಗವಾಗಿಯೂ, ಇಂದ್ರಿಯಗಳಲ್ಲಿ ಜಂಗಮಲಿಂಗವಾಗಿಯೂ, ವಿಷಯ ಸಂಗದಲ್ಲಿ ಪ್ರಸಾದಲಿಂಗವಾಗಿಯೂ, ನಿತ್ಯತೃಪ್ತಿಯಲ್ಲಿ ಮಹಾಲಿಂಗವಾಗಿಯೂ ವಿಜೃಂಭಿಸು ತ್ತಿರುವದು.

ಈ ವಿಧವಾದ ಇಷ್ಟಲಿಂಗವನ್ನು ಧರಿಸುವದರಿಂದ ತನಗುಂಟಾದ ಪರಿಸ್ಥಿತಿ ಯನ್ನು ಶಿಷ್ಯನು ವಿವರಿಸುವನು.

ಮೃತ್ಯುಂಜಯನೂ, ಕಾಮಧ್ವಂಸಿಯೂ ಆದ ಪರ ಶಿವನು ಲಿಂಗರೂಪದಿಂದ ಅಂಗದಮೇಲೆ ಬಂದು ನೆಲೆಸಲು, ಮೃತ್ಯುದೇವತೆಯು ಇನ್ನುಮೇಲೆ ನಾನು ತೊತ್ತಿನ

ಕೆಲಸವನ್ನು ಮಾಡುವ ಪ್ರಸಂಗ ಬರುವದೆಂದು ದೂರ ಸರಿಯಿತು, ಆ ಲಿಂಗದ ಪ್ರಕಾಶದಲ್ಲಿ ಕಾಮದ ಕತ್ತಲೆಯು ನಾಶವಾಯಿತು, ಕಾಮ ಕ್ರೋಧಾದಿಗಳು ಇನ್ನು ಮೇಲೆ ನಮಗೆ ಇಲ್ಲಿ ಅವಕಾಶವಿಲ್ಲವೆಂದು ತಿಳಿದು ಅಳುತ್ತಾ ಓಡಿಹೋದವು, ವಿಷಯ ಗಳು ನಮ್ಮ ಉಪಜೀವನಕ್ಕೆ ಇಲ್ಲಿ ಸ್ಥಾನವಿಲ್ಲವೆಂದು ಗೋಳಿಡುತ್ತ ಕಾಲಿಗೆ ಬಿದ್ದು ಹೇಳಿದವು. ಲಿಂಗದ ಭಯದಿಂದ ವನಿತಾಭೋಗಕ್ಕೆ ನಾಚಿಕೊಂಡೆನು, ಸಂಸಾರದಿಂದ ಪಾರಾದೆನು, ಪಶುಪಾಶ ಇವುಗಳ ಬಂಧನವನ್ನು ನಿರಾಕರಿಸಿದೆನು, ಎಲ್ಲ ವಿಧವಾದ ಭ್ರಾಂತಿಯನ್ನು ಕಳೆದುಕೊಂಡೆನು, ಪ್ರಪಂಚದಲ್ಲಿ ಮುಳುಗಿಸುವ ಮಾಯೆಯನ್ನು ಬೊಗ್ಗು ಬಡಿದೆನು, ಇಂದ್ರಿಯಗಳನ್ನು ಪುಡಿಪುಡಿ ಮಾಡಿದೆನು, ದೇಹಧರ್ಮಗಳನ್ನು ತಗ್ಗಿಸಿದೆನು, ಅಹಂ ಭಾವವನ್ನು ಸುಟ್ಟುಬಿಟ್ಟೆನು, ವಿಪರೀತ ಕಲ್ಪನೆಗಳನ್ನು ನಾಶ ಮಾಡಿದೆನು, ವಿಧಿನಿಷೇಧಗಳನ್ನು ಕುಗ್ಗಿಸಿದೆನು, ಶ್ರೀ ಗುರುವಿನ ಕರುಣೆಯಿಂದ ಪೂರ್ಣ ವಾದ ಆನಂದಸಾಗರದ ತೆರೆಗಳಲ್ಲಿ ಈಜಾಡುತ್ತಿರುವೆನು.

ಈ ಲಿಂಗಧಾರಣವು ಅಭ್ಯಂತರ, ಬಾಹ್ಯ ಎಂದು ಎರಡು ವಿಧವಾಗಿರುತ್ತದೆ. ಮೂಲಾಧಾರದಲ್ಲಿ ಬಂಗಾರದ ವರ್ಣವುಳ್ಳ, ಹೃದಯದಲ್ಲಿ ಹವಳದ ಬಣ್ಣವುಳ್ಳ, ಭ್ರೂಮಧ್ಯದಲ್ಲಿ ಸ್ಫಟಿಕದ ಕಾಂತಿಯುಳ್ಳ ಜ್ಯೋತಿರ್ಲಿಂಗದ ಅನುಸಂಧಾನವೇ ಅಭ್ಯಂತರಲಿಂಗಧಾರಣವು. ಇದನ್ನು ಯೋಗಿಗಳು ಅನುಸರಿಸುತ್ತಾರೆ, ಈ ಅಂತರ್ಲಿಂಗಾನು ಸಂಧಾನಕ್ಕಿಂತಲೂ ಶ್ರೀ ಗುರುವಿನಿಂದ ಪಡೆದ ಬಾಹ್ಯಲಿಂಗ ಧಾರಣವೇ ಶ್ರೇಷ್ಠವಾದುದು. ಬಾಹ್ಯವು ಶುದ್ಧವಿಲ್ಲದೆ ಅಂತರಂಗ ಧ್ಯಾನಧಾರಣವು ಪ್ರಯೋಜನವಿಲ್ಲದ್ದು, ಕೇವಲ ಧ್ಯಾನದಿಂದ ಜಲಾಂತರ್ಗತ ದೀಪದಂತೆ ವಸ್ತುವು ಕಾಣಬಹುದು. ಅದು ಸ್ಥಿರವಲ್ಲ, ಧ್ಯಾನ, ಧಾರಣ, ಪೂಜಾ, ಭಕ್ತಿಗಳಿಂದ ಕೂಡಿದ ಜ್ಞಾನದಿಂದ ವಸ್ತುಸಾಕ್ಷಾತ್ಕಾರವೂ ಸಾಮರಸ್ಯವೂ ಉಂಟಾಗುತ್ತದೆ. ಆದುದ ರಿಂದಲೇ ರಾಜಯೋಗಕ್ಕಿಂತಲೂ ಶಿವಯೋಗವು ಶ್ರೇಷ್ಠವಾದುದು. ರಾಜಯೋಗ ದಿಂದುಂಟಾಗುವ ಸಾಕ್ಷಾತ್ಕಾರವು ಸ್ವಪ್ನೈಶ್ವರ್ಯದಂತೆ ಅಸ್ಥಿರವಾದುದು. ಆದುದರಿಂದ ಶಿವಯೋಗವನ್ನಾಶ್ರಯಿಸಿ ಅಂಗೈಯಲ್ಲಿ ಇಷ್ಟಲಿಂಗವನ್ನು ನಾಸಿಕಾಗ್ರ ದೃಷ್ಟಿಯಿಂದ ನಿರೀಕ್ಷಿಸಲು ಒಳ್ಳೆ ಬೆಳಕು ಕಾಣಿಸುವದು. ಆ ಪ್ರಭೆಯು ಕಣ್ಣೊಳಗೆ ತುಂಬಿ ಕಣ್ಣಿನ ದ್ವಾರಾ ಮನವನ್ನು ಪ್ರವೇಶಿಸಲು ಆ ಮನವು ಮಂತ್ರದೊಡನೆ ಸೇರಿ ಮಂತ್ರ ಮಯಯೋಗವಾಗಿ ಒಂಭತ್ತು ಚಕ್ರಗಳಲ್ಲಿ ತುಂಬಿ ವಿಜೃಂಭಿಸುವದು. ಇದರಿಂದ ಇಷ್ಟಲಿಂಗವೇ ಪ್ರಾಣ, ಭಾವ, ಮನ, ಜ್ಞಾನ, ಇಂದ್ರಿಯ ಎಲ್ಲವುಗಳಲ್ಲಿ ತುಂಬಿ ಒಳಗೂ ಹೊರಗೂ ಏಕಾಕಾರವಾಗಿ ಶೋಭಿಸುವದು.

| ಸಂಧಿ | ವಿಷಯ | ಪುಟ ೧೭೮–೧೮೬ |
| --- | --- | --- |
| ೧೨ | ವಿಭೂತಿ | ಪದ್ಯ ೩೧ |

ಇಷ್ಟಲಿಂಗವನ್ನು ಧರಿಸಿದ ಅಂಗದ ಮೇಲೆ ಲಿಂಗಾಂಗ

**ಸಾಮರಸ್ಯ ಜ್ಞಾನಾಭಿವೃದ್ಧಿಗೆ ಮುಖ್ಯಾಂಗವಾದ ವಿಭೂತಿ ಯನ್ನು ಧರಿಸಬೇಕೆಂದು ಶ್ರೀ ಗುರುವು ಅಪ್ಪಣೆ ಮಾಡುವನು.**

ಪರಶಿವನ ಸದ್ಯೋಜಾತ ಮುಖದಿಂದ ಕಪಿಲ ( ಬಿಳಪು ಕೆಂಪು ಮಿಶ್ರ ) ವರ್ಣದ **ನಂದಾ** ಎಂಬ ಆಕಳು, ಶಿವನ ವಾಮದೇವ ಮುಖದಿಂದ ಕಪ್ಪು ಬಣ್ಣದ **ಭದ್ರಾ** ಎಂಬ ಆಕಳು, ಅಘೋರಮುಖದಿಂದ ಬಿಳೇ ಬಣ್ಣದ **ಸುರಭಿ** ಎಂಬ ಆಕಳು, ತತ್ಪುರುಷ ಮುಖದಿಂದ ಕಪ್ಪು ಕೆಂಪು ಮಿಶ್ರ ಬಣ್ಣದ **ಸುಶೀಲಾ** ಎಂಬ ಆಕಳು, ಶಿವನ ಈಶಾನ ಮುಖದಿಂದ ಕೆಂಪು ಬಣ್ಣದ **ಸುಮನಾ** ಎಂಬ ಆಕಳು ಹೀಗೆ ಐದು ಬಣ್ಣದ ಆಕಳುಗಳು ಹುಟ್ಟಿರುತ್ತವೆ. ಅವುಗಳ ದುರ್ಗಂಧಾದಿ ದೋಷವಿಲ್ಲದ ಗೋಮಯವನ್ನು ಆಯಾಯ ಮಂತ್ರಪೂರ್ವಕವಾಗಿ **ಗ್ರಹಣ, ಪಿಂಡೀಕರಣ, ಶೋಷಣ, ದಹನ, ಶೋಧನ** ಎಂಬ ಐದು ವಿಧ ಕ್ರಿಯೆಗಳಿಂದ ನಂದಾದ ಗೋಮಯದಿಂದ **ವಿಭೂತಿಯು,** ಭದ್ರಾದ ಗೋಮಯದಿಂದ **ಭಸಿತವು,** ಸುರಭಿಯ ಗೋಮಯದಿಂದ **ಭಸ್ಮವು,** ಸುಶೀಲಾದ ಗೋಮಯದಿಂದ **ಕ್ಷಾರವು,** ಸುಮನಾ ಗೋಮಯದಿಂದ **ರಕ್ಷೆಯು** ಎಂಬ ಐದು ವಿಧವಾದ ವಿಭೂತಿಗಳು ತಯಾರಾಗುತ್ತವೆ. ಐಶ್ವರ್ಯಪ್ರದವಾದುದರಿಂದ ವಿಭೂತಿ ಎಂದು, ಶಿವತತ್ವ ಪ್ರಕಾಶಕವಾದುದರಿಂದ ಭಸಿತ ಎಂದು, ಮನೋವಾಕ್ಕಾಯ ಜನ್ಯಗಳಾದ ಸರ್ವವಿಧ ಪಾಪಗಳನ್ನು ಭರ್ತ್ಸನ ( ಭಯೋತ್ಪಾದನ ) ಮಾಡುವದರಿಂದ ಭಸ್ಮ ಎಂದು, ತಾಪತ್ರಯಜನ್ಯವಾದ ವಿಪತ್ತುಗಳನ್ನು ನಾಶಮಾಡುವದರಿಂದ ಕ್ಷಾರ ಎಂದು, ಗ್ರಹ ಭೂತಪಿಶಾಚಾದಿ ಭಯದಿಂದ ರಕ್ಷಿಸುವ ಕಾರಣ ರಕ್ಷಾ ಎಂದು ಅನ್ವರ್ಥನಾಮಗಳು ಉಂಟಾಗಿರುತ್ತವೆ. ಶಿವಪೂಜಾದಿ ನಿತ್ಯ ಕರ್ಮದಲ್ಲಿ ವಿಭೂತಿಯನ್ನು, ನೈಮಿತ್ತಿಕ ಕಾರ್ಯದಲ್ಲಿ ಭಸಿತವನ್ನು, ಕಾಮ್ಯಕರ್ಮಗಳಲ್ಲಿ ಭಸ್ಮವನ್ನು, ಪ್ರಾಯಶ್ಚಿತ್ತ ಕಾರ್ಯ ದಲ್ಲಿ ಕ್ಷಾರವನ್ನು, ನಿತ್ಯಮುಕ್ತಿಯಲ್ಲಿ ರಕ್ಷೆಯನ್ನು ಧರಿಸತಕ್ಕದ್ದು.

ಭಸ್ಮವನ್ನು ತಯಾರಿಸುವ ರೀತಿಯು **ಕಲ್ಪ, ಅನುಕಲ್ಪ, ಉಪಕಲ್ಪ, ಅಕಲ್ಪ** ಎಂದು ನಾಲ್ಕು ಪ್ರಕಾರವಾಗಿರುತ್ತದೆ. ನಂದಾದಿ ಗೋವುಗಳ ಸಗಣಿಯನ್ನು ಅಂತರದಲ್ಲಿಯೇ ( ನೆಲಕ್ಕೆ ಬೀಳುವದಕ್ಕಿಂತ ಮುಂಚೆ ) ಸದ್ಯೋಜಾತ ಮಂತ್ರವನ್ನು ಹೇಳುತ್ತ ಹಿಡಿಯುವದು, ವಾಮದೇವ ಮಂತ್ರದಿಂದ ಉಂಡಿ ಮಾಡುವದು, ತತ್ಪುರುಷ ಮಂತ್ರದಿಂದ ಒಣಗಿಸುವದು, ಅಘೋರ ಮಂತ್ರದಿಂದ ದಹಿಸುವದು. ಈಶಾನ ಮಂತ್ರದಿಂದ ಶೋಧಿಸಿಟ್ಟುಕೊಳ್ಳುವದು ಇದಕ್ಕೆ **ಕಲ್ಪ** ಎಂಬ ಹೆಸರು, ಅಡವಿಯಲ್ಲಿ ಒಣಗಿದ ಗೋಮಯದಿಂ ( ಕಾಕುಳ್ಳಿನಿಂ ) ದ ತಯಾರ ಮಾಡುವದಕ್ಕೆ **ಅನುಕಲ್ಪ** ಎಂಬ ಹೆಸರು, ಅಂಗಡಿಯಲ್ಲಿ ದೊರೆಯುವ ಭಸ್ಮವನ್ನು ಬಿಳಿವಸ್ತ್ರದಲ್ಲಿ ಶೋಧಿಸಿ ಗೋಮೂತ್ರದಿಂದ ಉಂಡೆಕಟ್ಟಿ ಪುನಃ ಮೊದಲು ಹೇಳಿದ ಪ್ರಕಾರ ದಹಿಸಿ ಮಾಡುವದಕ್ಕೆ **ಉಪಕಲ್ಪ** ಎಂಬ ಹೆಸರು, ಮಂತ್ರಸಂಸ್ಕಾರವಿಲ್ಲದೆ ಅನ್ಯರಿಂದ

ತಯಾರ ಮಾಡಿದುದಕ್ಕೆ ಅಕಲ್ಪ ಎಂಬ ಹೆಸರು. ಭಸ್ಮದ ಉಪಯೋಗವು ಸ್ನಾನ, ಉದ್ಧೂಳನ, ತ್ರಿಪುಂಡ್ರಧಾರಣ ಎಂದು ಮೂರು ವಿಧ, ಈಶಾನ ಮಂತ್ರದಿಂದ ಮಸ್ತಕದಲ್ಲಿ ಐದುಸಾರೆ, ತತ್ಪುರುಷ ಮಂತ್ರದಿಂದ ಮುಖದಲ್ಲಿ ನಾಲ್ಕುಸಾರೆ, ಅಘೋರ ಮಂತ್ರದಿಂದ ಹೃದಯದಲ್ಲಿ ಎಂಟುಸಾರೆ, ವಾಮದೇವ ಮಂತ್ರದಿಂದ ನಾಭಿಯಲ್ಲಿ ಹದಿಮೂರು ಸಾರೆ, ಸದ್ಯೋಜಾತ ಮಂತ್ರದಿಂದ ಪಾದದವರೆಗೆ ಎಂಟು ಸಾರೆ, ಮೂಲಪ್ರಣವದಿಂದ ಸರ್ವಾಂತದಲ್ಲಿ ಸಂಪ್ರೋಕ್ಷಣ ಮಾಡಿಕೊಳ್ಳುವದಕ್ಕೆ ಭಸ್ಮಸ್ನಾನವೆನ್ನುತ್ತಾರೆ. ಇದೇ ರೀತಿ ಆ ಭಸ್ಮವನ್ನು ಎರಡೂ ಕೈಗೆ ಹಚ್ಚಿಕೊಂಡು ಮೈತುಂಬಾ ಸವರಿಕೊಳ್ಳುವದಕ್ಕೆ ಉದ್ಧೂಳನವೆನ್ನುತ್ತಾರೆ, ಬಲಗೈ ನಡುವಿನ ಮೂರು ಬೆರಳುಗಳಿಂದಾಗಲಿ, ಅನಾಮಿಕಾ ಮಧ್ಯಮ ಬೆರಳುಗಳಿಂದ ಅನುಲೋಮವಾಗಿ ಹೆಬ್ಬೆರಳಿನಿಂದ ವಿಲೋಮವಾಗಿ ಆಗಲಿ ಹದಿನೈದು ಅಥವಾ ೩೨ ಸ್ಥಾನಗಳಲ್ಲಿ ಧರಿಸುವದಕ್ಕೆ ತ್ರಿಪುಂಡ್ರಧಾರಣವೆನ್ನುತ್ತಾರೆ. ಯತಿಗಳಾದವರು ಯಾವಾಗಲೂ ಜಲಮಿಶ್ರವಿಲ್ಲದ ಭಸ್ಮವನ್ನು, ಗೃಹಸ್ಥರು ಯಾವಾಗಲೂ ಜಡಮಿಶ್ರವಾಗಿಯೂ, ಕನ್ಯೆಯರು, ಬ್ರಹ್ಮಚಾರಿಗಳೂ, ವಾನಪ್ರಸ್ಥರೂ ಇತರ ಪ್ರಾಕೃತರೂ ಸೂರ್ಯೋದಯ ದಿಂದ ಮಧ್ಯಾಹ್ನದ ಕೊನೆಯವರೆಗೆ ಜಲಮಿಶ್ರವಾಗಿಯೂ ಅನಂತರ ಕೇವಲ ಭಸ್ಮವನ್ನು ಧರಿಸತಕ್ಕದ್ದು.

| ಸಂಧಿ | ವಿಷಯ | ಪುಟ ೧೪೭-೧೯೨ |
|---|---|---|
| ೧೩ | ರುದ್ರಾಕ್ಷಧಾರಣ | ಪದ್ಯ ೨೧ |

**ಐಶ್ವರ್ಯಪ್ರದವಾದ ವಿಭೂತಿಯನ್ನು ಧರಿಸಿದವನು ಜ್ಞಾತಾ ಜ್ಞಾತವಾದ ಪಾಪವನ್ನು ನಾಶಮಾಡುತ್ತ ಶಿವಸಾಯುಜ್ಯ ವುಂಟುಮಾಡುವ ರುದ್ರಾಕ್ಷಗಳನ್ನು ಆಯಾ ಸ್ಥಾನಗಳಲ್ಲಿ ಧರಿಸ ಬೇಕೆಂದು ಗುರುವು ನಿರೂಪಿಸುವನು.**

ಪರಮಾತ್ಮನು ತ್ರಿಪುರದಹನ ಮಾಡುವ ಕಾಲಕ್ಕೆ ತನ್ನ ಸೂರ್ಯ, ಚಂದ್ರ, ಅಗ್ನಿನೇತ್ರಗಳನ್ನು ತೆರೆದು ನಿರೀಕ್ಷಿಸುವಾಗ ಆ ಕಣ್ಣುಗಳಿಂದ ನೀರಿನ ಹನಿಗಳು ಭೂಮಿಯ ಮೇಲೆ ಬಿದ್ದವು, ಅವೇ ರುದ್ರಾಕ್ಷಗಳಾಗಿರುತ್ತವೆ. ಬಲದ ಸೂರ್ಯ ನೇತ್ರದಿಂದ ಕೆಂಪು ಬಣ್ಣದ ಹನ್ನೆರಡು ಪ್ರಕಾರವಾದ, ಎಡದ ಚಂದ್ರನೇತ್ರದಿಂದ ಬಿಳೀ ಬಣ್ಣದ ಹದಿನಾರು ಪ್ರಕಾರವಾದ, ಮಧ್ಯದ ಅಗ್ನಿನೇತ್ರದಿಂದ ಕಪ್ಪು ಬಣ್ಣದ ಹತ್ತು ಪ್ರಕಾರವಾದ, ಅಂತು ಮೂವತ್ತೆಂಟು ಪ್ರಕಾರದ ರುದ್ರಾಕ್ಷಗಳು ಹುಟ್ಟಿದವು. ಇವುಗಳ ಸ್ಮರಣ ಮಾತ್ರದಿಂದ ಪಾಪವು ನಾಶವಾಗುತ್ತದೆ, ದರ್ಶನದಿಂದ ಸಂಚಿತಾದಿ

ಕರ್ಮತ್ರಯವು ತೊಲಗುವದು, ಮುಟ್ಟುವದರಿಂದ ಭವವು ನಷ್ಟವಾಗುವದು, ಧರಿಸು ವದರಿಂದ ರುದ್ರತ್ವವು ಪ್ರಾಪ್ತವಾಗುವದು. ರುದ್ರಾಕ್ಷಗಳ ದಾನದ ಮಹತ್ವವು ಹೇಳಲು ಸಾಧ್ಯವಿರುವದಿಲ್ಲ. ಬ್ರಹ್ಮ, ವಿಷ್ಣು, ಷಣ್ಮುಖ ಆದಿಶೇಷ ಇವರಿಗೂ ರುದ್ರಾಕ್ಷಗಳ ಮಹತ್ವ ವರ್ಣಿಸಲು ಸಾಧ್ಯವಿಲ್ಲ, ಉಳಿದವರ ಪಾಡೇನು. ಇಂಥ ರುದ್ರಾಕ್ಷಿಗಳನ್ನು ಧರಿಸುವ ಕ್ರಮವು ಹೇಗೆಂದರೆ, ಪಶ್ಚಿಮ ಚಕ್ರದಲ್ಲಿ ಒಂದು ಮುಖದ ಒಂದು ರುದ್ರಾಕ್ಷಿಯನ್ನು, ಶಿಖಾ ಚಕ್ರದಲ್ಲಿ ಎರಡು ಮುಖದ್ದು, ಒಂದು ಮೂರು ಮುಖದ್ದು ಒಂದು, ಹತ್ತು ಮುಖದ್ದು ಒಂದು ಈ ಮೂರನ್ನು, ಹನ್ನೊಂದು ಮುಖದ ಮೂವತ್ತಾರು ರುದ್ರಾಕ್ಷಿಗಳನ್ನು ತಲೆಯ ಸುತ್ತಲೂ, ಐದು, ಏಳು, ಹತ್ತು ಮುಖದ ಎರಡೆರಡು ಅಂತು ಆರು ರುದ್ರಾಕ್ಷಿಗಳನ್ನು ಒಂದೊಂದು ಕಿವಿಗೆ, ಅಥವಾ ಎರಡೂ ಕಿವಿಗೆ ಸೇರಿ ಆರು ಅರ್ಥಾತ್ ಒಂದೊಂದು ಕಿವಿಗೆ ಮೂರರಂತೆ, ಕಂಠದಲ್ಲಿ ಆರು ಮುಖದ ೧೬, ಎಂಟು ಮುಖದ ೧೬ ಅಂತು ಮೂವತ್ತೆರಡು ರುದ್ರಾಕ್ಷಿಗಳನ್ನು, ಎದೆಯ ಮೇಲೆ ನಾಲ್ಕು ಮುಖದ ಐವತ್ತು ರುದ್ರಾಕ್ಷಿಗಳನ್ನು, ಎರಡು ಬಾಹುಗಳಿಗೆ ಹದಿಮೂರು ಮುಖದ, ಹದಿನಾರು, ಹದಿನಾರು ರುದ್ರಾಕ್ಷಿಗಳನ್ನು, ಎರಡು ಮುಂಗೈಗೆ ಒಂಬತ್ತು ಮುಖದ ಹನ್ನೆರಡು ಹನ್ನೆರಡು ರುದ್ರಾಕ್ಷಿಗಳನ್ನು, ಯಜ್ಞೋಪವೀತ ಧರಿಸಿದಂತೆ ಹದಿನಾಲ್ಕು ಮುಖದ ೧೦೮ ರುದ್ರಾಕ್ಷಿಗಳನ್ನು ಧರಿಸತಕ್ಕದ್ದು. ಈ ರುದ್ರಾಕ್ಷಿಗಳು ಅತಿ ದೊಡ್ಡವು, ಅತಿ ಸಣ್ಣವು, ಹುಳ ಹತ್ತಿದವು, ಹಗುರಾದವು, ಮತ್ತೊಬ್ಬರಿಂದ ಧರಿಸಲ್ಪಟ್ಟವು ಆಗಿರಬಾರದು. ಬಂಗಾರ ವರ್ಣದ, ದುಂಡಾದ, ಮುಳ್ಳು (ಕೇಸರ) ಗಳುಳ್ಳ, ಸುಂದರಗಳಾದ ರುದ್ರಾಕ್ಷಿಗಳನ್ನು ಧರಿಸಬೇಕು.

| ಸಂಧಿ | ವಿಷಯ | ಪುಟ ೧೯೩–೨೦೫ |
|---|---|---|
| ೧೪ | ಪಂಚಾಕ್ಷರೀಜಪ | ಪದ್ಯ ೪೯ |

ಭಸ್ಮ ರುದ್ರಾಕ್ಷಿಗಳನ್ನು ಧರಿಸಿದವನು ಸಂಸಾರವೆಂಬ ಸಾಗರ ವನ್ನು ದಾಟಲಿಕ್ಕೆ ಹಡಗಿನಂತೆ ಸಹಾಯಕವಾದ ಪಂಚಾಕ್ಷರೀ ಮಂತ್ರವನ್ನು ಜಪಿಸಬೇಕು.

ಈ ಪಂಚಾಕ್ಷರೀ ಮಂತ್ರವು—ಮೂಲ ಪಂಚಾಕ್ಷರೀ, ಮಾಯಾ ಪಂಚಾಕ್ಷರೀ, ಸೂಕ್ಷ್ಮ ಪಂಚಾಕ್ಷರೀ, ಸ್ಥೂಲ ಪಂಚಾಕ್ಷರೀ, ಪ್ರಸಾದ ಪಂಚಾಕ್ಷರೀ ಎಂಬ ಐದು ವಿಧವಾಗಿರುತ್ತದೆ. ಈ ಪ್ರಪಂಚದಲ್ಲಿ ಪಂಚಬ್ರಹ್ಮವೇ ಮೊದಲಾದ ಐದೈದಾದ ತತ್ವಗಳು ಎಷ್ಟಿರುವವೋ ಅವೆಲ್ಲವೂ ಪಂಚಾಕ್ಷರೀ ಮಂತ್ರದ ಪಂಚ ಪ್ರಣವಗಳ ಸ್ವರೂಪಗಳಾಗಿರುವವು. ಓಂಕಾರವು ಪರಶಿವ ಸ್ವರೂಪವಾಗಿರುವದು. ಹೇಗೆಂದರೆ,

## ಮೂಲ ಪಂಚಾಕ್ಷರೀ ( ಷಡಕ್ಷರೀ ) ಮಂತ್ರ :

| | ಓಂ | ಯ | ವಾ | ಶಿ | ಮಃ | ನ |
|---|---|---|---|---|---|---|
| ಆತ್ಮರು : | ಶಿವ | ಕ್ಷೇತ್ರಜ್ಞ | ಕರ್ತಾರ | ಭಾವ | ಚೈತನ್ಯ | ಅಂತರ್ಯಾಮಿ |
| ಶಕ್ತಿಗಳು : | ಅನಂತಶಕ್ತಿ | ಅಲುಪ್ತಶಕ್ತಿ | ಸ್ವತಂತ್ರಶಕ್ತಿ | ಅನಾದಿಬೋಧಶಕ್ತಿ | ನಿತ್ಯತೃಪ್ತಿಶಕ್ತಿ | ಸರ್ವಜ್ಞಶಕ್ತಿ |
| ಕಾರಣೇಶರು : | ಭವ | ಮೃಡ | ಹರ | ಮಹೇಶ್ವರ | ಈಶ್ವರ | ಸದಾಶಿವ |
| ಭೂತಗಳು : | ಆತ್ಮ | ಆಕಾಶ | ವಾಯು | ಅಗ್ನಿ | ಜಲ | ಪೃಥಿವೀ |
| ಸ್ಥಲಗಳು : | ಐಕ್ಯ | ಶರಣ | ಪ್ರಾಣಲಿಂಗಿ | ಪ್ರಸಾದಿ | ಮಹೇಶ್ವರ | ಭಕ್ತ |
| ಚಕ್ರಗಳು : | ಆಜ್ಞಾ | ವಿಶುದ್ಧಿ | ಅನಾಹತ | ಮಣಿಪೂರಕ | ಸ್ವಾದಿಷ್ಠಾನ | ಆಧಾರ |
| ಲಿಂಗಗಳು : | ಮಹಾಲಿಂಗ | ಪ್ರಸಾದಲಿಂಗ | ಜಂಗಮಲಿಂಗ | ಶಿವಲಿಂಗ | ಗುರುಲಿಂಗ | ಆಚಾರಲಿಂಗ |
| ಕಲೆಗಳು : | ಶಾಂತ್ಯತೀತೋತ್ತರೆ | ಶಾಂತ್ಯತೀತ | ಶಾಂತಿ | ವಿದ್ಯಾ | ಪ್ರತಿಷ್ಠಾ | ನಿವೃತ್ತಿ |
| ಸಾದಾಖ್ಯಗಳು : | ಮಹಾಸಾದಾಖ್ಯ | ಶಿವಸಾದಾಖ್ಯ | ಅಮೂರ್ತಸಾದಾಖ್ಯ | ಮೂರ್ತಸಾದಾಖ್ಯ | ಕರ್ತೃಸಾದಾಖ್ಯ | ಕರ್ಮಸಾದಾಖ್ಯ |
| ಶಕ್ತಿಗಳು : | ಚಿಚ್ಛಕ್ತಿ | ಪರಾಶಕ್ತಿ | ಆದಿಶಕ್ತಿ | ಇಚ್ಛಾಶಕ್ತಿ | ಜ್ಞಾನಶಕ್ತಿ | ಕ್ರಿಯಾಶಕ್ತಿ |
| ಭಕ್ತಿಗಳು : | ಸಮರಸಭಕ್ತಿ | ಆನಂದಭಕ್ತಿ | ಅನುಭವಭಕ್ತಿ | ಸಾವಧಾನಭಕ್ತಿ | ನಿಷ್ಠಾಭಕ್ತಿ | ಶ್ರದ್ಧಾಭಕ್ತಿ |

| | | | | | | |
|---|---|---|---|---|---|---|
| ಹಸ್ತಗಳು : | ಸದ್ಭಾವ | ಸುಜ್ಞಾನ | ಸುಮನ | ನಿರಹಂಕಾರ | ಸುಬುದ್ಧಿ | ಸುಚಿತ್ತ |

**ಮುಖ ( ಇಂದ್ರಿಯ ) ಗಳು :**

| | | | | | | |
|---|---|---|---|---|---|---|
| | ಹೃದಯ | ಶ್ರೋತ್ರ | ತ್ವಕ್ | ಚಕ್ಷುಃ | ರಸನಾ | ಘ್ರಾಣ |
| ಪದಾರ್ಥಗಳು : | ತೃಪ್ತಿ | ಶಬ್ದ | ಸ್ಪರ್ಶ | ರೂಪ | ರಸ | ಗಂಧ |

**ಪ್ರಾಣವಾಯುಗಳು :**

| | | | | | |
|---|---|---|---|---|---|
| ನಾಗಪಂಚಕ | ಸಮಾನ | ಉದಾನ | ವ್ಯಾನ | ಅಪಾನ | ಪ್ರಾಣ |

**ಕ್ರಿಯೆ ( ಕರ್ಮೇಂದ್ರಿಯ ) ಗಳು :**

| | | | | | |
|---|---|---|---|---|---|
| ಮನನ | ವಾಕ್ | ಪಾಣಿ | ಪಾದ | ಗುಹ್ಯ | ಗುದ |

**ಇಷ್ಟಲಿಂಗದ ಭಾಗಗಳು :**

| | | | | | |
|---|---|---|---|---|---|
| ಗೋಳಕ ( ಬಾಣ ) | ನಾಳ | ವರ್ತುಳ | ಗೋಮುಖ | ಮಧ್ಯ | ವೃತ್ತ ( ಅಧಃಪೀಠ ) |

**ಇಷ್ಟಲಿಂಗದ ರೂಪಗಳು :**

| | | | | | | |
|---|---|---|---|---|---|---|
| | ಶಿರಸ್ಸು | ಬಲಭುಜ | ಎಡಭುಭ | ಮಧ್ಯ ( ನಡ ) | ಬಲಪಾದ | ಎಡಪಾದ |
| ಅವಯುವ : | ಹಣೆ | ಮುಖ | ಕಂತ್ತಿಗೆ | ಎದೆ | ನಾಭಿ | ಪಾದ |

| ಸಂಧಿ | ವಿಷಯ | ಪುಟ ೧೦೬–೧೧೭ |
|---|---|---|
| ೧೫ | ಭಕ್ತ | ಪದ್ಯ–೮೫ |

**ಗುರುವಿಗೆ ತನುವನ್ನು, ಲಿಂಗಕ್ಕೆ ಪ್ರಾಣ (ಮನ) ವನ್ನು, ಜಂಗಮಕ್ಕೆ ಧನವನ್ನು ನಿರ್ವಂಚನೆಯಿಂದ ಸಮರ್ಪಿಸಿ ಮೂರರಲ್ಲಿ ಸಮಾನವಾದ ಭಕ್ತಿಯುಳ್ಳವನೇ ಭಕ್ತನು.**

ಭಕ್ತಸ್ಥಲದಲ್ಲಿ ವರ್ತಿಸುವವನಿಗೆ ಆರು ಲಿಂಗಗಳಲ್ಲಿ ಆಚಾರಲಿಂಗವೇ ಮುಖ್ಯವಾದುದು. ಈ ಆಚಾರ ಲಿಂಗದಲ್ಲಿ ಉಳಿದೈದು ಲಿಂಗಗಳು ಅಂತರ್ಭೂತಗಳಾಗುತ್ತವೆ. ಇದರಂತೆ ಆರು ಅಂಗ (ಸ್ಥಲ) ಗಳಲ್ಲಿ ಭಕ್ತಸ್ಥಲ ಮುಖ್ಯವಾಗಿದ್ದು, ಇದರಲ್ಲಿ ಉಳಿದೈದು ಸ್ಥಲಗಳು ಅಂತರ್ಭೂತಗಳಾಗುತ್ತವೆ. ಆದುದರಿಂದಲೇ ಭಕ್ತನು "ಆಚಾರಲಿಂಗಪ್ರಾಣಿ" ಎನ್ನಿಸಿಕೊಳ್ಳುವನು.

ಗುರುವಿನಿಂದ ಪ್ರಾಪ್ತವಾದ ಲಿಂಗವನ್ನು ಒಳ್ಳೇ ಶ್ರದ್ಧೆಯಿಂದ ಪೂಜಿಸುವ ಭಕ್ತನು, ಆ ಲಿಂಗದ ಸಂತೃಪ್ತಿಗಾಗಿ ಲಿಂಗದ ಮುಖವಾದ ಜಂಗಮನ ಸಂಗವನ್ನು ಬಯಸುವನು. ಈ ಭಕ್ತ–ಜಂಗಮರ ಸಂಗಮವು ಕಬ್ಬಿನ ಮೇಲೆ ಜೇನಿಟ್ಟಂತೆ ಆಗುವದು. ಈ ಭಕ್ತ ಜಂಗಮರ ಸಂಗಮವಿದ್ದಲ್ಲಿ ಹೊನ್ನು ಹೆಣ್ಣು ಮಣ್ಣು ಈ ಮೂರು ವಿರೋಧವಾಗಿ ನಿಂತು ಕಾಡಲಾರವು. ಈ ಭಕ್ತ ಜಂಗಮರ ಯೋಗವು, ಕಾಯಜೀವರ ಯೋಗದಂತೆ ವಿರಾಜಿಸುವದು. ನೆನೆಸುವ ಚಿಂತಾಮಣಿಯ ಪುತ್ಥಳಿಯು ನಡೆದು ಬರುವಂತೆ ಬರುತ್ತಿರುವ ಜಂಗಮನನ್ನು ಕಂಡಕೂಡಲೇ ತನುವಿನಲ್ಲಿ ರೋಮಾಂಚವಾಗಿ, ಮನವು ಆನಂದದಿಂದ ತುಂಬಿ, ಆ ಆನಂದೋದಕದ ಕೋಡಿ ವರಿದು, ಮನಮನ ಬೆರೆದು, ಭಕ್ತಿಯಿಂದ ವಂದಿಸಿ ಬರಮಾಡಿಕೊಂಡು, ಆತನ ಸೇವಾ ಸತ್ಕಾರಗಳನ್ನು ನಿಷ್ಠೆಯಿಂದ ಮಾಡಿ ಜಂಗಮನ ಪಾದೋದಕ ಪ್ರಸಾದಗಳನ್ನು ಸೇವಿಸುವವನು ಭಕ್ತನು.

ಕನಸಿನಲ್ಲಿ ಜಂಗಮನನ್ನು ಕಂಡು ಓಹೋ ಇಂದು ಜಂಗಮ ದರ್ಶನವಾಯಿತು ಎಂದು ಆನಂದದಿಂದ ಕುಣಿಯುವವರ, ಮನೆಗೆ ನಿಜವಾದ ಜಂಗಮನು ಬರಲು ಕಂಡು ಅಹಹ ಕೆಟ್ಟವು ಕೆಟ್ಟೆವು ಏನು ಮಾಡಬೇಕು, ಮನೆಯಲ್ಲಿ ಏನೂ ಇರುವದಿಲ್ಲ. ಏನು ಬೇಡುವನೋ ಎಂದು ಗುರುಗುಟ್ಟುತ್ತ ಮೋರೆ (ಮುಖ) ಯನ್ನು ಉರಿಸುತ್ತ ಕೆಟ್ಟಕಣ್ಣಿನಿಂದ ನೋಡುವಂತಹ, ಮತ್ತು ಕುಟಿಲ, ದುರ್ಗುಣಿ, ದುರಾರೋಪಿ, ದ್ವೇಷಿ, ಪಂಕ್ತಿಭೇದ ಮಾಡುವ ಡಾಂಬಿಕ ಕಡುಲೋಭಿಯಾದವರಿಗೆ ಭಕ್ತಿಯು ಅಳವಡಲಾರದು. ಲಿಂಗಕ್ಕೆ ಮನವನ್ನು ನಿಜವಾಗಿ ಒಪ್ಪಿಸಿದ್ದರೆ ತನ್ನ ಸತಿಯನ್ನು ಪರರು ನೆನೆದರೆ ಕಳವಳಗೊಳ್ಳದಂತಿರಬೇಕು, ಗುರುವಿಗೆ ತನುವನ್ನು

ನಿಜವಾಗಿ ಒಪ್ಪಿಸಿದ್ದರೆ ಕತ್ತರಿಸಿದರೂ ತಾಪಗೊಳ್ಳದಂತಿರಬೇಕು, ಜಂಗಮಕ್ಕೆ ಧನವನ್ನು ನಿಜವಾಗಿ ಒಪ್ಪಿಸಿದ್ದರೆ ಎಂಥಾ ತೊಂದರೆ ನಿಷ್ಠುರಾದಿಗಳು ಬಂದರೂ ಸಹಿಸಿಕೊಳ್ಳಬೇಕು. ಇವೆಲ್ಲವೂ ನುಡಿಯಲ್ಲಿ ಮಾತ್ರ ಇದ್ದು ಕಾರ್ಯದಲ್ಲಿ ಇರದಿದ್ದರೆ ಅಂಥವರಿಗೆ ಭಕ್ತಿಯು ಸಿದ್ಧಿಸಲಾರದು. ಮೋಕ್ಷವನ್ನು ಬಯಸುವವನಿಗೆ ಪ್ರಸಾದವೂ ಇವನು ನನ್ನವನು ಇವನು ಪರನು ಎಂದು ಭೇದ ಮಾಡುವವನಿಗೆ ಜಂಗಮನು, ಕಣ್ಣಿನಿಂದ ನೋಡುತ್ತ ಶಿವನನ್ನು ಕೂಡಿಕೊಳ್ಳುವೆನೆಂಬುವವನಿಗೆ ಶಿವಲಿಂಗವು, ನಾಶರಹಿತವಾದ ಪರತತ್ವವು ಭೂಮಿಯಲ್ಲುಂಟೆಂದು ಹೇಳುವವನಿಗೆ ಗುರುವು, ಈ ನಾಲ್ಕು ಸಿದ್ಧಿಸುವದಿಲ್ಲ.

ತನುವಿನಲ್ಲಿ ನಿರ್ಮೋಹಿಯೂ, ಮನದಲ್ಲಿ ಶಿವಜ್ಞಾನವುಳ್ಳವನೂ, ಧನವನ್ನು ಗುರು, ಲಿಂಗ, ಜಂಗಮರ ಸೇವಾ ಸತ್ಕಾರಾದಿಗಳಿಗೆ ವಿನಿಯೋಗಿಸುತ್ತ ಅವರ ವರ ಪ್ರಸಾದವನ್ನು ಅನುಭವಿಸುತ್ತ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ ಈ ಮೂರನ್ನು ಒಂದೇ ಎಂದು ಭಾವಿಸುತ್ತ ಅವುಗಳಲ್ಲಿ ನಿರ್ವಂಚನೆಯಿಂದ ದಾಸೋsಹಂ ಭಾವವುಳ್ಳ, ಈ ಮೂವರ ಮಹಾ ಪ್ರಸಾದವೇ ಶಿವನ ನಿಜಪದವೆಂದು ತಿಳಿದವನು ಭಕ್ತನೆನಿಸಿ ಕೊಳ್ಳುವನು. ಅಂಗವನ್ನು ಅಂಗೈಯೊಳಗಿನ ಇಷ್ಟಲಿಂಗಕ್ಕರ್ಪಿಸಿ, ಅಂಗದಿಂದ ಕೂಡಿದ ಮನವನ್ನು ಪ್ರಾಣಲಿಂಗಕ್ಕರ್ಪಿಸಿ, ಇಂದ್ರಿಯಗಳನ್ನು, ವಿಷಯಗಳನ್ನು ಲಿಂಗೇಂದ್ರಿಯಗಳಿಗೆ ಸಲ್ಲಿಸಿ, ಶುದ್ಧ, ಸಿದ್ಧ, ಪ್ರಸಿದ್ಧ ಎಂಬ ಪ್ರಸಾದ ಸೇವನೆಯಿಂದ ಪ್ರಸಾದಕಾಯನಾಗಿ ಗುರುಲಿಂಗ ಜಂಗಮರ ಪಾದೋದಕವನ್ನು ಸೇವಿಸುವವನ ಸಂಚಿತ, ಆಗಾಮಿ ಪ್ರಾರಬ್ಧಗಳೆಂಬ ಕರ್ಮತ್ರಯವು ಹೇಳಹೆಸರಿಲ್ಲದೆ ಓಡಿಹೋಗುವದು.

| ಸಂಧಿ | ವಿಷಯ | ಪುಟ ೨೨೮-೨೩೩ |
|---|---|---|
| ೧೬ | ಮಾಹೇಶ್ವರ | ಪದ್ಯ-೧೧೦ |

> ಗುರುವಿನ ಚರಣಕಮಲ ಸೇವೆಯಲ್ಲಿಯೂ, ಲಿಂಗಪೂಜೆ ಯಲ್ಲಿಯೂ, ಜಂಗಮಾರಾಧನೆಯಲ್ಲಿಯೂ, ಪ್ರಸಾದ ದಲ್ಲಿಯೂ ಒಳ್ಳೆ ನಿಷ್ಠೆಯಿಂದ ವರ್ತಿಸುವವನು ಮಾಹೇಶ್ವರ ಸ್ಥಲದ ಆಚರಣೆಯುಳ್ಳವನೆನಿಸಿಕೊಳ್ಳುವನು.

ಈ ಮಹೇಶಸ್ಥಲದಲ್ಲಿರುವವನಿಗೆ, ಓಂಕಾರವೇ ತನುವು, ಅಕ್ಷಯವಾದ ಶಿವ ಲಿಂಗವೇ ಜೀವ, ಅಖಿಲಾಕ್ಷರಗಳೇ ಪಂಚೇಂದ್ರಿಯಗಳು, ಸ್ವರಯುಕ್ತವಾದ ನಾದವೇ ಕಾರಣತನುವು, ವಿಕಲಾಕ್ಷರಗಳಿಂದ ಕೂಡಿದ ಬಿಂದುವೇ ಸೂಕ್ಷ್ಮ ತನುವು, ವ್ಯಾಪಕ ವರ್ಣಗಳಿಂದ ಯುಕ್ತವಾದ ಕಳೆಯೇ ಸ್ಥೂಲತನುವು. ಇವನ, ಜನನವು ಗುರುವಿಂದ, ಲಯವು ಶಿವಲಿಂಗದಲ್ಲಿ, ಇವನಿಗೆ, ಗುರುಭಕ್ತಿಯಲ್ಲಿ ಆನಂದವೂ, ಸ್ವಸ್ವರೂಪವಾದ

ಇಷ್ಟ, ಪ್ರಾಣ ಭಾವ ಲಿಂಗಗಳಲ್ಲಿ ಮೋಹವು, ಗುರುಲಿಂಗಜಂಗಮರ ತೀರ್ಥಪ್ರಸಾದಗಳ ಸೇವನದಿಂದ ಇವನ ಷಡ್ಭಾವವಿಕಾರಗಳೂ, ವಿಷಯದುರ್ಭಾವನೆಯು ನಷ್ಟವಾಗುವದು, ಜ್ಞಾನಗುರುವಿಗಿಂತಲೂ ಹೆಚ್ಚಿನದಾದ ತತ್ವವು ಮತ್ತೊಂದಿಲ್ಲವೆಂದು ತಿಳಿದು ಇವನು ಪೂಜಿಸುತ್ತಿರುವನು ಕಾಯದ ಕಳವಳವು ನಷ್ಟವಾಗದೆ, ಮನಸ್ಸಿನಲ್ಲಿಯ ಕೆಟ್ಟಶೋಕ ಮೋಹಗಳು ಅಡಗದೆ, ಮಾಯಾ ಜನ್ಯಗಳಾದ ಪ್ರಾಣದ ಕ್ಷುತ್, ತೃಷೆಗಳು ನಿವೃತ್ತಿ ಯಾಗದೆ ಸುಮ್ಮನೇ ಕಾಯ ವಾಕ್ ಮನಸ್ಸುಗಳೆಂಬ ತ್ರಿಕರಣಗಳಿಂದ ಗುರುವಿಗೆ ತನುವನ್ನು ಲಿಂಗಕ್ಕೆ ಮನ ( ಪ್ರಾಣ ) ವನ್ನು ಜಂಗಮಕ್ಕೆ ಧನವನ್ನು ಸಮರ್ಪಿಸಿ ಅವುಗಳನ್ನು ಪೂಜಿಸುತ್ತಿರುವೆನೆಂಬುದು ಭ್ರಾಂತಿಯಲ್ಲದೆ ನಿಜವಾದುದಲ್ಲ, ಮತ್ತು ಆಯಾ ಇಂದ್ರಿಯಗಳ ವಿಷಯಗಳೆಲ್ಲವನ್ನು ಸುಟ್ಟುಬಿಡದೆ, ಮಾಯಾ ಲಸ್ಯಮದಗಳನ್ನು ಬಿಟ್ಟುಬಿಡದೆ, ಸತ್ವರಜಸ್ತಮೋಗುಣಗಳನ್ನು ಕುಟ್ಟದೆ, ಕಾಮಕ್ರೋಧಾದಿ ಷಡ್ರಿಪು ಗಳ ಬಾಯನ್ನು ಕಟ್ಟದೆ, ಅಂತಃಕರಣಗಳನ್ನು ತಡೆಯದೆ, ಎಲ್ಲಾ ದುರ್ಗುಣಗಳನ್ನು ಹಿಮ್ಮೆಟ್ಟಿಸದೆ, ಲಿಂಗವನ್ನು ಮನವು ಮುಟ್ಟದೆ ಇರುವವನಿಗೆ ಗುರುಲಿಂಗ ಜಂಗಮ ಭಕ್ತಿಯಲ್ಲಿ ನಿಷ್ಠೆಯು ಎಂದೂ ಅಳವಡಲಾರದು.

ಶ್ರೀಗುರುವು ಕರುಣೆಯಿಂದ ಚಿತ್ಕಳೆಯನ್ನು ಭಾವ, ಮನ, ನಯನಗಳೊಳು ನೆಲೆ ಗೊಳಿಸುತ್ತ ತಂದು ಇಷ್ಟಲಿಂಗದಲ್ಲಿ ಸೇರಿಸಿ ಕರಕಮಲಕ್ಕೆಕೊಟ್ಟಂದಿನಿಂದ ಪರಶಿವನು ಈ ಇಷ್ಟಲಿಂಗದಲ್ಲಿ ಎಡೆ ಬಿಡದೆಯಾವಾಗಲೂ ನೆಲೆಸಿರುವುದರಿಂದ ಆಹ್ವಾನಮಾಡುವ ಪ್ರಸಂಗವೇ ಇರುವದಿಲ್ಲ, ಆಹ್ವಾನವೇ ಇಲ್ಲದಾಗ ವಿಸರ್ಜನಮಾಡುವ ಕಾರಣವಿಲ್ಲ.

ದೇಹಲಿಂಗಗಳ ಸಂಬಂಧವು ಹೀಗೆ—ಮೋಹ, ವಿನಯ, ಭಯ, ಕಿಂಕುರ್ವಾಣ, ಇಷ್ಟಲಿಂಗಭಕ್ತಿ ಈ ಐದರ ಸಮರಸವೇ ಆಚಾರಲಿಂಗವು. ಸ್ನೇಹ, ನಿಷ್ಠಾಲತೆ, ನಿರ್ಣಯ, ದೃಢಮನಸ್ಸು, ವಿಶ್ವಾಸ ಈ ಐದರ ಸಮರಸವೇ ಗುರುಲಿಂಗವು. ಸುಜ್ಞಾನ ಸಜ್ಜನತನ, ಸುಸಾಹಿತ್ಯ, ಸುವಿಧಾನ, ಪ್ರಸನ್ನತೆ ಈ ಐದರಸಮರಸವೇ ಶಿವಲಿಂಗವು. ಅಂತರ್ದೃಷ್ಟಿ, ಜ್ಞಾನೋದಯ, ಸೌಮ್ಯ ಹೃದಯ, ಸ್ವಾನುಭವ, ಪ್ರಾಣೇಶ್ವರರನು ಸಂಧಾನ ಈ ಐದರಸಮರಸವೇ ಜಂಗಮ ಲಿಂಗವು. ಪರವಶ, ಏಕಾಗ್ರತೆ, ಸುಚಿತ್ತ, ಧ್ಯಾನಧಾರಣಾದಿ ಉತ್ತರಯೋಗ, ಸಚ್ಚಿದಾನಂದ, ಈ ಐದರಸಮರಸವೇ ಪ್ರಸಾದ ಲಿಂಗವು. ಮನೋಲಯ, ನಾದಾದ್ವೈತ, ದಿವ್ಯಜ್ಞಾನ, ಅನ್ಯವ್ಯವಹಾರ ಶೂನ್ಯತೆ, ಭೋಗವಿರತಿ, ಈ ಐದರಸಮರಸವೇ ಮಹಾಲಿಂಗವು. ಈ ವಿಧವಾಗಿ ಮೂವತ್ತು ಅವಯವಗಳಿಂದ ಕೂಡಿಕೊಂಡಿರುವ ಇಷ್ಟಲಿಂಗವೇ ಮೂರು ಲೋಕಗಳಲ್ಲಿ ಚೇತನ ವಾಗಿರುವದು. ಪರಿಪಕ್ವ ಹೃದಯರಾದವರಲ್ಲಿಯ ಮಾಯೆ ಎಂಬ ಕತ್ತಲೆಯನ್ನು ಓಡಿಸುವಲ್ಲಿ ಇದು ಸೂರ್ಯನಂತೆ ಇರುವದು, ಆದ ಕಾರಣ, ಜ್ಞಾನ ವಿಶಿಷ್ಟವಾದ ಕ್ರಿಯೆಯಿಂದ ಈ ಇಷ್ಟಲಿಂಗವನ್ನು ನಿಷ್ಠೆಯಿಂದ ಪೂಜಿಸುವವನು ಮಾಹೇಶ್ವರಸ ಲಾಚಾರವುಳ್ಳವನಾಗುವನು.

ಶಿಷ್ಯ–ಗುರುದೇವ "ಸರ್ವಂ ಖಲ್ವಿದಂ ಬ್ರಹ್ಮ" ಅಯಮಾತ್ಮಾ ಬ್ರಹ್ಮ ಅಣೋರಣೀಯಾನ್ ಮಹತೋಮಹೀಯಾನ್ ಇತ್ಯಾದಿ ಶ್ರುತಿ ಪ್ರಮಾಣಾನುಸಾರ ವಾಗಿ ಸಚ್ಚಿದಾನಂದ ನಿತ್ಯಪರಿಪೂರ್ಣವಾದ ಮಹಾಲಿಂಗ ಸ್ವರೂಪವೇ ಜಗತ್ತಾಗಿರುವಾಗ ಆ ಮಹಾಲಿಂಗದ ಉದರದಲ್ಲಿರುವ ಮಾನವನು ಜಲ ಗಂಧ ಪತ್ರಪುಷ್ಪಾದಿಗಳಿಂದ ಪೂಜಿಸಿ ನೈವೇದ್ಯ ಸಮರ್ಪಿಸುವ ಬುದ್ಧಿಯನ್ನು ಮಾಡುವದು ಮೂರ್ಖತನದ್ದಾಗ ಬಹುದು. ಜಗತ್ತಿಗೂ ಬ್ರಹ್ಮಕ್ಕೂ ಏಕತ್ವವುತಾನಾಗಿಯೇ ಸಿದ್ಧವಾಗಿರುವದಲ್ಲವೆ.

ಗುರು–ಸುಕುಮಾರಮತಿಯಾದ ಶಿಷ್ಯನೆ? ಶ್ರುತಿಗಳ ಅರ್ಥವನ್ನು ಚನ್ನಾಗಿ ಮಾಡಿಕೊ ಭೂಮಿಯಲ್ಲಿ ಬಂಗಾರವಿರುವದು, ಹಾವಿನಲ್ಲಿ ವಿಷವಿರುವದು ಎಂದು ಹೇಳಿದ ಮಾತ್ರಕ್ಕೆ ಅವು ಎಲ್ಲಾ ಕಡೆಯಲ್ಲಿಯೂ ಇರುತ್ತವೆಯೊ? ಪರಿಪೂರ್ಣನೂ ವ್ಯಾಪಕನೂ ಆದ ಪರಶಿವನು ಎಲ್ಲ ಕಡೆಯಲ್ಲಿರುವನೆಂದರೆ ಹೇಗಿರುವನೆಂಬುದನ್ನು ಸ್ವಲ್ಪ ವಿಚಾರಿಸು "ಯಾ ತೇ ರುದ್ರ ಶಿವಾ ತನೂರಘೋರಾಪಾಪಕಾಶಿನೀ" ಎಂಬ ಶ್ರುತಿ ಪ್ರಮಾಣಾನುಸಾರವಾಗಿ, ಪಂಚಭೂತಮಯಗಳಾದ ಎಲ್ಲ ಮರಗಳಲ್ಲಿ ಬೆಂಕಿಯಿದ್ದರೂ ವ್ಯಕ್ತವಾಗದೆ ಬನ್ನಿಮರದಲ್ಲಿ ಸ್ಫುಟವಾಗಿ ತೋರುವಂತೆ, ಚಂದ್ರಕಾಂತ ಶಿಲೆಯಲ್ಲಿರುವ ಜಲವು ಚಂದ್ರನ ಸಂಯೋಗವಾದಾಗ ಹೊರಬರುವದಲ್ಲದೆ ಅನ್ಯ ಸಂಬಂಧವಾದಾಗ ವ್ಯಕ್ತವಾಗದಿರುವಂತೆ, ಮಲತ್ರಯ ನಾಶದಿಂದ ಪಾಪ ರಹಿತರಾದ ಮಾನವರಲ್ಲಿ ಶಿವನು ವ್ಯಕ್ತರೂಪದಿಂದಿರುವನು ಉಳಿದ ಕಡೆಯಲ್ಲಿ ಅವ್ಯಕ್ತರೂಪದಿಂದಿರುವನು ಅಂತೆಯೇ ಜಗತ್ತಿಗೆ ಮಹಾ ಸಂತೃಪ್ತಿಯು ಎಂದೂ ಆಗುವಂತಿಲ್ಲ ಆದಕಾರಣ ನಿಷ್ಠಾ ಭಕ್ತಿಯುಳ್ಳ ಮಾಹೇಶ್ವರಸ್ಥಲಾಚಾರವುಳ್ಳವನು ತನ್ನಲಿಂಗನಿಷ್ಠೆಗೆ ಕೊರತೆಯಾಗು ವುದರಿಂದ ಶಿವನು ಸರ್ವಗತನೆಂಬುದನ್ನು ನಿರಾಕರಿಸುವನು. ಇದರಂತೆಯೇ ಭೂಮಿ, ಜಲ, ಅಗ್ನಿ, ವಾಯು, ಆಕಾಶ, ಆತ್ಮ ( ಯಜಮಾನ ) ಸೂರ್ಯ, ಚಂದ್ರ ಎಂಬ ಬೃಹದಾರಣ್ಯಕದಲ್ಲಿ ಹೇಳಿದ ಅಷ್ಟ ಮೂರ್ತಿತ್ವವು, ಶಿವನು ಅಧಿಷ್ಠಾತೃವಾಗಿರು ವದರಿಂದ ಉಕ್ತವಾಗಿದೆ ಅಭೇದದಿಂದ ಹೇಳಲ್ಪಟ್ಟುದಲ್ಲ. ಶಿವನಿಗೆ ಎಂಟೂ ಶರೀರವಾಗಿರುವುದರಿಂದಲೂ, ಎಂಟರಲ್ಲಿ ಆತ್ಮನು ಅಜ್ಞನಾಗಿಯೂ, ಉಳಿದೇಳು ಜಡಾನಿತ್ಯಾಚೇತನಗಳಾಗಿಯೂ ಇರುವದರಿಂದ ಮಾಹೇಶ್ವರನು ಅಷ್ಟಮೂರ್ತಿ ಗಳನ್ನು ನಿರಾಕರಿಸಿ ತನ್ನ ಇಷ್ಟಲಿಂಗದಲ್ಲಿಯೇ ನಿಷ್ಠೆಯುಳ್ಳವನಾಗಿರುವನು.

ಸಮುದ್ರದಲ್ಲಿ ವಾಯುವಿನ ಚಲನದಿಂದ ತೆರೆ, ನೊರೆ, ಬುದ್ಬುದಾದಿಗಳುಂಟಾ ದರೂ ಅವೆಲ್ಲವೂ ಸಮುದ್ರಕ್ಕಿಂತಲೂ ಹೇಗೆ ಭಿನ್ನಗಳಾಗಿಲ್ಲವೊ ಅದರಂತೆ, ಆತ್ಮನಃ ಆಕಾಶಃ ಸಂಭೂತಃ, ಇತ್ಯಾದಿ ಶ್ರುತಿ ಪ್ರಮಾಣಾನುಸಾರ ಸಚ್ಚಿದಾನಂದ ಸ್ವರೂಪವಾದ ಬ್ರಹ್ಮದಿಂದ ನಾಮ,ರೂಪ, ಕ್ರಿಯೆಗಳಿಂದ ತೋರುವ ಶಕ್ತಿಯ ವಿಕಾಸರೂಪವಾದ ಈ ಜಗತ್ತು ಪರಶಿವನಿಗಿಂತಲೂ ಭಿನ್ನವಾದುದಲ್ಲ. ಶಿವನು ಜಗನ್ಮಯನಾಗಿಯೇ ಇದ್ದಾನೆಂಬ ತಿಳುವಳಿಕೆಯುಳ್ಳವನಾದರೂ ಐಕ್ಯ ಸ್ಥಲದಲ್ಲಿಯ ಐಕ್ಯನ ಸ್ಥಾನವನ್ನು ಹೊಂದುವ

ವರೆಗೆ ಶಿವನ ಪೂಜಾಧ್ಯಾನಾದಿಗಳಲ್ಲಿ ಅದ್ವೈತವನ್ನು ಮಾನಿಸಡೆ. ಶಿರವು ಕತ್ತರಿಸಿ ಹೋದರೂ ಸ್ವರ್ವಸ್ವವು ಅಪಹೃತವಾದರೂ ಎಂಥ ಕಷ್ಟವು ಬಂದರೂ ಲಿಂಗಪೂಜೆ ಯನ್ನು ಸ್ತೋತ್ರವನ್ನು ಬಿಡದೆ, ಪರಸ್ತ್ರೀ, ಪರಧನ, ಪರಹಿಂಸೆ ಮುಂತಾದವನ್ನು ದೂರೀಕರಿಸಿ ಲಿಂಗನಿಷ್ಠಾಗರಿಷ್ಠನಾದವನೇ ಮಾಹೇಶ್ವರಸ್ಥಲಾಚರಣೆಯುಳ್ಳವನೆನಿಸಿ ಕೊಳ್ಳುವನು.

---

**ಟಿಪ್ಪಣಿ—**

ಭಕ್ತ ಮಾಹೇಶ್ವರ ಎಂಬ ಎರಡು ಶಬ್ದಗಳಿಗೆ ಒಂದೊಂದಕ್ಕೆ ಮೂರು ಮೂರು ಅರ್ಥಗಳಾಗುತ್ತವೆ. ಹೇಗೆಂದರೆ ಭಜ ಸೇವಾಯಾಂ ಎಂಬ ಧಾತುವಿನಿಂದ ಭಕ್ತ ಶಬ್ದವು ಸಿದ್ಧವಾಗುವದರಿಂದ ಭಕ್ತಿಯುಳ್ಳವನು ಭಕ್ತನು ಎಂಬುದು ಒಂದು ಅರ್ಥವು. ಈ ಅರ್ಥದಲ್ಲಿ ಭಕ್ತ ಶಬ್ದವು ಸರ್ವರಿಂದಲೂ ಪ್ರಯೋಗಿಸಲ್ಪಡುತ್ತಿದೆ. ವೀರಶೈವ ಸಿದ್ಧಾಂತದಲ್ಲಿ ಭಕ್ತ ಶಬ್ದಕ್ಕೆ ಭಕ್ತಿಯುಳ್ಳವನು ಎಂಬ ಅರ್ಥರೊಡನೆ ಸ್ಥಲ, ಮತ್ತು ವರ್ಗ ಎಂಬ ಎರಡು ಅರ್ಥಗಳು ಪಾರಿಭಾಷಿಕವಾಗಿ ಹೇಳಲ್ಪಡುತ್ತವೆ. ಅಂತು ಭಕ್ತ ಶಬ್ದಕ್ಕೆ ಭಕ್ತಿಯುಳ್ಳವ, ಭಕ್ತಸ್ಥಲ, ಭಕ್ತವರ್ಗ ಎಂದು ಮೂರು ಅರ್ಥಗಳಿರುವವು. ಸ್ಥಲ ಮತ್ತು ವರ್ಗ ಎಂಬ ಅರ್ಥದಲ್ಲಿ ಬೇರೆ ಯಾವ ಸಮಾಜದವರು ಭಕ್ತ ಶಬ್ದವನ್ನು ಪ್ರಯೋಗಿಸುವದಿಲ್ಲವಾದುದರಿಂದ ಈ ಭಕ್ತ ಶಬ್ದಕ್ಕೆ ಇವೆರಡು ವೀರಶೈವರ ಪಾರಿಭಾಷಿಕಾರ್ಥಗಳಾಗಿರುತ್ತವೆ. ಇದರಂತೆ ಬೇರೆ ಬೇರೆ ಶಾಸ್ತ್ರಗಳಲ್ಲಿ ಅವರವರ ಸಾಂಕೇತಿಕಾರ್ಥವನ್ನು ಬೋಧಿಸುವಂತಹ ಎಷ್ಟೋ ಪಾರಿಭಾಷಿಕ ಶಬ್ದಗಳಿರುತ್ತವೆ. ಉದಾ :- ಗುಣ ಶಬ್ದವನ್ನು ಆಯಾ ಶಾಸ್ತ್ರಕಾರರು ಹೇಗೆ ಸಂಕೇತ ಮಾಡಿರುವರೆಂಬುದನ್ನು ವಿವರಿಸುವೆವು. ಧರ್ಮಶಾಸ್ತ್ರಕಾರರು ದಯೆ, ದಾಕ್ಷಿಣ್ಯ, ಶಮ, ದಮ, ಸತ್ಯ ಮೊದಲಾದವುಗಳಿಗೆ ಗುಣವೆಂದು ಹೇಳುವರು. ನೈಯಾಯಿಕರು ಶಬ್ದ, ಸ್ಪರ್ಶ, ರೂಪ, ರಸ, ಗಂಧ, ಜ್ಞಾನಾದಿಗಳಿಗೆ ಗುಣವೆಂದು ಹೇಳುವರು. ಆಲಂಕಾರಿಕರು ಪ್ರಸಾದ, ಓಜ, ಮಾಧುರ್ಯ ಮೊದಲಾದವುಗಳಿಗೆ ಗುಣವೆಂದು ಹೇಳುವರು. ವೈಯಾಕರಣಿಗಳು ಅ. ಏ. ಓ. ಎಂಬ ಮೂರು ವರ್ಣಗಳಿಗೆ ಗುಣವೆಂದು ಹೇಳುವರು. ಇದರಂತೆ ಇನ್ನು ಅನೇಕರು ಅನೇಕ ಶಬ್ದಗಳನ್ನು ತಮ್ಮ ತಮ್ಮ ಪಾರಿಭಾಷಿಕಗಳನ್ನು ಮಾಡಿ ಕೊಂಡಿರುವರು.

ಮಾಹೇಶ್ವರ ಶಬ್ದದ ಮೂರು ಅರ್ಥಗಳು— ಈಶ್ವರ ದೇವರು ಎಂಬ ಅರ್ಥವುಳ್ಳ ಶಬ್ದದಿಂದ ಬ್ರಹ್ಮ ವಿಷ್ಣು ಮೊದಲಾದವರೆಲ್ಲರು ಹೇಳಲ್ಪಡುವರು. ಮಹೇಶ್ವರ ಶಬ್ದವು "ಮಹೇಶ್ವರ ಸ್ತ್ರ್ಯಂಬಕ ಏವ ನಾಪರಃ" ಎಂಬ ಮಹಾಕವಿಯಾದ ಕಾಳಿದಾಸನ ಉಕ್ತಿ ಯಂತೆ ಮೂರು ಕಣ್ಣುಳ್ಳ ಪರಶಿವನನ್ನೇ ಬೋಧಿಸುವದಲ್ಲದೆ ಅನ್ಯರನ್ನು ಹೇಳುವದಿಲ್ಲ ಇಂತಹ ಮಹೇಶ್ವರಃ ಪರಶಿವಃ ದೇವತಾ ಅಸ್ಯ ಇತಿ ಮಾಹೇಶ್ವರಃ ಇದು ಶೈವ ಶಬ್ದದ

ಪರ್ಯಾಯ ವಾಚಕವಾದುದು. ಮಹೇಶ್ವರನೇ ದೇವರಾಗುಳ್ಳ ಶಿವಭಕ್ತನು ಎಂಬುದು ಒಂದು ಅರ್ಥ ಈ ಅರ್ಥದಲ್ಲಿ ಮಾಹೇಶ್ವರ ಶಬ್ದವನ್ನು ಎಲ್ಲರು ಪ್ರಯೋಗಿಸುತ್ತಾರೆ. ವೀರಶೈವ ಸಿದ್ಧಾಂತದಲ್ಲಿ ಮಾಹೇಶ್ವರ ಶಬ್ದಕ್ಕೆ ಶಿವೋಪಾಸಕನು ಎಂಬ ಅರ್ಥದೊಡನೆ ಸ್ಥಲ ಮತ್ತು ವರ್ಗ ಎಂಬ ಎರಡು ಅರ್ಥಗಳು ಪಾರಿಭಾಷಿಕವಾಗಿ ಹೇಳಲ್ಪಡುತ್ತವೆ. ಆದುದರಿಂದ ಮಾಹೇಶ್ವರ ಶಬ್ದಕ್ಕೆ ಶಿವೋಪಾಸಕನು, ಮಾಹೇಶ್ವರ ಸ್ಥಲ, ಮಾಹೇಶ್ವರ ವರ್ಗ ಎಂದು ಮೂರು ಅರ್ಥಗಳಿರುತ್ತವೆ. ಈ ಭಕ್ತ ಮಾಹೇಶ್ವರ ಶಬ್ದಗಳಿಗೆ ಸಾಂಕೇತಿಕವಾದ ಸ್ಥಲ ವರ್ಗ ಎಂಬ ಅರ್ಥವನ್ನು ಹೇಳುವ ಸಂದರ್ಭದಲ್ಲಿ ಸ್ಥಲ ವರ್ಗ ಶಬ್ದಗಳನ್ನು ಕೂಡಿಸಿಯೇ "ಭಕ್ತಸ್ಥಲ, ಮಾಹೇಶ್ವರ ಸ್ಥಲ, ಭಕ್ತವರ್ಗ, ಮಾಹೇಶ್ವರ ವರ್ಗ" ಎಂದು ಹೇಳುವರು. ಸಂಶಯವಿಲ್ಲದ ಕಡೆಯಲ್ಲಿ ಕೇವಲ ಭಕ್ತ ಮಾಹೇಶ್ವರ ಎಂಬ ಶಬ್ದಗಳನ್ನು ಪ್ರಯೋಗಿಸುವರು. ಉದಾಹರಣೆ ೧) ಭಕ್ತಿಯುಳ್ಳವನು ಭಕ್ತನು ಎಂಬ ಮಾತಿಗೆ ಸಿದ್ಧಾಂತ ಶಿಖಾಮಣಿಯ ನವಮ ಪರಿಚ್ಛೇದದಲ್ಲಿ ಆಧಾರಗಳಿರುತ್ತವೆ.

ಅಧಮೋ ಚೋತ್ತಮೋ ವಾಪಿ ಯತ್ರ ಕುತ್ರ ಚಿದೂರ್ಜಿತಾ |
ವರ್ತತೇ ಶಾಂಕರೀ ಭಕ್ತಿಃ ಸ ಭಕ್ತ ಇತಿ ಗೀಯತೇ ||೪||
ಭಕ್ತ್ಯಾಪರಮಯಾ ಯುಕ್ತಃ ಸ ವೈ ಭಕ್ತ ಇತಿ ಸ್ಮೃತಃ ||೨೫||

ಅಧಮನಲ್ಲಿಯೇ ಆಗಲಿ, ಉತ್ತಮನಲ್ಲಿಯೇ ಆಗಲಿ ಅಥವಾ ಯಾವನಲ್ಲಿಯೇ ಆಗಲಿ ಶಿವಭಕ್ತಿ ಇದ್ದರೆ ಅವನು ಭಕ್ತನೆನಿಸಿಕೊಳ್ಳುವನು.

(೧) ಇದರಂತೆ ಮಾಹೇಶ್ವರ ಶಬ್ದಕ್ಕೆ ಶಿವೋಪಾಸಕನು ಶಿವಭಕ್ತನು ಎಂಬ ಅರ್ಥವಿದೆ ಎಂಬುದಕ್ಕೆ ಸಿದ್ಧಾಂತ ಶಿಖಾಮಣಿ ನವಮಪರಿಚ್ಛೇದದಲ್ಲಿ

ಶಿವಕ್ಷೇತ್ರೋತ್ಸವ ಮಹಾಯಾತ್ರಾ ದರ್ಶನಕಾಂಕ್ಷಿಣಾಂ |
ಮಾರ್ಗೇನ್ನಪಾನದಾನಂ ಚ ಕುರ್ಯಾನ್ಮಾಹೇಶ್ವರೋ ಜನಃ ||೪೭||

ಮಾಹೇಶ್ವರಃ ಜನಃ- ಶಿವಭಕ್ತ ಜನವು ಶಿವಕ್ಷೇತ್ರ ಶಿವೋತ್ಸವಾದಿ ದರ್ಶನಾಪೇಕ್ಷಿಗಳಿಗೂ ಶಿವಯಾತ್ರಿಕರಿಗೂ ಮಾರ್ಗದಲ್ಲಿ ಅನ್ನದಾನವನ್ನು ಜಲದಾನವನ್ನು ಮಾಡಬೇಕು. ಇಲ್ಲಿ ಮಾಹೇಶ್ವರ ಶಬ್ದಕ್ಕೆ ಮಾಹೇಶ್ವರ ಸ್ಥಲ, ಅಥವಾ ವರ್ಗ ಎಂದು ಅರ್ಥ ಮಾಡಿದರೆ ಅವ್ಯಾಪ್ತಿ ದೋಷ ಬರುವದರಿಂದ ಅಪಾರ್ಥವಾಗುವದು ಮತ್ತು ಜನ ಶಬ್ದವು ವಿರುದ್ಧವಾಗುವದು. ಅಥವಾ ಅಧಿಕ ಪದವಾಗುವದು.

(೨) ಮತ್ತು ಭಕ್ತ ಹಾಗು ಮಾಹೇಶ್ವರ ಶಬ್ದಗಳಿಗೆ ಸ್ಥಲ ಎಂಬ ಅರ್ಥವಿರುವ ಬಗ್ಗೆ ಸಿದ್ಧಾಂತ ಶಿಖಾಮಣಿಯ ೯-೧೦ ಪರಿಚ್ಛೇದದಲ್ಲಿ

ಬ್ರಹ್ಮಾದಿ ಸಂಪತ್ಸು ವಿರಕ್ತಚಿತ್ತೋ ಭಕ್ತೋಹಿ ಮಾಹೇಶ್ವರತಾಮುಪೈತಿ |
ಪರಿ ೯ ಪದ್ಯ ೯೪

ಭಕ್ತ ಸ್ಥಲಂ ಸಮಾಖ್ಯಾತಂ ಭವತಾ ಗಣನಾಯಕ ‖
ಕೇನ ವಾ ಧರ್ಮಭೇದೇನ ಭಕ್ತೋ ಮಾಹೇಶ್ವರೋಭವೇತ್ ‖ ೧೦ ಪ ೧ ಪದ್ಯ
ಕೇವಲೇ ಸಹಜೇ ದಾನೇ ನಿಷ್ಣಾತಃ ಶಿವತತ್ಪರಃ |
ಬ್ರಹ್ಮಾದಿ ಸ್ಥಾನವಿಮುಖೋ ಭಕ್ತೋ ಮಾಹೇಶ್ವರಃಸ್ಮೃತಃ ‖ ೧೧ಪ ೨ಪದ್ಯ

ಎಲೈ ಶ್ರೀ ರೇಣುಕ ಗಣೇಶ್ವರನೇ ಭಕ್ತ ಸ್ಥಲದ ಆಚಾರವು ತಮ್ಮಿಂದ ಹೇಳಲ್ಪಟ್ಟಿತು. ಯಾವ ಧರ್ಮ (ಆಚಾರ) ಭೇದದಿಂದ ಭಕ್ತಸ್ಥಲಾಪನ್ನನಾದವನು ಮಾಹೇಶ್ವರಸ್ಥಲವನ್ನು ಹೊಂದಲು ಅರ್ಹನಾಗುವನು ಎಂದು ಅಗಸ್ತ್ಯ ಮಹರ್ಷಿಯು ಪ್ರಶ್ನೆ ಮಾಡಲು ಅದಕ್ಕೆ ಶ್ರೀ ರೇಣುಕಾಚಾರ್ಯರು ಸಹಜ ದಾನದಲ್ಲಿ ಅತ್ಯಂತ ನಿಷ್ಣಾತನು ಶಿವಾಸಕ್ತನು ಆದ ಭಕ್ತಸ್ಥಲಾಚಾರ ವುಳ್ಳವನು ಬ್ರಹ್ಮ ವಿಷ್ಣು ಮುಂತಾದ ಪದವಿಗಳಲ್ಲಿ ವಿರತಿಯುಳ್ಳವನಾದರೆ ಮಾಹೇಶ್ವರ ಸ್ಥಲದ ಆಚಾರಗಳನ್ನು ಆಚರಿಸಲು ಅರ್ಹನಾಗುವನು. ಎಂದು ಹೇಳಿರುವರು.

(೩) ಮತ್ತು ಭಕ್ತ ಮಾಹೇಶ್ವರ ಶಬ್ದಗಳಿಗೆ ವರ್ಗ ಎಂಬ ಅರ್ಥವಿರುತ್ತದೆಂದು ಸಿದ್ಧಾಂತಶಿಖಾಮಣಿ ಪರಿಚ್ಛೇದ ೯ ರಲ್ಲಿ

ಸ್ವಮಾರ್ಗಾಚಾರ ನಿರತಾ ಸಜಾತೀಯಾ ದ್ವಿಜಾಸ್ತು ಯೇ |
ತೇಷಾಂ ಗೃಹೇಷು ಭುಂಜೀತ ನೇತರೇಷಾಂ ಕದಾಚನ ‖ ೨೯ ‖

ಈ ಶ್ಲೋಕಕ್ಕೆ ಶ್ರೀ ಮರಿತೋಂಟದಾರ್ಯರು ಕೆಳಗಿನ ತಮ್ಮ ವ್ಯಾಖ್ಯಾನದಲ್ಲಿ
ಶಿವೋಕ್ತಾಂ ಜಾತಿಮರ್ಯಾದಾಂ ಯೋಽ ತೀತ್ಯ ಭುವಿ ವರ್ತತೆ |
ಸ ಚಾಂಡಾಲ ಇತಿಜ್ಞೇಯಃ ಇತ್ಯಾದಿ ವಚನ ಪ್ರಾಮಾಣ್ಯಾತ್ |

ಶಿವದೀಕ್ಷಾಗ್ನಿ ದಗ್ಧ ಮಲತ್ರಯತ್ವ ಪೂರ್ವಕ ಪ್ರಾಪ್ತ ಮಂತ್ರ ಪಿಂಡತ್ವಾತ್ ದ್ವಿಜನ್ಮನಾಂ ವೀರಶೈವ ಮತೋಚಿತಾಚಾರನಿಷ್ಠಾನಾಂ | ಸ್ವಜಾತಿಸಂಭವಾನಾಂ ಭಕ್ತ ಮಾಹೇಶ್ವರಾಣಾಮಾಲಯೇಷು ತೇಷಾಂ ಪಂಕ್ತೌಚ ಭುಂಜೀಯಾತ್ ನಾನ್ಯತ್ರೇತಿ ತಾತ್ಪರ್ಯಂ ‖ ಎಂದು

ತಾಯಿಯ ಗರ್ಭದಿಂದ ಜನಿಸಿದ ನಂತರ ವೀರಶೈವನು, ದೀಕ್ಷಾಸಂಸ್ಕಾರವನ್ನು ಹೊಂದುವಾಗ್ಗೆ ದೀಕ್ಷಾಗ್ನಿಯಿಂದ ಮಲತ್ರಯಗಳನ್ನು ದಹಿಸಿ ಮಾಂಸಪಿಂಡವನ್ನು ಕಳೆದು ಮಂತ್ರಪಿಂಡವನ್ನು ಶ್ರೀ ಗುರುವು ಮಾಡುವದರಿಂದ ಗುರುಕರಜಾತನಾಗುವನು ಆದ ಕಾರಣ ದೀಕ್ಷಿತನಾದ ಪ್ರತಿಯೊಬ್ಬ ವೀರಶೈವನು ದ್ವಿಜ ನೆನಿಸಿಕೊಳ್ಳುವನು. ಅಂಥ ವೀರಶೈವನು ತನ್ನಂತೆ ಆಚಾರ ಉಳ್ಳವರೂ ತನ್ನ ಜಾತಿಯವರೂ ಆದ ಭಕ್ತ ಮಾಹೇಶ್ವರರ ಮನೆಯಲ್ಲಿ ಮತ್ತು ಅಂಥವರ ಪಂಕ್ತಿಯಲ್ಲಿ ಪ್ರಸಾದವನ್ನು ಸೇವಿಸ ಬೇಕಲ್ಲದೆ ಇತರರ ( ಅಲಿಂಗಿಗಳ ) ಮನೆಯಲ್ಲಿಯೂ ಮತ್ತು ಅವರ ಪಂಕ್ತಿಯಲ್ಲಿಯೂ ಪ್ರಸಾದವನ್ನು ಸೇವಿಸಕೂಡದು. ಎಂದು ಸ್ಪಷ್ಟವಾಗಿ ಹೇಳಿರುವರು.

ಇಲ್ಲಿ ಭಕ್ತಶಬ್ದಕ್ಕೆ ಭಕ್ತಿಯುಳ್ಳವನು ಎಂದು ಮತ್ತು ಮಾಹೇಶ್ವರ ಶಬ್ದಕ್ಕೆ ಶಿವೋಪಾಸಕನು ಎಂದು ಅರ್ಥ ಮಾಡಿದರೆ ಅಲಿಂಗಿಗಳಲ್ಲಿ ಈ ಲಕ್ಷಣವು ಹೋಗುವದರಿಂದ ಅತಿವ್ಯಾಪ್ತಿ ದೋಷ ಬರುವದು. ಹಾಗು ಭಕ್ತಸ್ಥಲ ಮತ್ತು ಮಾಹೇಶ್ವರ ಸ್ಥಲ ಇವುಗಳ ಆಚಾರವುಳ್ಳವರ ಮನೆಯಲ್ಲಿ ಎಂದು ಅರ್ಥಮಾಡಿದರೆ ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬ ನಾಲ್ಕು ಸ್ಥಲಗಳ ಆಚಾರವುಳ್ಳವರ ಮನೆಯಲ್ಲಿಯೂ ಸಹ ಭೋಜನ ಮಾಡಬಾರದೆಂದು ಸಿದ್ಧವಾಗುವದರಿಂದ ಅವ್ಯಾಪ್ತಿ ದೋಷ ಬರುವದು. ಆದಕಾರಣ ಭಕ್ತ ವರ್ಗದವರ ಮತ್ತು ಮಾಹೇಶ್ವರ ವರ್ಗದವರ ಮನೆಯಲ್ಲಿ ಭೋಜನ ಮಾಡಬೇಕು ಎಂದು ಅರ್ಥ ಮಾಡಿದರೇನೆ ಸರಿಯಾಗುತ್ತದೆ. ಏಕೆಂದರೆ ಈ ಎರಡೂ ವರ್ಗದವರಿಗೂ ಆರಾರು ಸ್ಥಳಗಳಿರುವದರಿಂದ ಎಲ್ಲ ಸ್ಥಲಾಚರಣೆ ಮಾಡುವವರೂ ಆ ಎರಡೂ ವರ್ಗದಲ್ಲಿ ಇರುವದರಿಂದ ಸದಾಚಾರವುಳ್ಳ ಎಲ್ಲಾ ವೀರಶೈವರ ಮನೆಯಲ್ಲಿ ಮತ್ತು ಪಂಕ್ತಿಯಲ್ಲಿ ಭೋಜನ ಮಾಡಬೇಕೆಂದು ಸಿದ್ಧವಾಗುವದು. ಹೀಗೆ ಅರ್ಥ ಮಾಡುವದರಿಂದ ಅತಿ ವ್ಯಾಪ್ತಿ ಮತ್ತು ಅವ್ಯಾಪ್ತಿ ಎಂಬ ದೋಷಗಳು ಬರುವದಿಲ್ಲ.

ಇದೇರೀತಿ ಮರಿತೋಂಟದಾರ್ಯರಿಂದ ಬರೆಯಲ್ಪಟ್ಟ ಸಿದ್ಧೇಶ್ವರ ಪುರಾಣದಲ್ಲಿಯೂ ಭಕ್ತ ಮಾಹೇಶ್ವರ ಶಬ್ದಗಳಿಗೆ ಮೂರು ಮೂರು ಅರ್ಥಗಳಿರುವವೆಂದು ಗ್ರಂಥಕಾರರು ಹೇಳಿರುವರು.

ಉದಾಹರಣೆ—

(೧) ಭಕ್ತ ಶಬ್ದಕ್ಕೆ ಭಕ್ತಿಯುಳ್ಳವನೆಂಬ ಅರ್ಥವು ಸಂಧಿ ೧ಳ ಪದ್ಯ ೩–೫

ಸಂತೋಷದಿಂ ಸಲಹೆಂದು ಗೊಳೂರು ಸದ್ಭಕ್ತರುರೆ ಬಿನ್ನಪಂಗೆಯ್ಯಲು ‖ ೩ ‖

ಸಕಲ ಸದ್ಭಕ್ತ ಜನ ಬಂಧುವೇ ಕಾರುಣ್ಯ ಸಿಂಧುವೇ ‖ ೫ ‖

ಈ ಎರಡು ಪದ್ಯಗಳಲ್ಲಿ ಭಕ್ತ ಶಬ್ದಕ್ಕೆ ಭಕ್ತಸ್ಥಲ ಅಥವಾ ಭಕ್ತ ವರ್ಗ ಎಂದು ಅರ್ಥ ಮಾಡಿದರೆ ಒಂದೇ ಸ್ಥಲದವರು ಅಥವಾ ಒಂದೇ ವರ್ಗದವರು ಆ ಸಿದ್ಧಲಿಂಗ ಮಹಾ ಶಿವಯೋಗಿಯನ್ನು ಕರೆಯಲಿಕ್ಕೆ ಬಂದಿದ್ದರೆಂದು ಅರ್ಥವಾಗುವದರಿಂದ ಅವ್ಯಾಪ್ತಿದೋಷವು ಬರುವದು. ಏಕೆಂದರೆ ಗೊಳೂರಲ್ಲಿ ಭಕ್ತಸ್ಥಲದ ಆಚಾರವುಳ್ಳವರಷ್ಟೇ ಅಥವಾ ಭಕ್ತ ವರ್ಗದವರಷ್ಟೇ ಕರೆಯಲಿಕ್ಕೆ ಬರುವದರಿಂದ ಕರೆಯುವವರಲ್ಲಿ ಗೌರವವು ಕಡಿಮೆಯಾಗುತ್ತದೆ. ಇದರಂತೆ ಆ ಸಿದ್ಧಲಿಂಗಮಹಾಶಿವಯೋಗಿಯು, ಭಕ್ತಸ್ಥಲದವರಿಗೆ ಅಥವಾ ಭಕ್ತವರ್ಗದವರಿಗೆ ಮಾತ್ರ ಬಂಧುವೂ ಕಾರುಣ್ಯ ಸಿಂಧುವೂ ಆಗಿದ್ದನೆಂದು ಇತರರಿಗೆ ಹಾಗೆ ಆಗಿರಲಿಲ್ಲವೆಂದು ಅರ್ಥವಾಗುವದರಿಂದ ಸಿದ್ಧಲಿಂಗೇಶನಲ್ಲಿ ನ್ಯೂನತೆಯು ಉಂಟಾಗುತ್ತದೆ. ಇದಲ್ಲದೆ,

ತರತರಂಗೊಂಡು ಸತ್ಯರು ಶಾಂತಿಯುತರು ಸಾತ್ವಿಕರು ಸುಗುಣಾಭರಣರು ||
ಪರಮುದಾಸೋಹಿಗಳು ಚರಲಿಂಗಭಕ್ತಿ ತ
ತ್ಪರರು ಪಾದಾಂಬು ಪರಿಪೂರ್ಣಪ್ರಸಾದನಿ
ಷ್ಠರು ಶೀಲನಿಯತವ್ರತಿಗಳು ಸಿದ್ಧೇಶನಂ ನೋಡಲೆಂದೈತಂದರು ||

ಎಂಬ ನಾಲ್ಕನೆಯ ಪದ್ಯದರ್ಥಕ್ಕೆ ವಿರೋಧವೂ ಆಗುತ್ತಿದೆ. ಆದಕಾರಣ ಇಲ್ಲಿರುವ ಭಕ್ತಶಬ್ದಕ್ಕೆ ಭಕ್ತಿಯುಳ್ಳವರು ಎಂದು ಅರ್ಥಮಾಡಿದರೆ ಭಕ್ತವರ್ಗದವರೂ ಮತ್ತು ಮಾಹೇಶ್ವರವರ್ಗದವರೂ ಆರೂಸ್ಥಲಗಳ ಆಚರಣೆಮಾಡುವವರೂ ಇವರೆಲ್ಲರಲ್ಲಿಯೂ ಭಕ್ತಿ ಇರುವದರಿಂದ ಎಲ್ಲರೂ ಭಕ್ತರೆನಿಸಿಕೊಳ್ಳುತ್ತಾರೆ. ಇಂಥವರೆಲ್ಲರೂ ಕರೆಯಲಿಕ್ಕೆ ಬಂದಿದ್ದರೆಂದೂ ಇಂಥವರೆಲ್ಲರಿಗೂ ಸಿದ್ಧಲಿಂಗೇಶನು ಬಂಧುವಾಗಿದ್ದನೆಂದೂ ಹೇಳಿದಂತಾಗುವದರಿಂದ ಯಾವ ದೋಷವೂ ಬರುವದಿಲ್ಲ.

(೨) ಭಕ್ತ ಮಾಹೇಶ್ವರ ಶಬ್ದಗಳಿಗೆ ಸ್ಥಲ ಎಂಬ ಅರ್ಥ ಇರುವ ಬಗ್ಗೆ
ಸಿದ್ಧೇಶ್ವರ ಪುರಾಣ ಸಂಧಿ ೩೫ ಪದ್ಯ ೧೫

ಎಲ್ಲಿ ನೋಡಿದೊಡಲ್ಲಿ ಸದ್ಭಕ್ತ ವಿತತಿ ಮ |
ತ್ತೆಲ್ಲಿ ನೋಡಿದೊಡಲ್ಲಿ ಮಾಹೇಶ್ವರವ್ರಜ ಮ |
ದೆಲ್ಲಿ ನೋಡಿದೊಡಲ್ಲಿ ಶುದ್ಧಸಿದ್ಧ ಪ್ರಸಿದ್ಧ ಪ್ರಸಾದಿಗಳ ನಿಕರಂ ||
ಎಲ್ಲಿನೋಡಿದೊಡಲ್ಲಿ ಪ್ರಾಣಲಿಂಗಿಗಳು ಮ |
ತ್ತೆಲ್ಲಿ ನೋಡಿದೊಡಲ್ಲಿ ಶರಣ ಸಂಕುಳವು ಬಳಿ |
ಕೆಲ್ಲಿ ನೋಡಿದೊಡಲ್ಲಿ ಲಿಂಗೈಕ್ಯರುಗಳು ಜಗವೆಲ್ಲ ವೀಪರಿಯಾದುದು || ೧೫ ||

ಈ ಪದ್ಯದಲ್ಲಿ ಭಕ್ತ ಮತ್ತು ಮಾಹೇಶ್ವರ ಶಬ್ದಕ್ಕೆ ಸ್ಥಲ ಎಂಬ ಅರ್ಥವು ಸ್ಫುಟವಾಗಿ ತೋರುತ್ತಿದೆ.

(೩) ಭಕ್ತ ಮತ್ತು ಮಾಹೇಶ್ವರ ಶಬ್ದಗಳಿಗೆ ವರ್ಗ ಎಂಬ ಅರ್ಥವು ಅದೇ ಸಿದ್ಧೇಶ್ವರ ಪುರಾಣದಲ್ಲಿ ಅನೇಕ ಕಡೆಗೆ ಹೇಳಲ್ಪಟ್ಟಿದೆ.

ಸಿದ್ಧಲಿಂಗಯತಿ.

ಭೂತಳದೊಳಖಿಳ ಶಿವಭಕ್ತ ಮಾಹೇಶ್ವರರ ಸಲಹಬೇಕೆಂದು ಕೃಪೆಯಿಂ ||
ಸಾತಿಶಯವಹ ಮಾನವಾಕಾರವಂ ತಳೆದು |
ನೂತನವೆನಿಪ್ಪಂತೆ ಬಂದು ಮಹಿಮೆಗಳಿಂದ |
ಖ್ಯಾತಿವಡೆವುತ್ತಖಿಳ ದೇಶಂಗಳೊಳ್ ಚರಿಸುತಿರ್ದ ನತಿಲೀಲೆಯಿಂದೆ ||

ಸಂಧಿ ೩ ಪದ್ಯ ೧೨

ಪರಿಯಾದುದೆಂದಖಿಳ ಭಕ್ತ ಮಾಹೇಶ್ವರರು ಪೊಗಳ್ದರಾನಂದದಿಂದೆ ||

ಸಂಧಿ ೧೬ ಪದ್ಯ ೯

ಪರಮ ಶ್ರೀಗುರು ನಿರಂಜನಲಿಂಗನವನಿಯಂ
ಪರಿರಕ್ಷಿಸಲ್ಕೆಂದು ಬಂದಖಿಳ ಮಹಿಮೆಯಂ

ಪರುಟವಿಸಿ ತೋರಿ ಸದ್ಭಕ್ತ ಮಾಹೇಶ್ವರರ ಮನದ ಕತ್ತಲೆಯನೂಂಕಿ ||೨೧||

ಸಂಧಿ ೨೫

ಈ ಪದ್ಯಗಳಲ್ಲಿ ಭಕ್ತಶಬ್ದಕ್ಕೆ ಭಕ್ತ ವರ್ಗವೆಂದು ಮತ್ತು ಮಾಹೇಶ್ವರ ಶಬ್ದಕ್ಕೆ ಮಾಹೇಶ್ವರ ವರ್ಗವೆಂದು ಅರ್ಥವು ಸ್ಫುಟವಾಗಿ ತೋರುತ್ತಿದೆ. ಹೇಗೆಂದರೆ ಈ ಪದ್ಯಗಳಲ್ಲಿರುವ ಭಕ್ತ ಶಬ್ದಕ್ಕೆ ಭಕ್ತಸ್ಥಲದವರು ಹಾಗು ಮಾಹೇಶ್ವರ ಶಬ್ದಕ್ಕೆ ಮಾಹೇಶ್ವರ ಸ್ಥಲದವರು ಎಂದು ಅರ್ಥಮಾಡಿದರೆ ಅವ್ಯಾಪ್ತಿ ದೋಷವು ಬರುವದು. ಏಕಂದರೆ ಎರಡೇ ಸ್ಥಲದವರ ಉದ್ಧಾರಕ್ಕಾಗಿ ಆತನ ಅವತಾರವಾಯಿತೆಂದು ಮತ್ತು ಎರಡೇ ಸ್ಥಲದವರ ಉದ್ಧಾರವನ್ನು ಸಿದ್ಧಲಿಂಗ ಶಿವಯೋಗಿಯು ಮಾಡಿದನೆಂದು ಅರ್ಥವಾಗುವದರಿಂದ ಉಳಿದ ನಾಲ್ಕು ಸ್ಥಲದವರ ಉದ್ಧಾರಕ್ಕಾಗಿ ಆತನು ಅವತರಿಸಲಿಲ್ಲವೆಂದೂ ಹಾಗು ಉಳಿದ ನಾಲ್ಕು ಸ್ಥಲದವರ ಉದ್ಧಾರವು ಆತನಿಂದ ಆಗಲಿಲ್ಲವೆಂದು ಅರ್ಥವಾಗುವದರಿಂದ ಅವ್ಯಾಪ್ತಿದೋಷ ಬರುವದು. ಮತ್ತು ೨೫ ನೇ ಸಂಧಿಯ ೧೫ ನೆಯ ಪದ್ಯದಲ್ಲಿ ಆರೂಸ್ಥಲದವರ ಉದ್ಧಾರವಾಗಿರುವದೆಂದು ಮೇಲೆ ಬರೆದ ಪದ್ಯದಿಂದ ಸಿದ್ಧವಾಗುವದು. ಆದಕಾರಣ ಎರಡೂ ಶಬ್ದಗಳಿಗೆ ಸ್ಥಲ ಎಂಬ ಅರ್ಥವು ಇಲ್ಲಿ ಮಾಡುವಂತಿಲ್ಲ. ಇದರಂತೆ ಭಕ್ತ ಶಬ್ದಕ್ಕೆ ಭಕ್ತಿವುಳ್ಳವನೆಂದೂ ಮಾಹೇಶ್ವರ ಶಬ್ದಕ್ಕೆ ಶಿವೋಪಾಸಕನೆಂದೂ ಅರ್ಥ ಮಾಡಿದರೆ ಅಲಿಂಗಿಗಳಲ್ಲಿಯೂ ಈ ಲಕ್ಷಣವು ಇರುವದರಿಂದ ಅತಿವ್ಯಾಪ್ತಿ ದೋಷಬರುವದು. ಅಥವಾ ಭಕ್ತ ಶಬ್ದಕ್ಕೆ ಭಕ್ತಿವುಳ್ಳವನು, ಮಾಹೇಶ್ವರ ಶಬ್ದಕ್ಕೆ ಶಿವೋಪಾಸಕನು ಎಂಬ ಅರ್ಥವನ್ನು ಇತರರಂತೆ ವೀರಶೈವರೂ ಒಪ್ಪಿಕೊಂಡಿರುವದರಿಂದ ದೋಷವು ಹೇಗೆ ಬರುವದೆಂದು ಕೇಳಿದರೆ ಆಗ ಭಕ್ತ ಮಾಹೇಶ್ವರ ಎಂಬ ಎರಡು ಶಬ್ದಗಳಲ್ಲಿ ಯಾವದಾದರೊಂದು ಶಬ್ದವನ್ನು ಹೇಳುವದರಿಂದಲೇ ಭಕ್ತಿಯುಳ್ಳ ಎಲ್ಲಾ ವೀರಶೈವರು ಅಥವಾ ಶಿವೋಪಾಸಕರಾದ ಎಲ್ಲ ವೀರಶೈವರೂ ಎಂದು ಅರ್ಥವಾಗುತ್ತಿರಲು ಎರಡು ಶಬ್ದಗಳನ್ನು ಜೋಡಿಸಿ ಹೇಳಿದ್ದು ಪುನರುಕ್ತಿ ಮತ್ತು ಅಧಿಕಪದ ದೋಷವಾಗುವದು. ಆದಕಾರಣ ಈ ಪದ್ಯಗಳಲ್ಲಿ ಭಕ್ತ ಶಬ್ದಕ್ಕೆ ಭಕ್ತವರ್ಗವೆಂದು ಮತ್ತು ಮಾಹೇಶ್ವರ ಶಬ್ದಕ್ಕೆ ಮಾಹೇಶ್ವರ ವರ್ಗವೆಂದು ಅರ್ಥ ಮಾಡಿದರೆ ಈ ಎರಡು ವರ್ಗದಲ್ಲಿ ಎಲ್ಲಾ ಸ್ಥಲಗಳ ಆಚಾರ ವುಳ್ಳವರು ಎಲ್ಲಾ ವೀರಶೈವರು ಬರುವದರಿಂದ ಸಿದ್ಧಲಿಂಗೇಶನ ಅವತಾರವು. ಎಲ್ಲಾ ವೀರಶೈವರ ಉದ್ಧಾರಕ್ಕಾಗಿ ಆಯಿತೆಂದೂ ಆತನ ಅವತಾರದಿಂದ ಎರಡೂ ವರ್ಗದಲ್ಲಿಯ ಆರುಸ್ಥಲದವರ ಬೆಳವಣಿಗೆಯಾಯಿತೆಂದೂ ಸರ್ವ ವೀರಶೈವರ ಉದ್ಧಾರವು ಸಿದ್ಧಲಿಂಗೇಶನಿಂದ ಆಯಿತೆಂದೂ ಹೇಳುವದರಿಂದ ಯಾವ ದೋಷವು ಬರುವದಿಲ್ಲ. ಆದುದರಿಂದ ಈ ಪದ್ಯಗಳಲ್ಲಿರುವ

ಭಕ್ತ ಮಾಹೇಶ್ವರ ಶಬ್ದಗಳಿಗೆ ಭಕ್ತವರ್ಗ ಮಾಹೇಶ್ವರವರ್ಗಯೆಂಬ ಅರ್ಥವು ಸ್ಫುಟವಾಗಿ ತೋರುತ್ತಿದೆ.

ಇದರಂತೆ ಇತರ ವೀರಶೈವರ ಧರ್ಮ ಗ್ರಂಥಗಳಲ್ಲಿ ಮತ್ತು ಪುರಾಣಾದಿಗಳಲ್ಲಿ ಭಕ್ತ, ಮಾಹೇಶ್ವರ ಶಬ್ದಗಳನ್ನು ಮೂರು ಮೂರು ಅರ್ಥಗಳಲ್ಲಿ ಬೇರೆ ಬೇರೆಯಾಗಿ ಪ್ರಯೋಗಮಾಡಿದ ಅನೇಕ ಉದಾಹರಣೆಗಳಿರುತ್ತವೆ. ವಿಸ್ತಾರವಾಗುವದರಿಂದ ಇಲ್ಲಿ ಅದನ್ನು ವಿವರಿಸುವದಿಲ್ಲ ಈ ಗ್ರಂಥದ ಈ ಸಂಧಿಗಳಲ್ಲಿ ಭಕ್ತ, ಮಾಹೇಶ್ವರ ಶಬ್ದಗಳು ಸ್ಥಲಾಚರಣೆಯನ್ನು ಹೇಳುವವೆಂದು ಸರ್ವರೂ ತಿಳಿದುಕೊಳ್ಳಬೇಕು, ಭಕ್ತ ವರ್ಗದ ವರಿಗೂ ಆರು ಸ್ಥಲಗಳಿರುತ್ತವೆ. ಮಾಹೇಶ್ವರ ವರ್ಗದವರಿಗೂ ಆರು ಸ್ಥಲಗಳಿರುತ್ತವೆ. ಆದ ಕಾರಣ ಸ್ಥಲಾಚರಣೆಯಲ್ಲಿ ಇಬ್ಬರೂ ಸಮಾನರೇ ಇರುತ್ತಾರೆ.

| ಸಂಧಿ | ವಿಷಯ | ಪುಟ ೨೫೬–೨೬೦ |
|---|---|---|
| ೧೬ | ಪ್ರಸಾದಿ | ಪದ್ಯ ೫೧ |

ಶಿವನ ಪದಾರ್ಥವನ್ನು ಮಂತ್ರಪೂರ್ವಕವಾಗಿ
ಶಿವಲಿಂಗಕ್ಕರ್ಪಿಸಿ ಆ ಪ್ರಸಾದವನ್ನು ಅನುಭವಿಸು
ವವನೇ ಪ್ರಸಾದಿ ಎನಿಸಿಕೊಳ್ಳುವನು.

ಮನಸ್ಸಿನ ನಿರ್ಮಲತೆಯ ಚಿಹ್ನವೇ ಪ್ರಸಾದವು. ಈ ಮನಃ ಪ್ರಸನ್ನತೆಯು ಲಿಂಗರೂಪನಾದ ಶಿವನ ಪ್ರಸಾದದಿಂ ( ಕೃಪೆಯಿಂ ) ದ ಸಿದ್ಧಿಸುವದು, “ ಆಹಾರ ಶುಧ್ಯಾತತ್ವಶುದ್ಧಿಃ ” ಎಂಬ ಛಾಂದೋಗ್ಯ ಶ್ರುತ್ಯನುಸಾರವಾಗಿ, ಶುದ್ಧವಾದ ಯಾವ ಪದಾರ್ಥವು ಶಿವನಿಗೆ ಅರ್ಪಿಸಲ್ಪಡುವದೋ ಅದು ಶಿವಪ್ರಸಾದವಾಗುವದು, ಇಂಥಾ ಸಮ್ಯಗ್ ಜ್ಞಾನಕಾರಣವಾದ ಶಿವಪ್ರಸಾದವನ್ನು ಮನೋನೈರ್ಮಲ್ಯ ಸಿದ್ಧಿಗಾಗಿ ಅನುಭವಿಸುವವನು ಪ್ರಸಾದಿಯು ಇಂತಹ ಪ್ರಸಾದ ಸೇವನದಿಂದ ಸೇವಿಸುವವನ ಮನಸ್ಸು, ಪ್ರಾಣ, ಸಕಲ ತನುಗಳು, ಕರಣಗಳು, ಇಂದ್ರಿಯಗಳು ಎಲ್ಲವೂ ಪ್ರಸಾದ ರೂಪಗಳಾಗುತ್ತವೆ.

ಯಜಮಾನನು ಯಾವುದಾದರೊಂದು ದೇವತೆಗೆ ಒಂದು ಪದಾರ್ಥವನ್ನು ಅರ್ಪಿಸಬೇಕಾಗಿದ್ದರೆ ದೇವತೆಗಳ ಮುಖವಾದ ಅಗ್ನಿಯ (ದ್ವಾರಾ) ಲ್ಲಿ ಹಾಕಿ ಅದನ್ನು ಅರ್ಪಿಸುವನು ಇದರಂತೆ ಲಿಂಗಕ್ಕೆ ಅರ್ಪಿಸಬೇಕಾದ ಪದಾರ್ಥವನ್ನು ಲಿಂಗದ ಮುಖವಾದ ಜಂಗಮನಿಗರ್ಪಿಸಿ, ಆ ಅನಾದಿಯಾದ ಜಂಗಮದ ಪ್ರಸಾದವನ್ನು ಆದಿಯಾದ ಲಿಂಗಕ್ಕೆ ಸಮರ್ಪಿಸಿ ತಾನು ಸೇವಿಸತಕ್ಕದ್ದು, ಹೀಗೆ ಮಾಡದೆ ಜಂಗಮದ ಸಾನ್ನಿಧ್ಯದಲ್ಲಿಯೂ ಕೇವಲ ಪದಾರ್ಥವನ್ನು ಲಿಂಗಕ್ಕರ್ಪಿಸಿ ಲಿಂಗಪ್ರಸಾದವಾಯಿತೆಂದು

ಸೇವಿಸಕೊಡದು ಏಕೆಂದರೆ ಜಂಗಮದ ಸಾನ್ನಿಧ್ಯದಲ್ಲಿ ಲಿಂಗದಲ್ಲಿ ವಿಶುದ್ಧತೆಯಿಲ್ಲ ದಿರುವದರಿಂದ ಅದು ದೋಷದಾಯಕವಾಗುವದು.

ಶಿಷ್ಯ— ಗುರುದೇವ ತಾವು ಹೇಳಿದಂತೆ ಯಜಮಾನನು ಪದಾರ್ಥವನ್ನು ಅಗ್ನಿಯಲ್ಲಿ ಹಾಕುವದರಿಂದ ದೇವತೆಗೆ ಸಮರ್ಪಣವಾಯಿತೆಂದು ತಿಳಿದುಕೊಳ್ಳುವ ನಲ್ಲದೆ ಪುನಃ ಆ ಪದಾರ್ಥವನ್ನು ದೇವರಿಗರ್ಪಿಸುವದಕ್ಕೆ ಹೋಗುವದಿಲ್ಲ ಇದರಂತೆ ಲಿಂಗಕ್ಕರ್ಪಿಸಬೇಕಾದ ಪಧಾರ್ಥವನ್ನು ಲಿಂಗದಾತ್ಮವಾದ ಗುರುವಿಗೂ ಲಿಂಗದ ಮುಖವಾದ ಜಂಗಮನಿಗೂ ಅರ್ಪಿಸಿದರೆ ಈರಿತು ಲಿಂಗಕ್ಕರ್ಪಿತವಾಗುತ್ತದೆ. ತಾನು ಆ ಗುರು ಜಂಗಮರ ಪ್ರಸಾವನ್ನು ಸೇವಿಸಬೇಕಲ್ಲದೆ. ಪುನಃ ಆ ಗುರು ಜಂಗಮರ ಪ್ರಸಾದವನ್ನು ಲಿಂಗಕ್ಕರ್ಪಿಸುವದು ಯೋಗ್ಯವಾಗಿ ತೋರುವದಿಲ್ಲ ಏಕೆಂದರೆ ಆ ಗುರು ಜಂಗಮರಿಬ್ಬರಿಗೂ ಲಿಂಗವು ಪ್ರಾಣಸ್ವರೂಪವಾಗಿದೆ; ನಿತ್ಯವೂ ಅವರಿಂದ ಪೂಜಿಸಲ್ಪಡುತ್ತಿದೆ. ಗುರು ಜಂಗಮರಿಬ್ಬರು ಲಿಂಗ ಬಾಹ್ಯವಾಗಿ ಕಾರ್ಯ ಮಾಡು ತ್ತಿದ್ದರೆ ಮಾತ್ರ ಅರ್ಪಿಸಬಹುದು, ಆದರೆ ಲಿಂಗ ಬಾಹ್ಯನಾದ ಗುರುವು ದೊರೆಯ ಬಹುದು ಪರಂತು ಅವನು ವೀರಶೈವನಾಗಲಾರ. ಲಿಂಗವಿರಹಿತವಾದ **ಜಂಗಮ ವಂತೂ ಇಲ್ಲವೇ ಇಲ್ಲ ಆದುದರಿಂದ** ಉಪಾಸಕರಾದ ಗುರು ಜಂಗಮರ ಪಾದೋದಕಪ್ರಸಾದಗಳನ್ನು ಉಪಾಸ್ಯವಾದ ಲಿಂಗಕ್ಕರ್ಪಿಸುವದು ಹೇಗೆ?

ಗುರು— ಅಪರಿಪಕ್ವಮತಿಯಾದ ಶಿಷ್ಯನೇ ಭಾವ ಪೂರ್ಣವಾದ ಪ್ರಶ್ನವನ್ನು ಮಾಡಿದೆ. ನಿನ್ನ ಪ್ರಶ್ನವು ಜಟಿಲವಾಗಿರುವಂತೆ ಅದರ ಉತ್ತರವೂ ಜಟಿಲವಾಗಿಯೇ ಇರುವದರಿಂದ ಸಾವಧಾನದಿಂದ ಕೇಳಿ ಮನನ ಮಾಡಿಕೊ ಸಾಮಾನ್ಯವಾಗಿ ಭಕ್ತಿ ಯುಳ್ಳ ಪ್ರತಿಯೊಬ್ಬ ವೀರಶೈವನಿಗೆ ಗುರು,ಲಿಂಗ, ಜಂಗಮ, ಭಸ್ಮ,ರುದ್ರಾಕ್ಷಿ, ಮಂತ್ರ, ಪಾದೋದಕ, ಪ್ರಸಾದ, ಎಂಬ ಎಂಟು ಆವರಣಗಳು ಪೂಜ್ಯವಾಗಿದ್ದು ಇವುಗಳಲ್ಲಿ ಗುರು, ಲಿಂಗ, ಜಂಗಮ ಎಂಬ ಮೂರು ಉಪಾಸ್ಯಗಳಾಗಿರುತ್ತವೆ. ಇವುಗಳ ಉಪಾ ಸ್ಯತ್ವದ ತರತಮಭಾವವನ್ನು ಚನ್ನಾಗಿ ಅರಿತು ಕೊಳ್ಳಬೇಕು. ಶ್ರೀಗುರುವು ಶಿಷ್ಯನಿಗೆ ಇಷ್ಟಲಿಂಗವನ್ನು ಕೊಡುವಾಗ್ಗೆ ಆ ಇಷ್ಟಲಿಂಗದಲ್ಲಿ ಪರಶಿವ ಚಿತ್ಕಲೆಯನ್ನು ಶಿಷ್ಯನ ಜೀವಕಲೆಯನ್ನು ಸಂಯೋಜನಮಾಡಿ ಕೊಟ್ಟಿರುವನು ಇಷ್ಟಲಿಂಗವು ಉಭಯ ಕಲಾ ವಿಶಿಷ್ಟವಾಗಿರುವುದರಿಂದ ಯಾವ ಇಷ್ಟಲಿಂಗದಲ್ಲಿ ಯಾರ ಪ್ರಾಣಕಲೆಯ ಸಂಯೋ ಜನವಾಗಿರುವದೊ ಆ ಇಷ್ಟಲಿಂಗವು ಅವರೊಬ್ಬರಿಂದಲೇ ಪೂಜಿಸಲ್ಪಡುತ್ತಿದೆ. ಒಬ್ಬನ ಇಷ್ಟಲಿಂಗವನ್ನು ಮತ್ತೊಬ್ಬನು ಸತಿಪತಿ ಸಮರಸಭಾವದಿಂದ ಪೂಜಿಸುವದಿಲ್ಲ ಆದುದರಿಂದ ಇಷ್ಟಲಿಂಗದ ಉಪಾಸ್ಯತ್ವವು ವೈಯಕ್ತಿಕವಾಗಿರುವದು. ಗುರುತ್ವವು ಗೋತ್ರಸೂತ್ರಗಳಿಗೆ ಸಂಬಂಧಪಟ್ಟಿದ್ದಿರುವದರಿಂದ ಗುರುವು ತನ್ನ ಗೊತ್ರಸೂತ್ರದ ವರಿಗೆ ಮಾತ್ರ ಗುರುರೂಪದಿಂದ ಉಪಾಸ್ಯನಾಗುವನು, ಗುರುವಿನ ಉಪಾಸ್ಯತ್ವವು

ಲಿಂಗದ ಉಪಾಸ್ಯತ್ವಕ್ಕಿಂತಲೂ ಬಹು ದೊಡ್ಡದಾದರೂ ಒಂದು ಪರಿಮಿತಿಯುಳ್ಳದ್ದಾಗಿರುತ್ತದೆ. ಜಂಗಮನು ಜಗದಾರಾಧ್ಯನಾಗಿರುವದರಿಂದ ಯಾವದ್ವೀರಶೈವರಿಗೆ ಉಪಾಸ್ಯನಾಗಿರುವನು, ಜಂಗಮನ ಉಪಾಸ್ಯತ್ವವು ವ್ಯಾಪಕವಾಗಿರುವದು. ಶಿಷ್ಯನೆ ಗುರು ಜಂಗಮರ ಪ್ರಸಾದವನ್ನು ಲಿಂಗಕ್ಕರ್ಪಿಸುವದು ಯೋಗ್ಯವಲ್ಲ ಎಂಬ ನಿನ್ನ ಮಾತಿಗೆ ನೀನು ಎರಡು ಕಾರಣಗಳನ್ನು ಪೋಷಕವಾಗಿ ಹೇಳಿರುವಿ ಏನಂದರೆ– ೧ ಗುರು ಜಂಗಮರಿಗೂ ಲಿಂಗವು ಪ್ರಾಣಸ್ವರೂಪವಾಗಿರುವದು, ೨ ಲಿಂಗವು ಅವರಿಬ್ಬರಿಂದ ಸದಾ ಪೂಜಿಸಲ್ಪಡುತ್ತಿದೆ. ಎಂದು ಹೇಳುವಿ ಗುರು ಜಂಗಮರಿಗೆ ಅವರವರ ಲಿಂಗವು ಪ್ರಾಣಸ್ವರೂಪವಾಗಿರುವದಲ್ಲದೆ, ಭಕ್ತನ ಲಿಂಗವು ಪ್ರಾಣ ಸ್ವರೂಪವಾಗಿಲ್ಲ. ಅವರು ತಮ್ಮ ತಮ್ಮ ಲಿಂಗವನ್ನು ಪೂಜಿಸುವರಲ್ಲದೆ ಭಕ್ತನ ಲಿಂಗವನ್ನು ಪೂಜಿಸುವದಿಲ್ಲ. ಇಷ್ಟಲಿಂಗದಲ್ಲಿ ಶಿವ ಕಲೆಯ ಜೊತೆಯಲ್ಲಿ ಅವರವರ ಪ್ರಾಣ ಕಲೆಯ ಸಂಬಂಧವಾಗಿರುವದರಿಂದ ಅದು ಒಬ್ಬೊಬ್ಬರಿಂದಲೇ ಪೂಜಿಸಲ್ಪಡುತ್ತದೆಂಬುದನ್ನು ಮೇಲೆ ವಿವರಿಸಿರುವೆವು. ಆದುದರಿಂದ ಭಕ್ತನು ತನ್ನ ಲಿಂಗಕ್ಕೆ ಗುರು ಜಂಗಮರ ಪ್ರಸಾದವನ್ನರ್ಪಿಸುವದಕ್ಕೆ ಯಾವ ತೊಂದರೆಯಿಲ್ಲ. ಅಥವಾ ಶಿಷ್ಯರಿಗೆ ಗುರುವು, ಭಕ್ತರಿಗೆ ಜಂಗಮನು ಉಪಾಸ್ಯರಾಗಲಿ, ಆ ಗುರು ಜಂಗಮರೂ ಸಮಾಜ ಘಟಕರಾಗಿರುವದರಿಂದ ಅವರಿಗೂ ಅಷ್ಟಾವರಣಗಳಿರುತ್ತವೆ. ಅಂದ ಬಳಿಕ ಆ ಗುರು ಜಂಗಮರಿಗೆ ಅವರವರ ಲಿಂಗವು ಉಪಾಸ್ಯವಾಗಿರುವಾಗ ಅವರು ತಮ್ಮ ಪಾದೋದಕನ್ನು ತಮ್ಮ ಲಿಂಗಕ್ಕೆರೆಯುವದಾಗಲಿ, ತಮ್ಮ ಪ್ರಸಾದವನ್ನು ತಮ್ಮ ಲಿಂಗಕ್ಕೆ ಅರ್ಪಿಸುವದಾಗಲಿ ಯೋಗ್ಯವಲ್ಲವೆಂಬ ಭಾವದಿಂದ ನಿನ್ನೀ ಪ್ರಶ್ನೆಯಿರುವದೋ ಹಾಗಾದರೆ ಕೇಳು ಗುರು ಜಂಗಮರೂ ತಮ್ಮ ಲಿಂಗವನ್ನು ಪೂಜಿಸುತ್ತಿರುವರು, ಆದರೆ ಆ ಪೂಜೆಯು ಪೂಜ್ಯ ಪೂಜಕ ಭಾವದಿಂದ ನಡೆಯುವದಿಲ್ಲ. ಸ್ವಸ್ವರೂಪದಿಂದ ಪೂಜಿಸುತ್ತಿರುವರು. ಮತ್ತು ಅಷ್ಟಾವರಣಾಂತರ್ಗತ ಗುರು ಜಂಗಮರೂ ಸಮಾಜ ಘಟಕರಾಗಿರುವದರಿಂದ ತಮ್ಮ ದೃಷ್ಟಿಯಿಂದ ಅಂಗರಾದಾಗ ಅವರಲಿಂಗವು ಅವರಿಗೆ ಪ್ರಾಣಸ್ವರೂಪವಾಗಿರುವಂತೆ ಅಷ್ಟಾವರಣಾಂತರ್ಗತ ಲಿಂಗಕ್ಕು ಜಂಗಮನು ಪ್ರಾಣಸ್ವರೂಪನಾಗಿರುವನು ಅಂದಬಳಿಕ ಪ್ರಾಣ ಸ್ವರೂಪನಾದ ಜಂಗಮನ ಪಶ್ಚಿಮ ಚಕ್ರದಲ್ಲಿರುವ ಸತ್ಯೋದಕವೇ ಈ ಪಾದೋದಕವು, ಮತ್ತು ಅನಾದಿ ಜಂಗಮದ ಪ್ರಸಾದವೇ ಈ ಪ್ರಸಾದವು ಎಂಬ ಭಾವನೆಯಿಂದ ಗುರು ಜಂಗಮರು ತಮ್ಮ ಲಿಂಗಕ್ಕೆ ಅರ್ಪಿಸುವರಲ್ಲದೆ ನನ್ನ ಪಾದೋದಕ ನನ್ನ ಪ್ರಸಾದವೆಂಬ ಭಾವದಿಂದ ಅರ್ಪಿಸುವದಿಲ್ಲ, ಹಾಗೆ ಅರ್ಪಿಸಲಿಕ್ಕೆ ಬರುವದೂ ಇಲ್ಲ ಏಕೆಂದರೆ ಕೇವಲ ಗುರುವಿನಿಂದಾಗಲಿ, ಕೇವಲ ಜಂಗಮನಿಂದಾಗಲಿ ಒಬ್ಬೊಬ್ಬರಿಂದ ಪಾದೋದಕವು ಸಿದ್ಧಿಸುವದಿಲ್ಲ. ಆ ಪಾದೋದಕವನ್ನು ಪಡೆದುಕೊಳ್ಳುವ ಒಬ್ಬ ಭಕ್ತನು ಬೇಕಾಗುತ್ತಾನೆ. ಆ ಭಕ್ತನು ಪಡೆದುಕೊಂಡದ್ದು ಜಂಗಮ ಪಾದೋದಕವಾದುದರಿಂದ ಅದು ಸರ್ವರಿಗೂ ಜಂಗಮ ಪಾದೋದಕವೇ ಇರುತ್ತದೆ. ಒಬ್ಬರಿಂದಲೇ ಪಾದೋದಕವು ಸಿದ್ಧವಾಗುತ್ತಿದ್ದರೆ ಮಾತ್ರ ನನ್ನದೆಂಬ

ಭಾವ ಬರಬಹುದಾಗಿತ್ತು ಹಾಗೆ ಪಾದೋದಕವು ಸಿದ್ಧಿಸುವದಿಲ್ಲವಾದುದರಿಂದ ನನ್ನದೆಂಬ ಭಾವ ಬರುವದಿಲ್ಲ ಬರಲೇಬಾರದು. ಆದುದರಿಂದ ಸಿದ್ಧವಾದ ಆ ಪಾದೋದಕವನ್ನು ಗುರು, ಜಂಗಮರು ತಮ್ಮ ಲಿಂಗಕ್ಕೂ ಇತರರು ತಮ್ಮ ತಮ್ಮ ಲಿಂಗಕ್ಕೂ ಎರೆಯುವದಾಗಲಿ ಆ ಜಂಗಮ ಪ್ರಸಾದವನ್ನು ಸರ್ವರೂ ತಮ್ಮ ತಮ್ಮ ಲಿಂಗಕ್ಕರ್ಪಿಸುವದಾಗಲಿ ಶಾಸ್ತ್ರ ಸಿದ್ಧವಾಗಿರುವದು. ಹೀಗೆ ಅರ್ಪಿಸುವದರಿಂದ ಗುರುವಿನಿಂದ ಶುದ್ಧ ಪ್ರಸಾದವೂ, ಲಿಂಗದಿಂದ ಸಿದ್ಧ ಪ್ರಸಾದವೂ, ಜಂಗಮನಿಂದ ಪ್ರಸಿದ್ಧ ಪ್ರಸಾದವೂ ಆಗುತ್ತಿವೆ.

ಶಿಷ್ಯ :—ಗುರುದೇವ, ಶ್ರೇಷ್ಠವಾದ ಬಂಗಾರದಲ್ಲಿ ಕನಿಷ್ಠವಾದ ಬೆಳ್ಳಿ, ತಾಮ್ರ ಮುಂತಾದುದನ್ನು ಕೂಡಿಸುವದರಿಂದ ಆ ಬಂಗಾರದ ಮಟ್ಟವು ಕಡಿಮೆಯಾಗುವಂತೆ ಜಂಗಮನಿಂದುಂಟಾದ ಪ್ರಸಿದ್ಧ ಪ್ರಸಾದವನ್ನು ಲಿಂಗಕ್ಕರ್ಪಿಸುವದರಿಂದ ಸಿದ್ಧ ಪ್ರಸಾದವಾಗುವದಲ್ಲಾ, ಏತಕ್ಕೆ ಅರ್ಪಿಸಬೇಕು ?

ಗುರು :—ಶಿಷ್ಯನೇ ಪ್ರಾಕೃತಿಕಗಳಾದ ತಾಮ್ರ, ಬೆಳ್ಳಿ, ಬಂಗಾರಗಳಲ್ಲಿ ನ್ಯೂನಾಧಿಕ ಭಾವವು ಸಹಜವಾಗಿರುತ್ತದೆ, ಅದರಂತೆ ಪ್ರಸಾದದಲ್ಲಿ ತರತಮಭಾವ ವಿರುವದಿಲ್ಲ. ಪ್ರಸಾದವು ಆಯಾಯ ಕ್ರಿಯೆಗಳಿಂದ ಬೇರೆ ಬೇರೆ ಹೆಸರುಗಳುಂಟಾಗಿ ಹನ್ನೊಂದು ವಿಧವಾಗಿರುವದಿಷ್ಟೆ. ಅಂಗನ ಭೋಗವು ಲಿಂಗಭೋಗಪೂರ್ವಕವಾಗಿಯೇ ಆಗಬೇಕಾದುದರಿಂದ ಲಿಂಗಕ್ಕೆ ಅರ್ಪಿಸಲೇಬೇಕು.

ಲಿಂಗವು ಬೀಜರೂಪವಾಗಿಯೂ, ಜ್ಞಾನಿಯಾದ ಜಂಗಮನು ಅಂಕುರರೂಪ ವಾಗಿಯೂ, ಆ ಬೀಜಾಂಕುರಗಳ ( ಲಿಂಗ ಜಂಗಮರ ) ನಿಯೋಜಿತ ಫಲವೇ ಪ್ರಸಾದ ರೂಪವಾಗಿಯೂ ಇರುತ್ತದೆಂದು ತಿಳಿದು ಸಂಸ್ಕಾರ ವಿಶೇಷದಿಂದ ಶಿವಕಲಾವಿಶಿಷ್ಟ ವಾದ ಲಿಂಗಕ್ಕೆ ಸಂಸ್ಕಾರದಿಂದಲೂ, ಸ್ವತಃ ಸಿದ್ಧವಾಗಿಯೂ ಚೇತನ (ಶಿವಸ್ವರೂಪ) ನಾದ ಜಂಗಮನ ಪ್ರಸಾದವನ್ನು ಭಕ್ತಿಯಿಂದ ಅರ್ಪಿಸಿ ಲಿಂಗಭೋಗೋಪಭೋಗಿ ಯಾಗಿರತಕ್ಕದ್ದು. ಮತ್ತು ಜ್ಞಾನಗುರುವಿನಲ್ಲಿ ಗೌರವ ಬುದ್ಧಿಯೂ, ಲಿಂಗದಲ್ಲಿ ಮನಸ್ಸುಲೀನವಾಗುವಿಕೆಯೂ ಜಂಗಮನಲ್ಲಿ ಅನುಭವವೂ, ದಶವಿಧ ಪಾದೋದಕ, ಏಕಾದಶ ಪ್ರಸಾದ ಇವುಗಳಲ್ಲಿ ಭಕ್ತಿಯೂ ಉಳ್ಳವನಾಗಿ, ಅಂಗ, ಲಿಂಗ, ಭಕ್ತಿ, ಶಕ್ತಿ, ಮುಖ, ಹಸ್ತ, ಪದಾರ್ಥ, ಪ್ರಸಾದ ಎಂಬ ಎಂಟು ವಿಧವಾದ ಸಕೀಲಗಳನ್ನು ತಿಳಿದು ಅನುಸಂಧಾನ ಮಾಡಿ ಅರ್ಪಿಸುವವನ ಕಾಯವು ಪ್ರಸಾದ ಕಾಯವಾಗುವದು.

## ಆರು ಸ್ಥಲಗಳಲ್ಲಿಯ ಅಷ್ಟವಿಧ ಸಕೀಲವು.

| ಭಕ್ತ | ಮಾಹೇಶ್ವರ | ಪ್ರಸಾದಿ | ಪ್ರಾಣಲಿಂಗಿ | ಶರಣ | ಐಕ್ಯ |
|---|---|---|---|---|---|
| ಅಂಗಗಳು | | | | | |
| ಪೃಥ್ವೀ | ಅಪ್ | ತೇಜ | ವಾಯು | ಆಕಾಶ | ಆತ್ಮ |
| ಲಿಂಗಗಳು | | | | | |
| ಆಚಾರಲಿಂಗ | ಗುರುಲಿಂಗ | ಶಿವಲಿಂಗ | ಜಂಗಮಲಿಂಗ | ಪ್ರಸಾದಲಿಂಗ | ಮಹಾಲಿಂಗ |
| ಭಕ್ತಿಗಳು | | | | | |
| ಶ್ರದ್ಧಾಭಕ್ತಿ | ನಿಷ್ಠಾಭಕ್ತಿ | ಅವಧಾನಭಕ್ತಿ | ಅನುಭವಭಕ್ತಿ | ಆನಂದಭಕ್ತಿ | ಸಮರಸ |
| ಶಕ್ತಿಗಳು | | | | | |
| ಕ್ರಿಯಾಶಕ್ತಿ | ಜ್ಞಾನಶಕ್ತಿ | ಇಚ್ಛಾಶಕ್ತಿ | ಆದಿಶಕ್ತಿ | ಪರಾಶಕ್ತಿ | ಚಿಚ್ಛಕ್ತಿ |
| ಮುಖಗಳು | | | | | |
| ನಾಸಿಕಾ | ಜಿಹ್ವಾ | ನೇತ್ರ | ತ್ವಕ್ | ಶ್ರೋತ್ರ | ಹೃದಯ |
| ಹಸ್ತಗಳು | | | | | |
| ಸುಚಿತ್ತ | ಸುಬುದ್ಧಿ | ನಿರಂಹಭಾವ | ಸುಮನ | ಸುಜ್ಞಾನ | ಸದ್ಭಾವ |
| ಪದಾರ್ಥಗಳು | | | | | |
| ಚಂದನಾದಿ | ಮಧುರಾದಿ | ಶ್ವೇತಾದಿ | ಮೃದು ಕಠಿ | ವೀಣಾದಿ | ಸುಖಾದಿ |
| ಸುಗಂಧದ್ರವ್ಯ | ರಸವದ್ದ್ರವ್ಯ | ವರ್ಣದ್ರವ್ಯ | ಣಾದಿದ್ರವ್ಯ | ನಾದದ್ರವ್ಯ | ಪರಿಣಾಮ |
| ಪ್ರಸಾದಗಳು | | | | | |
| ಗಂಧ | ರಸ | ರೂಪ | ಸ್ಪರ್ಶ | ಶಬ್ದ | ತೃಪ್ತಿ |

ಅಂಗಲಿಂಗ ಸಂಬಂಧವೆಂದರೆ ಜೀವಶಿವರ ತಾದಾತ್ಮ್ಯವು. ಈ ತಾದಾತ್ಮ್ಯವು ಪದಾರ್ಥ, ಪ್ರಸಾದ, ಅರ್ಪಣ ಈ ಮೂರರಲ್ಲಿ ತೋರುವದು ಹೇಗೆಂದರೆ ಅಂಗನೆಂದರೆ ಜೀವ, ಲಿಂಗವೆಂದರೆ ಶಿವ, ಜೀವನೇ ಪದಾರ್ಥ, ಶಿವನೇ ಪ್ರಸಾದ ಈ ಉಭಯ (ಶಿವಜೀವ) ರ ತಾದಾತ್ಮ್ಯವೇ ಅರ್ಪಣವು, ಇದೇ ಪ್ರಸಾದಾರ್ಪಣದ ರಹಸ್ಯ.

ಮನದ ಆಶೆಯಿಂದ ಪದಾರ್ಥವನ್ನು ತಕ್ಕೊಂಡು ಅದು ಲಿಂಗಕ್ಕೆ ಸಲ್ಲಿತು ಎಂದು ಹೇಳಿದರೆ ತನುಮನಗಳಿಂದ ಮುಟ್ಟಲ್ಪಟ್ಟ ಆ ಪದಾರ್ಥವು ಲಿಂಗಕ್ಕೆ ಸಲ್ಲುವದಿಲ್ಲ ಅಂಥ ಸಲ್ಲದ ಪದಾರ್ಥವನ್ನು ಸೇವಿಸುತ್ತ ನಾನು ಪ್ರಸಾದಿ ಎಂದು ಹೇಳಿದರೆ ಶರಣರು ಒಪ್ಪುವದಿಲ್ಲ. ಬೇಡಿ ಬಂದ ಪದಾರ್ಥವನ್ನು ಪೂರ್ವಾಶ್ರಯ ಕಳೆದು (ಪ್ರಸಾದಮಾಡಿ) ಲಿಂಗಕ್ಕರ್ಪಿಸಿಯೇ ಸೇವಿಸುವೆನೆಂದು ನಿಜವಾದ ಪ್ರಸಾದಿಯು ಹೇಳಲಾರನು. ಆದರೆ ಲಿಂಗದಾಣತಿಯಿಂದ ಬಯಸದೇ ಬಂದುದನ್ನು ಲಿಂಗಕ್ಕರ್ಪಿಸಿ ಭೋಗಿಸುವನು. ಅಂಗವನ್ನು ಶಿವನಿಗರ್ಪಿಸಲು ಅದು ಲಿಂಗವಾಗುವದು, ಇಂದ್ರಿಯಗಳ ಸಂಗದಿಂದುಂಟಾಗುವ ಸುಖವನ್ನೆಲ್ಲಾ ಲಿಂಗಕ್ಕರ್ಪಿಸಲು ಆ ಸುಖವು ಲಿಂಗಮಯ

ವಾಗುವದು, ಹತ್ತು ಇಂದ್ರಿಯಗಳಿಗೆ ಅಧ್ಯಕ್ಷವಾದ ಮನವು ಲಿಂಗದಲ್ಲಿ ಲೀನವಾಗಲು ಆ ಇಂದ್ರಿಯಗಳು ಹೊರಗಿನ ವಿಷಯಗಳನ್ನೇ ಗ್ರಹಿಸುವದಿಲ್ಲ, ಮನದ ನೆನಹೇ ಪ್ರಾಣಲಿಂಗದ ಭೋಗವಾಗುವದು.

| ಸಂಧಿ | ವಿಷಯ | ಪುಟ ೨೭೧-೨೯೯ |
|---|---|---|
| ೧೮ | ಪ್ರಾಣಲಿಂಗಿ | ಪದ್ಯ-೧೧೦ |

**ಪ್ರಾಣ ಸಹಿತವಾಗಿ ಮಾಡಿದುದೇ ಅರ್ಚನೆಯಾಗುವದರಿಂದ ಪ್ರಾಣವಿರಹಿತವಾದ ಕ್ರಿಯೆಯನ್ನು ತ್ಯಜಿಸಿ, ಇಂದ್ರಿಯ ಗುಣಗಳನ್ನು ಪ್ರಾಣದಲ್ಲಿ ಸಂಬಂಧಿಸದೆ, ಪ್ರಾಣಲಿಂಗ ಪೂಜಾತತ್ಪರವಾದ ಚಿತ್ತವುಳ್ಳವನು ಪ್ರಾಣಲಿಂಗಿಯು.**

ಶಿವಭಕ್ತಿಯುಳ್ಳ ಸರ್ವರಿಗೂ ಪ್ರಸಾದವೇ ಮುಖ್ಯವಾದುದು, ಪ್ರಸಾದವಿರಹಿತ ರಾದವರಿಗೆ ಸಮರಸ ಭಕ್ತಿಯು ದೊರೆಯುವದಿಲ್ಲ. ಈ ಪ್ರಸಾದವು ಶಿವಜೀವರ ಯೋಗದಿಂದುಂಟಾಗುವದು. ಎಲ್ಲವೂ ಶಿವಮಯವಾಗಿರುವದೆಂಬ ಭಾವನೆಯುಳ್ಳ ಪ್ರಸಾದಿಯು ಬಾಹ್ಯಕ್ರಿಯೆಗಳನ್ನು ಬಿಟ್ಟು ಶಿವಯೋಗ ಪರನಾಗಿ ಲಿಂಗಪ್ರಾಣಿ ಯಾಗಲು ಪ್ರಾಣಲಿಂಗಿ ಎನಿಸಿಕೊಳ್ಳುವನು.

ಈ ಲಿಂಗಪ್ರಾಣಿಯಾದವನಿಗೆ ಭಕ್ತ, ಮಾಹೇಶ್ವರ, ಪ್ರಸಾದಿ ಸ್ಥಲಗಳಲ್ಲಿ ಹೇಳಲ್ಪಟ್ಟ ಜ್ಞಾನಾಚರಣೆಯು ಲಿಂಗದ ಚೈತನ್ಯಸ್ವರೂಪವಾಗಿ ಪ್ರಾಣದಲ್ಲಿ ವ್ಯಾಪಿಸುವದರಿಂದ ಆ ಲಿಂಗದೊಡನೆ ಕೂಡಿದ ಪ್ರಾಣವೇ ಲಿಂಗವಾಗಿ ಪ್ರಾಣಲಿಂಗಿ ಯಾಗುವದರಿಂದ ಇವನು ಯೋಗೀಶ್ವರನೆನಿಸಿಕೊಳ್ಳುವನು.

ಶಿಷ್ಯ :—ಗುರುವೆ? ಅಂತಃಕರಣಗಳನ್ನಾಶ್ರಯಿಸಿ, ಯಾವಾಗಲೂ ಕಾಯದ ಕರ್ಮಗಳಿಗೆ ಅಧೀನನಾಗಿ ಕೇವಲ ಮಾಯಾಮಯವಾದ ಕಾಯದಲ್ಲಿ ಅಣುರೂಪ ದಿಂದ ಸೇರಿ ದೇಹಿ ಎನಿಸಿಕೊಂಡು, ಸಂಸಾರವೆಂಬ ಮಹಾರಣ್ಯದಲ್ಲಿ ಭ್ರಾಂತಿಯಿಂದ ದಿಕ್ಕುಗಾಣದೆ ನಿರಂತರ ಸಂಚರಿಸುತ್ತಿರುವ ಜೀವನು ಲಿಂಗಸ್ವರೂಪನು ಹೇಗೆ ಆದಾನು ? ದಕ್ಷಿಣ ದಿಕ್ಕಿನ ಕಡೆಗೆ ಹೊರಟ ಮಾನವನು ಸ್ವಲ್ಪ ಕಾಲದಲ್ಲಿ ಮೇರು ಪರ್ವತವನ್ನು ಸೇರುವನೆಂದು ಹೇಳುವ ಮಾತು ಹುಚ್ಚರ ಮಾತಾಗಲಿಕ್ಕಿಲ್ಲವೆ ? ನಾನಾ ಯೋನಿಯಲ್ಲಿ ಜನಿಸಿ ನಾನಾ ಕರ್ಮಗಳನ್ನು ಮಾಡುತ್ತ ಬಹುವಿಧ ಚಾರಿತ್ರ್ಯ ವುಳ್ಳವನಾಗಿ ಶಿವನಿಂದ ಪ್ರೇರಿತನಾದ ಪಶುರೂಪ ಜೀವನು ಆಯಾ ಕರ್ಮಫಲವ ನ್ನನುಭವಿಸುವದಕ್ಕಾಗಿ ಅಂಗವನ್ನಾಶ್ರಯಿಸಿ ಕರ್ಮಫಲದಿಂದ ಸ್ವರ್ಗವನ್ನೋ ನರಕವನ್ನೋ ಹೊಂದಿ, ಕರ್ಮಫಲವು ತೀರಲು ಪುನಃ ಜನಿಸಿ, ಪುನಃ ಸತ್ತು, ಹೀಗೆ

ಜನನ ಮರಣ ಸಂಕೋಲೆಯಲ್ಲಿ ಸಿಕ್ಕು ಒದ್ದಾಡುವನು. ಇಂಥವನಿಗೆ ಪರಶಿವ ಯೋಗವು ಹೇಗೆ ಸಾಧ್ಯ ?

ಗುರು :—ಶ್ರೀ ಗುರುವು ಕರುಣೆಯಿಂದ ಆತ್ಮನ ಜೀವ ಗುಣಗಳನ್ನು ಹೋಗಲಾಡಿಸಿ ತನು ಕರಣೇಂದ್ರಿಯಗಳಲ್ಲಿ ಪರಿಪೂರ್ಣ ಬ್ರಹ್ಮ (ಲಿಂಗ) ದ ಸಂಬಂಧವನ್ನು ಮಾಡಿದ ಬಳಿಕ ಸಂಸಾರದ ಸಂಗವು ಉಳಿಯುವದಿಲ್ಲ. ಸ್ಫಟಿಕ ಶಿಲೆಯು ಜಪಾ-ಕುಸುಮದ ಸಾನ್ನಿಧ್ಯದಿಂದ ಕೆಂಪಾಗಿ ತೋರಿದಂತೆ, ಜಡಾಹಂಕಾರದ ಯೋಗದಿಂದ ಆತ್ಮನಿಗೆ ತನುವು ಭೋಗಸಾಧನವಾಗಿ ತೋರಿದರೂ ಶಿವಯೋಗ ಬಲದಿಂದ ಅಂತಃಕರಣಾದೀಂದ್ರಿಯ ಗುಣಗಳನ್ನು ಹೊಂದಲಾರನು. ಶಿವತತ್ವಾನಂದಿತನಾಗುವನಲ್ಲದೆ ಜೀವನ ವೃತ್ತಿಗಳಿರುವದಿಲ್ಲ. ಮತ್ತು ಜನನ ಮರಣಗಳು ತನುವಿಗೆ ಉಂಟಾಗುವವಲ್ಲದೆ ಜೀವನಿಗಲ್ಲ. ಹಾವು ಪರೆಯನ್ನು ಕಳೆದುಕೊಂಡಂತೆ ಎಷ್ಟೋ ತನುಗಳು ಹೋಗುತ್ತಿರುವವು. ನಾನು ಕರ್ತೃವೂ ಜ್ಞಾತೃವೂ ಆಗಿರುವೆನೆನ್ನದೆ ತ್ರಿಗುಣಾತ್ಮಕನಲ್ಲವೆಂದೂ ತಿಳಿದುಕೊಂಡ ಘನಲಿಂಗಿಗೆ ಅಂಗವುಂಟಾದರೂ ಪ್ರಯೋಜನವಿರುವದಿಲ್ಲ. ಏಕೆಂದರೆ ಅವನು ತನು ಗುಣಗಳನ್ನು ಹೊಂದದೆ ಯಾವಾಗಲೂ ಶಿವಸುಖದಲ್ಲಿ ಲೀನವಾದ ಮನಸ್ಸುಳ್ಳವನಾಗಿರುವನು.

ಶಿಷ್ಯ :—ಗುರುದೇವಾ, ನಾನಾ ವಿಧವಾದ ಕರ್ಮಗಳಲ್ಲಿ ಸೇರಿಕೊಂಡಿರುವ ಜೀವನಿಗೆ, ಅಹಂಭಾವವನ್ನು ಮೀರಿದ ಸಹಜವಾದ ಮೋಕ್ಷಾಪೇಕ್ಷೆಯು ಹೇಗೆ ಉಂಟಾಗುವದು? ಕರ್ಮಗಳ ಬಂಧನವನ್ನು ತಪ್ಪಿಸಿಕೊಂಡು ನಾನೇ ಪರಮಾತ್ಮನೆಂಬರಿವು ಹೇಗೆ ಉಂಟಾಗುವದು ?

ಗುರು :—ಶಿಷ್ಯನೆ ಸೂರ್ಯಕಾಂತ ಕಲ್ಲಿನಲ್ಲಿ ಅಗ್ನಿಯು ಮೊದಲಿಗೆ ಇರದಿದ್ದರೆ ಸೂರ್ಯಕಿರಣ ಸಂಯೋಗದಿಂದ ಅದು ಪ್ರಜ್ವಲಿಸುತ್ತಿರಲಿಲ್ಲ. ಇದರಂತೆ ಜೀವನಲ್ಲಿ ಲೀನವಾಗಿದ್ದ ಶಿವಕಲೆಯು ಶ್ರೀಗುರುವಿನ ಉಪದೇಶಾಮೃತದಿಂದ ಪ್ರಜ್ವಲಿಸಿ ಅಜ್ಞಾನವೆಂಬ ಮಹಾರಣ್ಯವನ್ನು ದಹಿಸುವದು. ಎಳ್ಳನ್ನು ಗಾಣದಲ್ಲಿ ಹಾಕಿ ತಿರುಗಿಸಲು ಎಣ್ಣೆಯೂ ಹಿಂಡಿಯೂ ಬೇರೆ ಬೇರೆಯಾಗುವಂತೆ ಗುರುಕೃಪಾಬಲದಿಂದ ತನು ಕರಣೇಂದ್ರಿಯಗಳು ನಾನಲ್ಲ ನಾನು ಪರಶಿವ ಸ್ವರೂಪನೆಂಬರಿವು ಉಂಟಾಗುವದು. ಇದಲ್ಲದೆ ಪರಶಿವ ಚೈತನ್ಯವೇ ಜೀವರ ಶಿರೋಮಧ್ಯದಲ್ಲಿ ಬಿಂಬಿಸಲು ಪರಮಾತ್ಮನೆನಿಸಿಕೊಳ್ಳುವದು, ಭ್ರೂಮಧ್ಯದಲ್ಲಿ ಬಿಂಬಿಸಲು ಅಂತರಾತ್ಮನೆನಿಸಿಕೊಳ್ಳುವದು, ಹೃದಯ ಕಮಲದಲ್ಲಿ ಬಿಂಬಿಸಲು ಕರಣ ಸಹಿತವಾದ ಜೀವಾತ್ಮನೆನಿಸಿಕೊಳ್ಳುವದು. ಒಂದೇ ಭೂಮಿಯ ನೀರು ಬೇರೆ ಬೇರೆ ಸ್ಥಾನಗಳಲ್ಲಿ ಬೇರೆ ಬೇರೆ ಇರುವಂತೆ ಆತ್ಮರು ಸ್ಥಾನ ಭೇದದಿಂದ ಬೇರೆ ಬೇರೆ ಹೆಸರನ್ನು ಪಡೆದುಕೊಂಡಿದ್ದರೂ ಈ ಮೂವರ ನಿಜವಾದ

ಸ್ವರೂಪವು (ಪರಶಿವ ಚೈತನ್ಯವು) ಒಂದೇ ಇರುತ್ತದೆ. ಮತ್ತು ಆ ಪರಮಾತ್ಮನೇ ಬ್ರಹ್ಮರಂಧ್ರದಲ್ಲಿ ನಿಷ್ಕಲ ಸ್ವರೂಪನಾದ ಗುರುವಾಗಿಯೂ; ಭ್ರೂಮಧ್ಯದಲ್ಲಿ ಸಕಲ ನಿಷ್ಕಲವಾದ ಲಿಂಗವಾಗಿಯೂ, ಹೃದಯ ಕಮಲದಲ್ಲಿ ಸಾಕಲ್ಯಾತ್ಮಕ ಜಂಗಮ ನಾಗಿಯೂ ಇರುವನು. ಈ ವಿಧವಾಗಿ ತನ್ನನ್ನು ತಾನು ಅರಿವುದೆ ಶಿವಯೋಗವು. ಹಾಗು ತನುವಿನ ಮದವು ಅಳಿಯದಿದ್ದರೆ ಮಾಯಾಮದವು ನಾಶವಾಗುವದಿಲ್ಲ, ಮಾಯಾಮದವು ಹೋಗದಿದ್ದರೆ ಭವವು ನಾಶವಾಗುವದಿಲ್ಲ, ಭವವು ಅಳಿಯದಿದ್ದರೆ ಲಿಂಗದಲ್ಲಿ ಸಮರಸವು ಉಂಟಾಗಲಾರದು, ಈ ಸಮರಸವಿಲ್ಲದೆ ನಿತ್ಯಸುಖವು ದೊರೆಯ ಲಾರದು. ನಿತ್ಯಸುಖವನ್ನು ಮನಸ್ಸು ಹೊಂದಿದ ಬಳಿಕ ಆ ಸುಖದಿಂದ ಹಿಂಡಕ್ಕೆ ಸರಿಯದಂತೆ ಇರುವುದೇ ಶಿವಯೋಗವು, ಇಂತಹ ಶಿವಯೋಗಿಯಾದವನೇ ಪ್ರಾಣಲಿಂಗಿಯು.

| ಸಂಧಿ | ವಿಷಯ | ಪುಟ ೩೦೦-೩೧೪ |
|---|---|---|
| ೧೯ | ಶರಣ | ಪದ್ಯ-೫೪ |

**ನಿರ್ಮಲವಾದ ಭಕ್ತಿಜ್ಞಾನಗಳ ಯೋಗದಿಂದ**
**ಪರಶಿವನಲ್ಲಿ ಬೆರೆಯುವ ಸುಖವನ್ನು ಆ ಪರಶಿವನಿಗೆ**
**ಸುಮತಿಯಿಂದ ಸಮರ್ಪಿಸಿ ಭೋಗಿಸುವವನು ಶರಣನು,**

ಜ್ಞಾನವೇ ತನುವು, ಲಿಂಗವೇ ಜ್ಞೇಯವು, ಇವೆರಡರ ಅನುಸಂಧಾನವೇ ಜ್ಞಾತೃವು. ಜ್ಞಾನ, ಜ್ಞೇಯ, ಜ್ಞಾತೃ ಈ ಮೂರು ಒಂದಾಗುವದೇ ಘನಲಿಂಗವು. ಆ ಲಿಂಗದ ಧ್ಯಾನಪೂಜಾಸಕ್ತನಾದ ಅನುಭವ ಭಕ್ತಿಯಿಂದ ಪ್ರಾಣಲಿಂಗಿಯಾದವನು ಆನಂದ ಭಕ್ತಿಯುಕ್ತನಾದರೆ ಶರಣನೆನಿಸಿಕೊಳ್ಳುವನು. ಜ್ಞಾನ, ಜ್ಞೇಯ, ಜ್ಞಾತೃ ಎಂಬ ತ್ರಿಪುಟಿಯು ಶ್ರುತಿಯಲ್ಲಿ ಹೇಳಿದ ಭೇದವಿಶಿಷ್ಟ ತನುಕರಣೇಂದ್ರಿಯ ವ್ಯವ ಹಾರಪರವಾದುದಾಗಿಯೂ ಅಹಂಭಾವವಿಶಿಷ್ಟವಾಗಿಯೂ ಇರುತ್ತದೆ. ಈ ತ್ರಿಪುಟಿಯು ಬ್ರಹ್ಮಕ್ಕೆ ಇಲ್ಲದಿರುವುದರಿಂದ ತಾನೇ ಬ್ರಹ್ಮಸ್ವರೂಪನಾದ ಶರಣನು ಸೋಽಹಂಭಾವದಿಂದ ಲಿಂಗವನ್ನು ಪೂಜಿಸುವನು.

ನಿರಾಕಾರವಾದ ಆ ಪರವಸ್ತುವು ತಾನೇ ತನ್ನ ವಿನೋದಾರ್ಥವಾಗಿ ನಿಜಜ್ಞಾನ ವಾಗಿ ತೋರುವದು. ಸಕಲ ಬ್ರಹ್ಮಾಂಡಗಳನ್ನು ನಿರ್ಮಿಸಿದ ಮಾತೃವಾದ ಜ್ಞಾನ ರೂಪಿ ಚಿತ್ತೇ ಅಂಗಸ್ಥಲ, ಲಿಂಗಸ್ಥಲವೆಂದು ಎರಡಾಯಿತು. ಅಂಗವೇ ಶರಣ, ಲಿಂಗವೇ ಶಿವ. ಚಿದ್ರೂಪ ಶರಣನು ಸತಿ, ಸದ್ರೂಪ ಲಿಂಗವು ಪತಿ. ಈ ರೀತಿ ಸತಿಪತಿಭಾವವು ನೆಲೆಗೊಂಡು. ಆದರದಿಂದ ಸರ್ವೇಂದ್ರಿಯ ಸುಖಗಳನ್ನು ಲಿಂಗಕೆ ಅರ್ಪಿಸಿ ಆನಂದಭಕ್ತಿಯಿಂದ ಅದನ್ನು ಭೋಗಿಸುವವನು ಶರಣನೆನಿಸಿಕೊಳ್ಳುವನು.

| ಸಂಧಿ | ವಿಷಯ | ಪುಟ ೩೧೫-೩೨೪ |
| --- | --- | --- |
| ೨೦ | ಐಕ್ಯ | ಪದ್ಯ-೫೧ |

ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ ಎಂಬ ಐದು ಸ್ಥಲಗಳಲ್ಲಿ ಅರಿದ ಅವ್ಯಕ್ತನಾದ ಪರಶಿವನಲ್ಲಿ ಸಮರಸಭಕ್ತಿ, ಮುಕ್ತಿದಾಯಕವಾದ ನಿಷ್ಕಾಮಕ್ರಿಯೆ ಇವುಗಳಿಂದ ಬೆರೆದವನು ಐಕ್ಯನೆನಿಸುವನು.

ಶಿವಾನಂದವೆಂಬ ಮಹಾಸಾಗರದಲ್ಲಿ ಮುಳುಗಿದ, ಕೇವಲ ಶಿವಾದ್ವೈತಪರನಾದ ಗುರುವಿನಿಂದ ಅನುಗ್ರಹಿಸಲ್ಪಟ್ಟವನಾದ, ಸಮಸ್ತಪ್ರಪಂಚವನ್ನು ಶಿವಮಯವನ್ನಾಗಿ ಭಾವಿಸುವವನಾದ, ಮಾಯಾಶಕ್ತಿಯಿಂದ ಪರಿಕಲ್ಪಿತವಾದ ವಿಷಯಭೋಗವಿರಹಿತನಾದ ಶರಣನು ನಾನೇ ಶಿವನೆಂಬ ಭಾವನೆಯಿಂದ ಶಿವೈಕತ್ವವನ್ನು ಪಡೆದವನಾಗಿ ಐಕ್ಯನೆನಿಸಿಕೊಳ್ಳುವನು.

ಜೀವನಿಗೆ ಮಾಯಾಶಕ್ತಿರೂಪ ಬಂಧನದಿಂದ ಶಿವನಲ್ಲಿ ಭೇದಕಲ್ಪನೆಯುಂಟಾಗುವದು, ಅನಂತ ಬ್ರಹ್ಮಾಂಡಗಳೆಂಬ ಗುಳ್ಳೆಗಳ ಆವಿರ್ಭಾವದಿಂದ ಉಕ್ಕುತ್ತಿರುವಂಥ, ಮೂವತ್ತಾರು ತತ್ವಗಳೆಂಬ ತೆರೆಗಳಿಂದ ಕೂಡಿರುವಂಥ ಮಾಯಾ ಸಮುದ್ರವು ಶಿವಲಿಂಗೈಕ್ಯವೆಂಬ ವಡವಾಗ್ನಿಯಲ್ಲಿ ಲಯವನ್ನು ಹೊಂದಲು ಸಮಸ್ತ ಪ್ರಪಂಚವು ಶಿವಮಯವಾಗಿ ತೋರುವದಲ್ಲದೆ ಶಿವಾದ್ವೈತಕ್ಕಿಂತಲೂ ಭಿನ್ನವಾದುದಾಗಿ ಯಾವದೂ ತೋರುವದಿಲ್ಲ.

| ಸಂಧಿ | ವಿಷಯ | ಪುಟ ೩೨೯-೩೩೮ |
| --- | --- | --- |
| ೨೧ | ಸ್ವಲೀಲಾನಂದ | ಪದ್ಯ-೩೭ |

ಅಂಗನು ಲಿಂಗದೊಳಗೆ ಸಮರಸನಾಗಿ ಚಿದ್ಘನಲಿಂಗ ಸ್ವರೂಪವನ್ನು ಹೊಂದಿ ಸ್ವತಂತ್ರತೆಯಿಂದ ಅಂಗಲಿಂಗ ಭಾವವನ್ನರಿಯದೆ ತನ್ನನ್ನು ತಾನು ಪೂಜಿಸಿಕೊಳ್ಳುತ್ತಿರುವುದೇ ಸ್ವಲೀಲಾನಂದವು.

ಶ್ರೇಷ್ಠವಾದ ಪರಬ್ರಹ್ಮ (ಮಹಾಲಿಂಗ) ದೊಳು ಬೆರೆದು, ಆ ಚಿದ್ಘನಲಿಂಗವೇ ನಾನೆಂಬ ಅತ್ಯುತ್ಕಟವಾದ ಅಹಂಕಾರದ ಜ್ಞಾನವು ನಷ್ಟವಾಗಿ ಯಾವಾಗಲೂ ತನ್ನ ನಿಜಸ್ವರೂಪವನ್ನು ಮರೆಯದಂತೆ ಒಳಗೂ ಹೊರಗೂ ಸ್ಫುರಿಸುವಂತಹ ಅಖಂಡ ಪರಿಪೂರ್ಣ ಲಿಂಗವಾಗಿ ವಿರಾಜಿಸುವದೇ ಸ್ವಲೀಲಾನಂದವು.

ಆದಿಯಾದ ಶಿವಯೋಗಿಯು ತನ್ನ ಸದಾಚಾರ ಸದ್ವರ್ತನದಿಂದ ಪರಶಿವನಾಗಿರುವುದರಿಂದ ಆತನ ಸ್ವೇಚ್ಛಾಚರಣೆಯೇ ಶಿವಪೂಜೆಯಾಗಿರುವದು. ಶಾಶ್ವತವಾದ ಬ್ರಹ್ಮದಲ್ಲಿ ಯಾವಾಗಲೂ ಅಸದೃಶವಾದ ಭಕ್ತಿಯೇ ತನ್ನ ಸ್ವರೂಪವಾಗಿರುವುದು. ಜ್ಞಾನದಿಂದಲೇ ಮೋಕ್ಷವೆಂದು ಕೆಲವರು ಹೇಳುವರು. ಆದರೆ ಆ ಜ್ಞಾನ ಮತ್ತು ಅದರಿಂದಾಗುವ ಮೋಕ್ಷ ಇವೆರಡಕ್ಕೂ ಮೀರಿದುದು ನವೀನವಾದ ಶಾಂಭವ ಭಕ್ತಿಯು, ಇಂತಹ ಭಕ್ತಿಯ ವೈಭವದಲ್ಲಿ ತಾನೇ ತಾನಾಗಿ ಸ್ವಾನುಭವ ಪ್ರಭೆಯೊಳಗೆ ಅವಿರಳ ನಿಜೈಕ್ಯಾನಂದ ಪರನಾಗಿರುವುದೇ ಸ್ವಲೀಲಾನಂದವು.

---

ನಮ್ಮಲ್ಲಿರುವ ಕೈಬರಹವನ್ನು ಬರೆದವರು ಸ್ವಚ್ಛವಾಗಿಯೂ ಪರಿಶುದ್ಧವಾಗಿಯೂ ಬರೆದಿರುವದಿಲ್ಲ. ಇದರಿಂದ ಸಂದೇಹಬಂದ ಕಡೆಯಲ್ಲಿ ಪುನಃ ಪುನಃ ಮೂಲಪ್ರತಿಯಿರುವ ಮೈಸೂರ ಓರಿಯೆಂಟಲ ಲಾಯಬ್ರರಿಯ ರಿಸರ್ಚ ಅಧಿಕಾರಿಗಳನ್ನೇ ಕೇಳಿ ಕೇಳಿ ಮೂಲ ಪ್ರತಿಯಲ್ಲಿದ್ದಂತೆ ಪದ್ಯಗಳನ್ನು ಬರೆಯಿಸಿ ತರಿಸಿಕೊಂಡು ಮುದ್ರಣವನ್ನು ಮುಂದುವರಿಸಬೇಕಾಗಿ ಬಂದುದರಿಂದಲೂ, ಮುದ್ರಣದ ಕಾರ್ಯವು ಬಹಳ ಕುಂಠಿತವಾಗಿ ನಡೆದುದರಿಂದಲೂ, ಬೇರೆ ಬೇರೆ ಮುದ್ರಣಾಲಯಗಳಲ್ಲಿ ಕಾರ್ಯ ನಡೆದುದರಿಂದಲೂ ಬಹಳ ವಿಲಂಬವಾಗಿ ಈ ಗ್ರಂಥವು ಹೊರಗೆ ಬಂದಿತು. ಸಂಧಿ ೧೪ರಲ್ಲಿ ನಮ್ಮಲ್ಲಿರುವ ಪ್ರತಿಯಲ್ಲಿ ಮೂರನೆಯ ಪದ್ಯವಿರುವದಿಲ್ಲ. ಇದರ ಬಗ್ಗೆ ಪದ್ಯ ೪೪೮ ವರೆಗೆ ೧ ಸಂಖ್ಯೆ ಕಡಿಮೆಎಂದು ಭಾವಿಸಬೇಕು. ೪೪ ಅಂಕಿ ಎರಡು ಸಾರೆ ಬಿದ್ದಿದೆ ಎಂದು ಕಾರಣವು ಹೇಳಲ್ಪಟ್ಟಿದೆ. ಮೂಲ ಪ್ರತಿಯಲ್ಲಿ ಹೇಗಿರುವದೆಂದು ನಾವು ವಿಚಾರ ಮಾಡಿದಾಗ ಲಾಯಬ್ರರಿಯವರು ಮೂರನೇ ಪದ್ಯವನ್ನು ಕೆಳಗಿನಂತೆ

ಇದಮಹಂಭಾವಂತ್ರಿಪುಟಿ ಶ್ರುತಿ
ಗದಿತಭೇದ ಪರೋಕ್ಷತತ್ವಾ
ಭ್ಯುದಯತನು ಕರಣೇಂದ್ರಿಯಾದಿ ವ್ಯವಹೃತಿಪರಾದಿ ||

ಮುದಿತ ಸುಪರಬ್ರಹ್ಮಕಿಲ್ಲೆಂ
ದೊದಗಿ ತಾನೇ ಬ್ರಹ್ಮವಾದವ
ವಿದಿತ ಸೋಹಂಭಾವದಿಂ ಪೂಜಿಪುದು ಲಿಂಗವನು || ೩ ||

ಬರೆದು ಕಳುಹಿಸಿರುವರು, ವಾಚಕರ ಅವಗಾಹನೆಗಾಗಿ ಇಲ್ಲಿ ಕೊಟ್ಟಿದೆ.

**ಪಂಡಿತ ಬಸವರಾಜ ಶಾಸ್ತ್ರಿಗಳು ಬೃಹನ್ಮಠ, ಪಗಡದಿನ್ನಿ.**
ವ್ಯಾಕರಣತೀರ್ಥ (ಕಲಕತ್ತಾ), ವ್ಯಾಕರಣ ರತ್ನ (ಢಾಕಾ), ವ್ಯಾಕರಣ ಶಾಸ್ತ್ರೀ (ಕಾಶೀ),
ಸಾಹಿತ್ಯ ಶಿರೋಮಣಿ (ಮದ್ರಾಸ).

................

ಶ್ರೀ ಗುರು ಬಸವಲಿಂಗಾಯ ನಮಃ

# ಕ್ಷೇತ್ರಜ್ಞಸುಮನೋವಾದಂ

## ಪ್ರಥಮಸಂಧಿ

### ಭಾಮಿನಿ ಷಟ್ಪದಿ

ವಸ್ತುನಿರ್ದೇಶವನು ತನ್ನಯ
ಹಸ್ತಕಮಲಭವಂಗೆ ಮುದದಿಂ
ವಿಸ್ತರಿಸಿ ಪೇಳ್ದನು ಕೃಪಾರ್ಣವನಾದಿದೇಶಿಕನು ॥ ಪಲ್ಲವಿ ॥

ಶ್ರೀಮದವಿರಳ ಸಚ್ಚಿದಾನಂ-
ದಾಮಲಾತ್ಮಸಖಂಡ ಪೂರ್ಣೋ-
ದ್ದಾಮ ಶಿವತತ್ವಾನುಭವ ಸಂಸಿದ್ಧ ಸರ್ವಜ್ಞ ॥
ನಾಮರೂಪಾತೀತ ಸಂಸಾ-
ರಾಮಯೌಷಧ ಮುಕ್ತಿಕಾಂತಾ
ಪ್ರೇಮ ಚೆನ್ನವೃಷೇಂದ್ರ ಘನಯೋಗೀಂದ್ರ ಮಾಂ ಪಾಹಿ ॥ ೧ ॥

ಭಕ್ತ ಬಸವೇಶ್ವರ ಮಹಾನುಭ-
ವೋಕ್ತ ಚೆನ್ನವೃಷಾಧಿಪ ಪ್ರಭು
ಭಕ್ತ ಮಡಿವಳ ಘಟ್ಟಿವಳ ಶಿವಸಿದ್ಧರಾಮಯ್ಯ ||
ಸೂಕ್ತ ಸದ್ಗುರು ಲಿಂಗ ಜಂಗಮ-
ಭಕ್ತ ಲಿಂಗೈಕ್ಯರ ಪದಾಬ್ಜಂ
ವ್ಯಕ್ತಮಾಗಿ ಮದೀಯ ಹೃತ್ಕಾಸಾರದಲ್ಲಿರಲಿ || ೨ ||

ಆದ್ಯರನುಭವ ಸೂರ್ಯಸುದಯಂ
ವೇದ್ಯಮಾಗೆ ಮದೀಯ ಮಾನಸ
ಮಧ್ಯದೊಳು ಸಂವಿತ್ಸರೋಜಂ ವಿಕಸನಮನೈದಿ ||
ಬೋಧ್ಯ ಲಿಂಗಾಂಗಾಚರಣ ಸ-
ದ್ವಿದ್ಯೆಯಹ ಸೌರಭವು ಮುದದಿಂ
ಹೃದ್ಯಮಾಗಿರ್ಪುದು ತಿಳಿದು ಶರಣಾಳಿ ಸುಖಿಸುವುದು || ೩ ||

ಜ್ಞಾನಮೇ ತನುವಾದ ಸಮ್ಯಕ್-
ಜ್ಞಾನಮುಳ್ಳ ಮಹಿಮರು ದಿವ್ಯಮ-
ಹಾನುಭಾವರು ತಿಳಿದು ಸುಖಿಸುವರರಿಯುದಲೆ ಬರೆದೆ ||
ಜ್ಞಾನಹೀನರು ನಿಂದಿಸುವರೆಂ-
ದಾನು ಬಳಿಕಿದ ಕಂಜಿ ಪರಮ-
ಜ್ಞಾನಿಗಳ ಪದಾಬ್ಜಮಂ ಮೊರೆಗೊಂಡು ಬದುಕಿದೆನು || ೪ ||

ಶ್ರುತಿ ಪುರಾಣಾಗಮ ರಹಸ್ಯೋ-
ದಿತ ಪುರಾತನ ವಚನ ಶಾಸ್ತ್ರ ಪ್ರ-
ತತಿಯೊಳು ಸಾಧಿಸಿದ ಸಂವಿತ್ ಸಾರಸಂಗ್ರಹವು ||
ಜಿತ ಮಲತ್ರಯರಿದನು ಕರ್ಮಾವ-
ನತಿಗಳೆದು ಸುಜ್ಞಾನದಿಂದು-
ನ್ನತರೆನಿಪ ಸದ್ಭಕ್ತಿನಿಷ್ಠಾನ್ವಿತರು ಲಾಲಿಪುದು || ೫ ||

ನಿರುಪಮ ನಿರಾಕಾರ ನಿರ್ಗುಣ
ನಿರವಯ ನಿರಂಜನ ನಿರಾಮಯ
ನಿರತಿಶಯ ನಿಸ್ಸೀಮ ನಿರಘ ನಿರಂತ ನಿಶ್ಚಿಂತ ||
ನಿರಜ ನಿರ್ಭಯ ನಿರ್ವಿಕಾರನು
ನಿರಧಿಕನು ನಿರ್ನಾಮನು ನಿತ್ಯನು
ನಿರವಮಾನ ನಿರಾಕುಳ ನಿರುತ್ತರನು ನಿಷ್ಕಲನು || ೬ ||

ಅಪ್ರಮೇಯನಭೇದ್ಯನಸದೃಶ
ನಪ್ರತರ್ಕ್ಯನಚಿಂತ್ಯನಗಣಿತ-
ನಪ್ರಮಾಣನಸಾಧ್ಯನದ್ವಯನಪ್ರಕಟನನಘ
ಅಪ್ರತಿಷ್ಠನನಾಮನವಿರಳ-
ನಪ್ರತಿಮನನುಪಮನನಾಮಯ-
ನಪ್ರಶಂಸನಜೀಯ ನಮಳನನ ಪ್ರಪಂಚನಜನು || ೭ ||

ನಿತ್ಯನವಿಕಲನವಿರಳಂ ನಿಃ-
ಪ್ರತ್ಯಯಂ ಪ್ರತಿರಹಿತನಚಲಿತ-
ನತ್ಯಧಿಕನಗಣಿತನಗಮ್ಯನಮೂರ್ತನಮಲಿನನು ||
ಅತ್ಯತೀತನನಾದಿ ಮಲನಿಃ-
ಕೃತ್ಯನಕಲಂಕಂ ನಿರೀಹಂ
ಸತ್ಯನನಪಾಯಂ ನಿರಾತಂಕಂ ನಿಜೋದಯನು || ೮ ||

ಅರಿವು ಮರವೆಗಳಿಲ್ಲ ಪೆರತೊಂ-
ದರವಿಗರಸದ ನಿರುಗೆ ತೆರೆ ಮರೆ
ತೆರಹು ಕುರುಹುಗಳಿಲ್ಲ ತಾಂ ಪಿರದಲ್ಲದಿಹ ಬಚ್ಚ ||
ಬರಿಯರಿವು ಕರಿಗೊಂಡು ಮಿರುಗುವ
ಬೆರಗು ನಿಬ್ಬೆರಗಲ್ಲದಿಹ ನಿಜ-
ವರಿಯಬಾರದೆನುತ್ತೆ ಶ್ರುತಿಬಾಯ್ದೆರೆಯಲಂಜಿಹುವು || ೯ ||

ಇಂತಖಿಳ ತತ್ವಾಂಡ ಕೋಟ್ಯಾ-
ದ್ಯಂತವಾಚ್ಯಾವಾಚ್ಯರಹಿತಾ
ನಂತ ಮೂರ್ತಿಜ್ಞಾನಕಳೆ ಚೈತನ್ಯಕಳೆಯೆನಿಸಿ ||
ಮುಂತೆ ತಾನೇ ತಾನು ತನ್ನಿರ-
ವೆಂತುಟೆಂದು ವಿಭಾಗಿಸದೆ ನಿ-
ಶ್ಚಿಂತ ಮಾಗೊಪ್ಪಿಹ ಮಹಾಘನದಲ್ಲಿ ವಿವೇಳ್ಕಿಪ್ || ೧೦ ||

ಕೇಳಸಾದಿಯು ಶರಣಲಿಂಗಸ-
ಮೇಳವವಿರಳ ಸರ್ವ ಶೂನ್ಯ ನಿ-
ರಾಳದೊಳು ಚಿತ್ತಿಂಬುವೊಂದು ಸುಬಿಂದು ಸಂಜನಿಸಿ ||
ತಾಳಲದುವೆ ಷಡಂಗವುಂ ಶಿವ-
ನೋಳಿಯಿಂ ಷಡ್ಲಿಂಗವಾಗಿ ಸು-
ರಾಳದೊಳು ನೆಲೆಗೊಂಡು ಷಟ್‌ಸ್ಥಲನೆನಿಸಿಯೊಪ್ಪಿದನು || ೧೧ ||

ಸ್ವಸುಹಿತಾಂತರ್ಬಾಹ್ಯ ರಹಿತಾ-
ದಿಮ ನಿರಾಕುಳ ವಾಚ್ಯವಾಚಕ
ಸಮುಘರ ಶ್ರುತ್ಯನುಭವಾಖಂಡಾಪ್ರಯಾನಂದ ||
ಅಮಿತನಿರವಯುನೆಂತರಿವಿಗಾ-
ಶ್ರಮನೆನಿಸಿ ಗೋಚರಿಸಿದಂ ತ-
ದ್ವಿಮಲ ವಸ್ತುವಿನೆಂತುಪಯಿಸಿತು ನಾದಚಿದ್ಬಿಂದು || ೧೨ ||

ಮರುತನೆಚ್ಚ್ರವೊಳಿರ್ಪ ಶಬ್ದ-
ಸ್ಫುರಣೆಯಿಂ ತೋರ್ಪಂತೆ ಸುಚಿಹಂ-
ಬರದೊಳಾ ಚಿನ್ನಾದಮಯ ಚಿದ್ಬಿಂದು ಸಂಜನಿಸಿ ||
ನಿರುತ ಸುಜ್ಞಾನಂ ಸುತೃಪ್ತಿ
ಸ್ಫುರಪಸಂತಾಲುಪ್ತ ಸ್ವತಂ
ತರಿತ ನಿತ್ಯಾನಾದಿ ಬೋಧಾಂಗುಂಗಳೆನಿಸಿತ್ತು || ೧೩ ||

ಶೂನ್ಯ ನಿಷ್ಕಲ ಜಂಗಮದ ಚೈ-
ತನ್ಯ ಮಾತ್ರಮನಂಗ ಮಾತ್ರಮ-
ನನ್ಯಮೆನಿಸಲು ಲಿಂಗಷಡ್ವಿಧ ಯೋಗಿಯಂಗದೊಳು ॥
ಮಾನ್ಯ ಸಮ್ಯಕ್ ಜ್ಞಾನಮದ ಸೌ-
ಜನ್ಯದಿಂಪಾಚರಿಸಿ ಮಹದವ
ಧಾನದಿಂ ತಲ್ಲೀಯಮಾಗಲು ಬಳಿಕನಾದಿಯೊಳು ॥ ೧೪ ॥

ಸಚ್ಚಿದಾನಂದೈಕ ಬೋಧ
ಸ್ವೇಚ್ಛ ನಿತ್ಯಾಖಂಡ ಪೂರ್ಣ ಸ-
ಮುಚ್ಚಯ ಸುಗುರು ಲಿಂಗ ಚರ ಶೇಷಾಂಘ್ರಿಜಲ ಮಂತ್ರ ॥
ಅಚ್ಚಮೂರ್ತಿಗಳಂಗಮಾಗಿರೆ
ಬಿಚ್ಚಿ ಸರ್ವಾಧಾರನಾಗು-
ದ್ಯುಚ್ಚರಣೆ ಕಳೆಯೆನಲನಾದಿಯ ಭಕ್ತನೊಪ್ಪಿಹನು ॥ ೧೫ ॥

ಅಕುಲ ಮಹಾತ್ಮ ಹೃತ್ಕಮಲದಿಂ
ಪ್ರಕಟಿತಂ ಚರಲಿಂಗಮಾಚರ-
ಮಕುಟದಿಂ ಘನಶೂನ್ಯಮಲ್ಲಿ ಶಿವಾದಿ ಭೂಮ್ಯಂತ ॥
ವಿಕಟ ವಿಶ್ವದ ಸೃಷ್ಟಿಕಾರಣ
ನಿಕಟ ಮೂಲ ಸ್ತಂಭರೂಪ-
ಪ್ರಕಟನಿಃಶಬ್ದಾತ್ಮನೆನಿಸಲೊಪ್ಪಿಹುದು ಶಿವತತ್ವಮ್ ॥ ೧೬ ॥

ಆ ಮಹಾನಿರ್ವಾಚ್ಯಪದ ನಿಃ-
ಸೀಮ ನಾಮಾತೀತ ನಿಜದಿಂ-
ಘೋಮಿತಿ ಸುನಾದಂ ಪ್ರಥಮದೊಳು ಜನಿಸಿತದರಿಂದ ॥
ಈ ಮಹಿತ ವಿಶ್ವಪ್ರಕಾಶೋ-
ದ್ಧಾಮಕಾರಣಮಪ್ಪುದಾಗಿದ-
ಕೀ ಮಹಾಘನಲಿಂಗ ಮೆಂಬಭಿಧಾನಮುದಿಸಿತ್ತು ॥ ೧೭ ॥

ಅಪ್ರತಿಮ ಕೇಳ್ ನಾಮಸೀಮಾ-
ದಿಪ್ರಮಾಣಾತೀತ ನಿಃಶ-
ಬ್ದಾಪ್ರಮೇಯ ಬ್ರಹ್ಮದಿಂದೋಮಿತಿ ಮಹಾನಾದಮ್ ||
ಸುಪ್ರಸನ್ನಂ ಮೊದಲೊಳು ಸುರಾ-
ವಪ್ರಕಾರದೆ ಲಿಂಗದಿಂ ವಿ-
ಶ್ವಪ್ರಪಂಚು ಪ್ರಕಟವೆಹಗಾದುದು ವಿಚಾರಿಸಲು || ೧೮ ||

ಚಾರು ಗಗನಾಂಬುಧಿಗಳೊಳು ಗಂ-
ಭೀರನಾದಂ ಬುದ್ಬುದ ಸ್ವೀ-
ಕಾರ ಮುದಿಪಂತಾ ಚಿದಂಬರದಲ್ಲಿ ಚಿತ್ತೆಂಬ ||
ಆರವಂ ಸಂಜನಿಸಿತದರಿಂ
ಸಾರವಿಶ್ವದ ತೋರ್ಕೆಗಾಸ್ಪದ-
ಕಾರಣಾತ್ಮಕ ಸಗುಣನಿರ್ಗುಣ ಘನದ ಮಹದಿರವು || ೧೯ ||

ಶ್ವಸನಸಂಚಲದಿಂ ನಭೋಬ್ಧಿ ಗ-
ಳೊಸೆದ ನಾದಸಮೇತಬುದ್ಬುದ-
ವಿಸರಯುತವಹವಂತಿವೆಲ್ಲಾ ನಿಜದೊಳೀ ನಾದಮ್ ||
ನಿಶಿತ ಸಂಚಲವಿಲ್ಲದೆಂತುದ-
ಯಿಸಿದುದದರಿಂ ಲಿಂಗನಾಮ
ಪ್ರಸವವೆಂತಾಯ್ತಯ್ಯ ವಿಸ್ಮಯಮೆನಗೆ ಭಾವಿಪೊಡೆ || ೨೦ ||

ಅವಿಕಲಾನಿರ್ವಾಚ್ಯವೇ ಬ್ರ-
ಹ್ಮವು ಮಹಾಬ್ರಹ್ಮವೇ ಸಮಸ್ತ
ಪ್ರವರವಿದೆ ತದ್ವಸ್ತುನಿರ್ದೇಶಂ ಬಯಲೊಳಗಲಾ ||
ಪವನದಂಡಾಕಾರದಂತಾ-
ದ್ಯವಿರಳ ಬ್ರಹ್ಮದೊಳುರು ಸ್ಪಂ-
ದವಿದೆ ಸಂಚಲ ಚಲಿಸಿದಾಕ್ಷಣ ಮುದಿಸಿತಾ ನಾದಮ್ || ೨೧ ||

ಭೂನಭಂಗಳ ಮಧ್ಯದೊಳು ಪವ
ಮಾನದಂಡಾವರ್ತ ಮುದಿಪುದು
ಭೂನಭದ್ವಯ ಮಿಲ್ಲದಿರಲೆಂತುದ್ಭವಿಪುದರಿಯೆ ||
ಏನುಮಿಲ್ಲದ ನಿಜದೊಳಿರಡುಂ
ಸಾನುಮತದಿಂ ಸ್ಪಂದಮಾನ-
ಜ್ಞಾನದಿಂ ರಾಜಿಸಿತೆಹಗೆ ಸಂಜನಿಸಿತಾ ನಾದವು || ೨೨ ||

ವಾಚ್ಯರಹಿತ ಬ್ರಹ್ಮವೇ ತಾಂ
ವಾಚ್ಯಮೆನಿಸಲುಭಯಮಿಹವು ತ-
ದ್ವಾಚ್ಯಮವನಿಗೆ ಸಮಮನಿರ್ವಾಚ್ಯವೆ ವಿಯತ್ಸಮವು ||
ವಾಚ್ಯದಿಂ ಚಿದ್ಬಿಂಬಮದನಿ
ರ್ವಾಚ್ಯದಿಂ ಚಿದ್ಗಗನಮೀದ್ವಯ-
ವಾಚ್ಯಯುಗದಿಂ ಸ್ಪಂದಮುದ್ಭವಿಸಿತು ವಿಚಾರಿಸಲು || ೨೩ ||

ಶಾಶ್ವತಾನಿರ್ವಾಚ್ಯಮೇ ಬ್ರ-
ಹ್ಮಸ್ವರೂಪಮಿದಸ್ತಿ ನಾಮ ಮಿ-
ದೆಸ್ವಯಂ ಚಿಚ್ಛಕ್ತಿಸಂಭವಮದರೊಳಾ ಸ್ಪಂದವು ||
ಭಾಸ್ವರಸ್ಪಂದದೊಳು ನಾದಮ-
ನಸ್ವರಮನವರಿಂ ಪರಪ್ರಣ-
ವ ಸ್ವರೂಪಾನಾದವಾದಿಕವೆಂದು ಪೇಳಿದೆನು || ೨೪ ||

ಸ್ಪಂದವೇ ಚಿಚ್ಛಕ್ತಿಯಿಂ ಭವ-
ಮೆಂದಪೆ ಸ್ಪಂದದೊಳು ನಾದಮ-
ನೊಂದು ಪೇಳಾ ಸ್ಪಂದನಾದಯುಗಾನುಭಾವದೊಳು ||
ಮುಂದನಾದಂ ಪ್ರಥಮವೆಂದಿಂ-
ಗೆಂದೆರಡನುಸುರಲ್ತಿಳಿಯದೇ
ನೆಂದು ನಾದಸ್ಪಂದಯುಗ್ಮದೊಳಾವುದಾದಿಯಲಿ || ೨೫ ||

ಶೀತ ಮರುತಂಗಳವೊಲಿಪರ ಸ-
ಮೇತ ಜನನಂ ಸ್ಪಂದನಾದಮ-
ನೇತರದೊಳರಿದವನು ಬೇರ್ಪಡಿಸುವೊಡಶಕ್ಯವಲಾ ॥
ಚೇತನಾತ್ಮಸ್ಪಂದಮೇ ನಿ-
ರ್ಣೀತ ಚಿನ್ನಾದ ಸ್ವರೂಪೆಂ-
ದೇ ತಿಳಿ ಶಿವೋದಿತ ರಹಸ್ಯಾಗಮದ ಸೂಕ್ತಿಯೊಳು ॥ ೨೬ ॥

ಅಮಿತ ಚೈತನ್ಯಸ್ವರೂಪ
ಸ್ವಮಹಿತ ಬ್ರಹ್ಮಂಗೆ ಮಯ ಚಿ-
ದ್ರಮಣಿ ಸಂಜಾತಾಯತ ಸ್ಪಂದನೆ ಸುದೀರ್ಘಾತ್ಮ ॥
ಪ್ರಮುಖ ಗಂಭೀರ ಸ್ವರಸ್ಫುರ-
ದಮಲ ನಾದಮೆನಲ್ ತದೀಯಾ-
ಗಮರಹಸ್ಯಾರ್ಥವನು ಪೇಳುವೆನಲ್ಲಿ ತಿಳಿವಂತೆ ॥ ೨೭ ॥

ಆ ಪರ ಪ್ರಣವಾತ್ಮ ಸಚ್ಚಿ
ದ್ರೂಪ ಸತ್ಯಜ್ಞಾನ ಮುಖತಾ-
ಲೇಪ ಲಕ್ಷಣವಾಚ್ಯಮಯ ಗಂಭೀರವಹ ನಾದವರ್ ॥
ಆ ಪುನೀತ ಸ್ಪಂದದಿಂ ವಿ-
ಖ್ಯಾಪಿತ ಸ್ವರಶಬ್ದದಂತಾ-
ಯ್ತೀ ಪರಿಯೊಳಾ ನಾದದಿಂ ಕಳೆ ಜನಿಸಿತನುವಿಡಿದು ॥ ೨೮ ॥

ಸಮುಚಿತಾನಂದೈಕ ಬೋಧಾ-
ಸಮ ಸುಚಿತ್ರಸ್ಪಂದಮೇ ವಾ-
ಚ್ಯಮಹಿತಾನಾದಿ ಸ್ವರೂಪಾಲೀಢ ಪರಿಪೂರ್ಣಾ ॥
ಶಮಿತ ಲಘುಪರನಾದ ಮೆಂದೀ
ಗಮಿತ ನಾದದೊಳೀ ಕಳಾಮಯ
ಗಮನಮೆನಲೀ ಪ್ರಭೆ ಸುನಾದದೊಳುಂಟು ವಿವರಿಸಲು ॥ ೨೯ ॥

ಪ್ರಣುತ ಜಲಧರನಾದದಲ್ಲೀ
ಕ್ಷಣರುಚಿ ಪ್ರಾದುರ್ಭವಿಸಿತಾ-
ಕ್ಷಣದೊಳಂತೆ ಚಿದಂಬರದೊಳಾ ಸ್ಪಂದಮಯ ಪಂಚ ||
ಪ್ರಣವಮಿಳಿತ ಸುಪಂಚನಾದಾ-
ಗ್ರಣಿ ಸುನಾದದೊಳೀ ಕಳೆಯಿ ಕಾ-
ರಣವೆನಿಸಿ ಸಂಜನಿಸಿತೀ ಚಿತ್ಕಳೆಯನನುವಿಡಿದು || ೩೦ ||

ಚಿತ್ತು ಸಂದಿತ್ತೆಂಬರಾ ವೇ-
ದೋತ್ತರ ಜ್ಞಾನಾನುಭವಿಗಳು-
ದಾತ್ತಸಿದ್ಧಾಂತಿಗಳು ಲಕ್ಷಿಸಿ ಜಿತತಮಃ ಪೂರ್ಣ ||
ವೆತ್ತ ಬಿಂಬಂ ಬಿಂಬಮೆ ಸುಚಿ-
ದುತ್ತಮ ಶ್ರೀಗುರುಪದವನರು-
ಪಿತ್ತದೆಂಬರು ಜನಿಸಿತೀ ಕಳೆಯಿಂ ಮಹಾಬಿಂದು || ೩೧ ||

ಜಿತತಮಃ ಪರಿಪೂರ್ಣ ಭಾವ್ಪೋ-
ದಿತ ಕಲಾಧ್ವಾತೀತ ಸಂವಿ
ನ್ಮತಪರಬ್ರಹ್ಮಾಂಗರುಚಿ ನಾದಾದಿಕಳೆಯಲ್ಲಿ ||
ವಿತತ ಚಿದ್ರಸಮಿಲ್ಲದಿರೆ ರಂ-
ಜಿತಮಹುದೆ ತತ್ಪಾಪ್ತಬಿಂದು-
ಸ್ಥಿತಿ ಸಮಂಜಸಮಾಗೆ ನಿರವಿಪುದೆನ್ನೊಳರಿವಂತೆ || ೩೨ ||

ವಿನುತ ಜಲಧರನಾದ ಸೌದಾ-
ಮಿನಿಗಳುಂ ತಜ್ಜಲಕಣೋದಯ-
ಮೆನಿಸಿದಂತವಿಕಲಕನತ್ಕಳೆ ಚಿತ್ತು ಪರಿಪೂರ್ಣ ||
ವಿನುತ ನಾದದೊಳಾ ರಸಂಸಂ
ಜನಿಸಿ ಚಿದ್ರಸಮಾದುದರಿಂ
ಜನಿತ ಬಿಂದುವೆ ವಸ್ತುವೆಂದವು ಶ್ರುತಿಶಿವಾಗಮವೂ || ೩೩ ||

ಸಗುಣ ತತ್ವಾತೀತ ಭಾವ-
ಪ್ರಗಣಿತಾದಿ ಮಹೋದಯಾಖಿಳ
ವಿಗತಮತಿ ವೇದಾಂತ ಸಿದ್ಧಾಂತಾನುಪರಬಿಂದು ||
ನಗಕಳಾ ಚಿನ್ನಾದರಸದಿಂ
ಬಗೆಯಲೀ ಪರಿಯಿಂ ಬಲಿದು ಚಿ-
ದ್ದೃಗುಪರಿಸ್ಥಿತ ಲಕ್ಷ್ಯಮೆನಿಸಿತು ತಿಳಿವೊಡರಿದೆನಗೆ || ೩೪ ||

ಚಂದ್ರಕಾಂತಂ ಬಿಂದುವಹ ಪರಿ
ಚಂದ್ರರುಚಿಯಿಂ ಪದ್ಮಿನೀ ಮುಖ-
ಚಂದ್ರಿಕಾಭರಿತಾತ್ಮತೇಜೋರಾಶಿ ಪರಿಪೂರ್ಣ ||
ಸಾಂದ್ರ ಪರಶಿವ ಸನ್ನಿಧಾನಾ-
ತಂದ್ರಿಯಿಂ ಚಿದ್ರಸಮೆ ಬಲಿದುರೆ
ರುಂದ್ರಿ ನಿಜಬಿಂದು ಸ್ವರೂಪಕಮಾದುದಿಂತಿದನು || ೩೫ ||

ಜ್ಯೋತಿರಾಕಾರೈಕಮೇ ತ-
ತ್ವಾತಿಶಯದಿಂದಿಹುದನರಿಯದೆ
ಪೂತಮಯ ಮಹದಂಗಮೆಂಬರು ಕೆಲರು ಬಿಂದುವನು ||
ವೀತಗುಣ ಷಟ್‌ತ್ರಿಂಶತತ್ವಾ-
ತೀತನಿಜಮೆಂಬುವರು ಕೆಲರು ಸ-
ನಾತನ ಪ್ರಣವಸ್ವರೂಪಕಮೆಂಬುವರು ಕೆಲರು || ೩೬ ||

ಅಕುಟಿಲಾನಂದೈಕ ಬೋಧಾ-
ಧಿಕ ನಿರೂಢಪ್ರಾಣಲಿಂಗಾ-
ತ್ಮಕ ಸದೋದಿತ ನಾದಬಿಂದುಕಳೋಪಯಾನ್ವಯವು ||
ಪ್ರಕಟಮಾಗಲರಿದೆನು ನಿನ್ನಿಂ
ಸಕಲನಿಷ್ಕಲ ಪೂರ್ಣ ಶಿವಶ-
ಕ್ತಿಕನದವಿರಳಲಿಂಗ ನಿಜಮೆಂತಿಹುದು ನಿರವಿಪುದು || ೩೭ ||

ಆದಿವಾಚಕ ಶಬ್ದಮಂತ್ರಾ-
ಮೋದ ಷಡ್ ವರ್ಣಾಪರ ಸುಮಹ-
ದಾದಿ ಸಾಕಲ್ಯಪ್ರಣವ ಶಿವಶಕ್ತಿಮಯ ಪೂರ್ಣ ||
ನಾದ ಬಿಂದುವು ಕಳೆ ಕಳೈಕ್ಯಾ-
ಭೇದ ಸಂಜ್ಞಾ ಪಂಚಕಂಗಳಿ-
ನೈದೆ ಲಿಂಗಂ ಗೋಳಕಾಕಾರಾತ್ಮಮಾಗಿಹುದು || ೩೮ ||

ಮಂಗಳಪ್ರದ ನಾದಮೇ ಶಿವ-
ಲಿಂಗ ಬಿಂದುವೆ ಪೀಠಮುಭಯೋ-
ತ್ತುಂಗ ಕೂಟಮೆ ಕಳೆ ಸದೋದಿತ ಸಚ್ಚಿದಾನಂದ ||
ಸಾಂಗ ಪರಿಪೂರ್ಣಾಸ್ತಿ ಭಾತ್ಪ್ರಿಯ
ಸಂಗತಾಯತ ತತ್ತ್ವಮಸಿ ಮಹ-
ದಂಗಲಿಂಗೈಕ್ಯಾನುಭವಮಯ ಮೆನಿಸಿ ಜನಿಸಿತ್ತು || ೩೯ ||

ಅಸ್ತಿ ಭಾತಿ ಪ್ರೀತಿ ಸಚ್ಚಿ-
ದ್ವಸ್ತು ತಾ ಸ್ವವಿನೋದದಿಂ ನಿಜ-
ಶಾಸ್ತ್ರ ಶಕ್ತಿಕ್ಷೋಭಮಾತ್ರದಿನುಭಯಮೆನಿಸಿತ್ತು ||
ಅಸ್ತಿ ನಾದಮೆ ಲಿಂಗಮಂಗ ಸ-
ಮಸ್ತ ಬಿಂದು ಪ್ರೀತಿ ಸಂಗ ಗ-
ಭಸ್ತಿ ಕಳೆಭಾತಿಗಳು ಲಿಂಗಾಂಗೈಕ್ಯ ಬಿಂದುಮಯಮ್ || ೪೦ ||

ನಾದಬಿಂದುಕಳಾತ್ಮ ನಿರ್ಮಾ-
ಯೋದಯಾಮಲ ಸಚ್ಚಿದಾನಂ
ದಾದಿ ಬಿಂದುತ್ರಿಪುಟಿ ಸುಮನನ ಮಂತ್ರಮಯುವೆನಿಪಾ ||
ಮೋದ ಪರಿಪೂರ್ಣಸ್ವರೂಪಾ-
ಭೇದವರ್ತನ ಮನವೆ ಚಿದ್ಘನ
ವೇದಿತಾಯತ ಲಿಂಗಕಂಗಾಕಾರಮಾಗಿಹುದು || ೪೧ ||

ಪರತರ ಬ್ರಹ್ಮೈಕ ತತ್ವ-
ಸ್ಫುರಣ ಚಿದ್ಘನಲಿಂಗಕಂತಃ-
ಕರಣರಹಿತಾನಂದ ಪರಶಕ್ತಿಯೆ ಶರೀರವಲಾ ||
ನಿರುತ ಪಂಚಬ್ರಹ್ಮದಿಂದಿ-
ತ್ತೆರಿದು ಪ್ರಕಟತಮಾದೆಯಲ್ಲದೆ
ಕರಮನಾದಿಯ ಶರಣನಾದಿಯ ಲಿಂಗವರಿ ಬಳಿಕ || ೪೨ ||

ಶಾಂತ ಶಿವನಿಂ ಚಿತ್ತು ಚಿತ್ತಿಂ
ಶಾಂತ್ಯತೀತೋತ್ತರೆ ಮಹಾಲಿಂ-
ಗಂ ತರಳ ಸಾದಾಖ್ಯಮಾ ಪಶುಪತಿ ಕಲಾಮೂರ್ತಿ ||
ಕಾಂತಶಿವನೆಂಬೈಕ್ಯನವನೊಳ-
ನಂತನುಪಮಾತೀತನವನಿಂ
ದಂತರಾತ್ಮಕನಿಂ ಮಹಾಸಾದಾಖ್ಯದುದ್ಭವವು || ೪೩ ||

ಆತನಿಂ ಪರಶಕ್ತಿ ಶಾಂತಾ-
ತೀತೆಯದರಿಂ ಸುಪ್ರಸಾದಂ
ಪೂತಸಾದಾಖ್ಯಂ ಮಹಾದೇವಂ ಕಲಾಮೂರ್ತಿ ||
ಆತನಿಂ ಕ್ಷೇತ್ರಜ್ಞ ಶರಣಂ
ಜಾತನವನಿಂದಾ ಸದಾಶಿವ-
ನಾತನಿಂದಂಬರವು ಶಿವಸಾದಾಖ್ಯಮುಪಯಮಿದು || ೪೪ ||

ಲಿಂಗದಿಂ ಮಹದಾದಿಶಕ್ತಿ ತ-
ದಂಗದಿಂ ಶಾಂತಿ ಸುಮಹಾಚರ-
ಲಿಂಗಮಾಸಾದಾಖ್ಯ ಭೀಮೇಶ್ವರ ಕಲಾಮೂರ್ತಿ ||
ಸಾಂಗ ಕರ್ತಾರ ಸ್ವಜೀವನ-
ಲಿಂಗಿಯವನಿಂದೀಶನವನಿಂ
ತುಂಗ ಮರುತನಮೂರ್ತಿಸಾದಾಖ್ಯ ಪ್ರಕಾಶಕವು || ೪೫ ||

ಶಿವನೊಳಿಚ್ಛಾಶಕ್ತಿಯವರಿಂ
ವಿವಿಧ ವಿದ್ಯಾಕಲೆ ಸುಶಿವಲಿಂ
ಗವದು ಸಾದಾಖ್ಯಂ ಮಹಾರುದ್ರಂ ಕಲಾಮೂರ್ತಿ ||
ಅವನೊಳಾಭಾವ ಪ್ರಸಾದಕ-
ನವನೊಳಾ ರುದ್ರಂ ಸರುದ್ರನೊ
ಳವಿರಳಾಗ್ನಿ ಸುಮೂರ್ತಿಸಾದಾಖ್ಯೋದಯಾಸ್ಪಯವು || ೪೬ ||

ಅಪ್ರತಿಮನಿಂ ಜ್ಞಾನಶಕ್ತಿ ಮ-
ಹಾ ಪ್ರತಿಷ್ಠಾಕಲೆ ಸುಗುರುಲಿಂ-
ಗಪ್ರಕಟ ಸಾದಾಖ್ಯ ಸರ್ವೇಶ್ವರ ಕಲಾಮೂರ್ತಿ ||
ಕ್ಷಿಪ್ರದಿಂ ಚೈತನ್ಯಮಾಹೇಶ-
ಪ್ರಮಥನವನಲ್ಲಿ ವಿಷ್ಣು ಜ-
ಲ ಪ್ರಕಾಶಂ ಕರ್ತೃ ಸಾದಾಖ್ಯಪ್ರಸಂಜಾತವ್ || ೪೭ ||

ಅವಿಕಲ ಬ್ರಹ್ಮಾದಿ ಕ್ರಿಯಾಶ-
ಕ್ತಿ ವಿನಿವೃತಾಚಾರಲಿಂಗೋ-
ದ್ಭವವಮಲ ಸಾದಾಖ್ಯಮುಭವಾಹ್ವಯ ಕಲಾಮೂರ್ತಿ ||
ಅವನೊಳಂತರ್ಯಾಮಿ ಭಕ್ತನ-
ವನೊಳಜನಾ ಬ್ರಹ್ಮನಿಂ ಭೂ-
ವಿವಿಧ ಸಕಲಂ ಕರ್ಮಸಾದಾಖ್ಯದ ಜನನಮಿಂತು || ೪೮ ||

ತಿಳಿಯೆ ಷಡ್ವಿಧ ಭೇದದಿಂ ನಿ-
ರ್ಮಳಿನ ಶಕ್ತಿ ಕಲಾದಿ ಲಿಂಗೋ-
ಜ್ವಳ ಮಹಾಸಾದಾಖ್ಯ ಪಶುಪತ್ಯಾದಿ ಷಣ್ಮೂರ್ತಿ ||
ನಿಳಸದವಸಘ ಶಿವಾದಿ ಘಟ್‌ಸ್ಥಲ-
ಗಳನು ಷಟ್‌ ಕೃತ್ಯಾಧಿಪರು ಕೇ-
ವಳ ಚಿದಾತ್ಮಾದಿಗಳು ಸಾಲ್ವತ್ತೆಂಟವರೊಳೊಲಿದು || ೪೯ ||

ಆ ಶಿವ ಕ್ಷೇತ್ರಜ್ಞ ಕರ್ತಾ-
ರೇಶ ಚೈತನ್ಯಾತ್ಮ ಭಾವ ನಿ-
ರಾಶಕಾಂತರ್ಯಾಮಿಯೆಂಬ ಷಡಂಗದೊಳು ಚಿತ್ತಾ ||
ಕಾಶ ಚಿದ್ರಸ ನಾದಬಿಂದು ಕ-
ಳಾ ಶುಭೋದಯ ಮಹದನಾದ್ಯ ವಿ-
ನಾಶ ವಿಮಲ ಬ್ರಹ್ಮಮಯವಾಗಿಯೆ ವಿರಾಜಿಸುವ || ೫೦ ||

ನಿರುತ ಕರ್ಮಂ ಕರ್ತೃ ಮೂರ್ತಿ
ಸ್ಫುರದ ಮೂರ್ತಿ ಶಿವಂ ಮಹೋದಯ
ಪರಮ ಸಾದಾಖ್ಯಾನುಭವ ಲಿಂಗಂಗಳಂ ತಾಳ್ದು ||
ವರ ಮಹಾಜ್ಞಾನೈಕ್ಯಭಾವಾ-
ಚರಣೆಯಿಂ ಚರಿಸಿಯೆ ತದೀಯಾ-
ಪರ ಪರಬ್ರಹ್ಮದೊಳಡಗಲಾ ಬ್ರಹ್ಮವೇ ಬಳಿಕ || ೫೧ ||

ಶಕ್ತಿಯೊಳಗದೆ ಸೃಷ್ಟಿಕಾರಣ
ಸೂಕ್ತ ಷಡ್ ಬ್ರಹ್ಮತ್ವಮೆನಿಸಲ್
ವ್ಯಕ್ತಿಸಿದುವಾರಾರು ಭೇದದೆ ತತ್ವ ಷಟ್‌ತ್ರಿಂಶ ||
ಶಕ್ತಿಷಟ್ಕಮೆ ಸರ್ವತತ್ವಾ-
ವ್ಯಕ್ತಕಾರಣಮಾಗಲಾ ಚಿ-
ಚ್ಛಕ್ತಿ ತಾನೆ ಷಡಂಗಭೇದವನಾಂತು ತೋರಿತ್ತು || ೫೨ ||

ನೆನಹುದೋರದೆ ಶಕ್ತಿಯೋಗಕೆ
ಮನವ ನಿಡಲೇನಾವಿಕೃತಿ ಚಿದ್
ಘನಪರಬ್ರಹ್ಮ ಸ್ವಲೀಲಾಸ್ಪದ ಸಂಯೋಗಪರ ||
ಮನನ ಮಂತ್ರ ಸುನಾದಮಯವಹ
ಮನವೆ ವಿಶ್ವೋತ್ಪತ್ತಿಕಾರಣ-
ಮೆನಿಸಿತಾ ಶಿವಶಕ್ತಿಯೊಳು ಸಂಚಲನೆಯೆಲ್ಲಿಯದು || ೫೩ ||

ಚಿತ್ತೆ ಮನನ ತ್ರಾಣ ರೂಪೋ-
ದಾತ್ತ ಸತ್ಯ ಜ್ಞಾನಮುಖ್ಯಾ
ಯತ್ತ ಲಕ್ಷಣಯುತ ಪರಾಪರ ನಾದಮಯ ದಿವ್ಯ ||
ಉತ್ತಮಾಮಲ ಮಂತ್ರವಾಚಕ
ಸತ್ತುವಾಯ್ತಂತದುವೆ ವಿಶ್ವೋ-
ತ್ಪತ್ತಿಕಾರಣವಾಗಿ ಷಡ್ ಬ್ರಹ್ಮತ್ವವೆನಿಸಿತ್ತು || ೫೪ ||

ಮಾನಿತಾಖಂಡೈಕ ಪೂರ್ಣ
ಸ್ವಾನುಭಾವೋದಯ ಪರಂ ವಿ-
ಜ್ಞಾನಮಾನಂದಂ ಕಲಾ ಪಿಂಡಂ ಮಹಾಮೂರ್ತಿ ||
ಪೀನ ಚೈತನ್ಯಸ್ವರೂಪಾ
ನೂನ ಷಡ್ಬ್ರಹ್ಮಕೆ ನಿಜದಿ ದಿ-
ವ್ಯಾನುಭವ ಷಟ್‌ಶಕ್ತಿಗಳೆ ಮಹದಂಗವಾಗಿಹವು || ೫೫ ||

ಆ ಶಿವ ಕ್ಷೇತ್ರಜ್ಞ ಕರ್ತಾ-
ರೇಶ ಚೈತನ್ಯಸ್ವಭಾವ ನಿ-
ರಾಶ ಕಾಂತರ್ಯಾಮಿ ಷಟ್‌ಸ್ಥಲಗಳೆ ಪರಬ್ರಹ್ಮಂ ||
ಈ ಶ್ರುತಿ ಜ್ಞಾನೈಕಶಬ್ದಾ-
ಕಾಶವಾಚಕ ಭವ ಪರಮ ಸ-
ದಾಶಿವಾದಿಗಳಮಲ ವಿಜ್ಞಾನಾಯತಬ್ರಹ್ಮಂ || ೫೬ ||

ಅನುಪಮೇಶ್ವರ ವಾಯು ಸಂಸ್ಪ-
ರ್ಶನ ಮನವು ಸತ್‌ಪಾಣಿಷಟ್ಕವೆ
ವಿನುತ ನಿತ್ಯಾನಂದ ಸದ್‌ಬ್ರಹ್ಮವು ಮಹಾರುದ್ರಂ ||
ಅನಲರೂಪಾಹಂಕೃತೀಕ್ಷಣ
ಘನಪದಾದಿಕ ಷಡ್ವಿಧವೆ ಚೇ-
ತನಕಲಾಬ್ರಹ್ಮಂ ರಮೇಶ್ವರ ಸಲಿಲ ರಸಬುದ್ಧಿ || ೫೭ ||

ಮೋದ ಜಿಹ್ವಾ ಗುಹ್ಯ ಷಡ್ವಿಧ-
ವೈದೆ ಪಿಂಡಬ್ರಹ್ಮಮಾ ಬ್ರ-
ಹ್ಮಾದಿ ಭೂಮಿ ಸುಗಂಧ ಚಿತ್ತತ್ತಘ್ರಾಣಪಾಯುಗಳೆ ||
ನಾದ ಮೂರ್ತಿಬ್ರಹ್ಮಮಕ್ಕಮ-
ಭೇದ ಷಡ್ಬ್ರಹ್ಮಸ್ವರೂಪಮ-
ಹೋದಯಂ ಬಳಿಕುಳಿದ ಶಕ್ತಿಯ ವರ್ಗಮೆಂತೆನಲು || ೫೮ ||

ಶಿವಶಿವಾಂಗಂ ಭೌತಿಕಾಂಗಂ
ವಿವಿಧ ಯೋಗಾಂಗಂ ಸಕಾಮಾಂ
ಗವು ಮಹಾವಿದ್ಯಾಂಗಮಾ ಕರ್ಮಾಂಗಮಿವರೊಳಗೆ ||
ಅವಿಕಲಾತ್ಮ ಬ್ರಹ್ಮವಿಷ್ಣು
ಪ್ರವರ ರುದ್ರೇಶ್ವರ ಸದಾಶಿವ
ಶಿವ ಷಡಧಿಕ ಶಿವಾಂಗಮಿದು ಚಿಚ್ಛಕ್ತಿಕಾರಣವು || ೫೯ ||

ಭೂ ಜಲಾನಲ ಮಾರುತಾಂಬರ
ರಾಜಿತ ಕ್ಷೇತ್ರಜ್ಞ ಷಡ್ವಿಧ
ಯೋಜಿತಮೆ ಭೂತಾಂಗಮಿದು ಪರಶಕ್ತಿಕಾರಣವು ||
ನೈಜಮಯ ಶಬ್ದಾದಿ ವಿಷಯ-ಸ-
ಮಾಜ ಕರ್ತಾರರೆ ಸುಯೋಗ
ಭ್ರಾಜಿತಾಂಗಮಿದಾದಿಶಕ್ತಿಯೆ ಕಾರಣಾತ್ಮಕವು || ೬೦ ||

ಪೀನ ಚಿತ್ತ ಸುಬುದ್ಧ್ಯಹಂಕೃತಿ
ಮಾನಸ ಜ್ಞಾನೈಕ ಭಾವವಿ-
ತಾನಮೇ ಕಾಮಾಂಗಮಿಚ್ಛಾಶಕ್ತಿ ಕಾರಣವು ||
ಭೂನುತ ಜ್ಞಾನೇಂದ್ರಿಯಾದ್ಯಸ-
ಮಾನ ಚೈತನ್ಯರೆ ಸುವಿದ್ಯಾ-
ಮಾನಿತಾಂಗಂ ಜ್ಞಾನಶಕ್ತಿಯೆ ಕಾರ್ಯಕಾರಣವು || ೬೧ ||

ಪಾಯು ಗುಹ್ಯ ಕರಾಂಘ್ರಿ ವಾಙ್ಮಹ-
ದಾಯತಾಂತರ್ಯಾಮಿಗಳೆ ನಿ-
ರ್ದಾಯ ಸತ್ಕರ್ಮಾಂಗವಿದಕಮಲ ಕ್ರಿಯಾಶಕ್ತಿ ||
ನ್ಯಾಯಕಾರಣವಿಂತು ತತ್ವ ನಿ-
ಕಾಯಮೇ ಸೃಷ್ಟಿಪ್ರಳಯ ಸಮು-
ಜೇಯ ಕಾರ್ಯಾಸ್ಪದಮೆನಿಸಿ ರಾಜಿಪುದು ವಿವರಿಸಲು || ೬೨ ||

ಸಾರ ಚಿಚ್ಛಕ್ತ್ಯಾದಿಕರ್ಮ ಶ-
ರೀರ ಪರ್ಯಂತರಮೆ ಸೃಷ್ಟಿಗೆ
ಕಾರಣಂ ಸ್ವಮಹಿತ ಪರಬ್ರಹ್ಮಾದಿಕಾನಂದ ||
ಚಾರು ಮೂರ್ತಿಬ್ರಹ್ಮಪರ್ಯಂ-
ತಾರುಮಾಪರ ತತ್ವಮೇ ಸಂ-
ಹಾರಕಾರಣಮೆನಿಸಿಯೊಪ್ಪಿಹುದಾದಿ ಶಿವತತ್ವಮ್ || ೬೩ ||

ಪಂಚಶಕ್ತಿ ನಿಯುಕ್ತದಿಂ ಸತ್
ಪಂಚಮುಖದಿಂ ದಶಭುಜದಿ ತ್ರೈ-
ಪಂಚಲೋಚನದಿಂ ಪದದ್ವಯದಿಂ ಧವಲತನುವಿಂ ||
ಪಂಚಪಂಚಾಯುಧದಿನೊಪ್ಪುವ
ಪಂಚಕೃತ್ಯಬ್ರಹ್ಮದಿಂದವೆ
ಪಂಚವಿಂಶತಿತತ್ವಮುಖ್ಯ ಸಮಸ್ತದುದ್ಭವವು || ೬೪ ||

ಅನುಪಮಾಖಂಡೈಕ ತತ್ತ್ವ
ಯನ ಮಹೋದಯ ಗಮನ ಸಚ್ಚಿ
ದ್ಘನ ಸದೋದಿತಪಾರಮಾರ್ಥಿಕ ವಿದಾಭವಮೂರ್ತಿ ||
ಕನದನಂತ ಬ್ರಹ್ಮವಿದ್ಯಾ
ವಿನಯಪರಷಡ್ವರ್ಗಮದಖೇ
ಳನಸಮಾರ್ದ್ರವಶ್ರುತಿವಚಸ್ಕ। ಜಯತು ಶುಭವಪುಷ್ಕ || ೬೫ ||

ಇದು ಸಮಸ್ತ ಶಿವಾನುಭಾವರ
ಪದಪಯೋರುಹಗಂಧಮುದಷಟ್
ಪದನು ಷಟ್‌ಸ್ಥಲಸಾರ್ವಭೌಮಂ ಚೆನ್ನವೃಷಭೇಂದ್ರವರ್ ||
ವಿದಿತವಾಗಿ ನಿರೂಪಿಸಿದ ಸ-
ಮ್ಮುದಮಹಾಕ್ಷೇತ್ರಜ್ಞ ಸುಮನೋ-
ವಾದದೊಳು ಸದ್ವಸ್ತುನಿರ್ದೇಶ ಪ್ರಥಮ ಸಂಧಿ

ಇತಿ ಕ್ಷೇತ್ರಜ್ಞ ಸುಮನೋವಾದೇ ವಸ್ತುನಿರ್ದೇಶ ವಿವರಣಂ ಪ್ರಥಮಂ ಪ್ರಕರಣವ್ ಅಂತು ಸ್ಥಲವೊಂದಕ್ಕಂ ಪದನು ೬೫ ಕ್ಕೆ ಸಮಾಪ್ತಂ ಮಂಗಲವ್

॥ ವಿಶ್ವೋತ್ಪತ್ತಿ ಸ್ಥಲಂ ॥

# ದ್ವಿತೀಯ ಸಂಧಿ

## ಪಲ್ಲವಂ

ವಿಶ್ವಮೂರ್ತಿ ಬ್ರಹ್ಮದಿಂದವೆ
ವಿಶ್ವಮಯುದಾ ಭೇದಮಂ ನಿಜ
ಶಾಶ್ವತಾತ್ಮಜನಲ್ಲಿ ಪೇಳ್ದನು ದೇಶಿಕೊತ್ತಮನು ॥

ಕ್ಷುದ್ರಮಾಯಾ ಮುಖಸರೋಜ ಲ
ಸದ್ರಮಾಕರ ಮುಕ್ತಿಕಾಂತಾ
ಹೃದ್ರುಚಿರನೀಲಾಂಬುಜನಿ ಸಂಕೋಚವಿಕಚಕರ ॥
ಚಿದ್ರಮಣ ಕರುಣಾಕಟಾಕ್ಷೋ
ದ್ಯದ್ರಮಾಗ್ರಜನಿಂ ಪರೋಕ್ಷಸ
ಮುದ್ರಮಂ ವರ್ಧಿಸಿ ಸದೋದಿತ ರಕ್ಷಿಸೆನ್ನುವನು ॥ ೧ ॥

ಮತ್ತನಾದಿಯ ಬಿಂದುತಾನೇ
ಸತ್ತು ಚಿತ್ತಾನಂದ ನಿತ್ಯಾ
ಯತ್ತ ಪರಿಪೂರ್ಣಸ್ವರೂಪಿಂ ಪಂಚ ಸಂಜ್ಞೆಗಳಿಂ ॥
ಚಿತ್ತ ವಿಶ್ವೋತ್ಪತ್ತಿಯಾದವ
ನತ್ತಣಿ ಸಚರಾಚರೋದಯ
ದತ್ತಣಿಂದೀ ಬಿಂದುವೇ ಮಹದಂಗಮೆನಿಸಿತ್ತು ॥ ೨ ॥

ಚಿತ್ರಮೆನಗೆ ವಿಚಾರಿಸಲು ಸ
ನ್ಮಾತ್ರಬಿಂದುವಿನಿಂ ಸಮಸ್ತಜ
ಗತ್ರಯೋದಯಮೆಂಬೊಡಾ ಬ್ರಹ್ಮವೆ ಸುನಾನಾತ್ವ ॥
ಪಾತ್ರಮಾದೊಡಜೇಯಮಯ ರಥ
ಸೂತ್ರದಂದದೊಳಖಿಳ ಕರ್ತೃಗ
ಳೀತ್ರಿಭುವನಕದೆಂತು ಸಚ್ಚಿದ್ರೂಪ ನಿರವಿಪುದು ॥ ೩ ॥

ಪಾರಶೇಷ ನ್ಯಾಯದಂತರಿ
ಯಾರಥಂಬಳಿಕೋರ್ವನಿಂದ ಹು
ದಾರಯಲ್ ಪ್ರಜ್ಞತ್ವವಭಿಮಾನದೊಳು ತಂತಮಗೆ ॥
ಸೇರಿ ತಾವೇ ಶ್ರೇಷ್ಠರೆಂಬ ವಿ
ಚಾರ ಬಹುಕರ್ತೃಗಳಿನೊಂದುಂ
ಕಾರಿಯ ನೇರ್ಪಡದು ಪರಶಿವನೋರ್ವನೇ ಕರ್ತನು ॥ ೪ ॥

ಕುಂಭದೊಲು ಕಾರ್ಯಾತ್ಮಭುವನವೆ
ಕುಂಬರನೊಲು ನಿಮಿತ್ತ ಕಾರಣ
ಸಾಂಬನಿಂ ಕಾಲ್ತಿಗುರಿಯೊಲು ಬಹುಕರ್ಮ ಸಹಕಾರಿ ॥
ಎಂಬ ಕಾರಣ ಬಿಂದು ಮಾಯೆಗ
ಳೆಂಬುಪಾದಾನೈಕ ಕಾರಣ
ದಿಂ ಬಹಳ ಸುಖದುಃಖಕಾರಣಮೆನಿಸಿ ಜನಿಸಿತ್ತು ॥ ೫ ॥

ಸಾರ ಸಚ್ಚಿದ್ರೂಪ ಶಿವನೆ ವಿ
ಚಾರಿಸಲು ಜಲಕುಂಭ ಚಂದ್ರನೊ
ಲಾರಮಾಕರ ದರ್ಪಣಪ್ರತಿಬಿಂಬ ದಂತಖಿಳಾ ॥
ಕಾರನುದಯಸ್ಥಿತಿಲಯಕ್ಕಾ
ಧಾರನವಿಕಲನದ್ವಿತೀಯಂ
ಸ್ಫಾರದವುಳನಿಮಿತ್ತಕಾರಣಕರ್ತನೆನಿಸುವನು ॥ ೬ ॥

ಸಕಲ ಕಮಲಭವಾಂಡದುದಯುವ
ಸಕಲ ಕಮಲಭವಾಂಡ ವಿಲಯುವ
ಸಕಲ ಭೂತೋತ್ಪತ್ತಿಯಿಂ ತನ್ಮಯದ ಬೆಳವಿಗೆಯು ॥
ಸಕಲ ಫಲಭೋಗಪ್ರಯಾಣಂ
ಪ್ರಕಟವಾಗಲು ಮಾಡುವಾಟಕೆ
ಪ್ರಕೃತಿಕಾಲಪರಾಣು ಕರ್ಮಾದಿಕವೆ ಕರ್ತೃಗಳು ॥ ೭ ॥

ಶಿವನ ಸನ್ಮೂಲ ಪ್ರಕೃತಿಯಿಂ
ದವೆಯುಸದ್ರೂಪ ಪ್ರಕೃತಿಪರ
ಶಿವನ ನಿತ್ಯದಿನಖಿಳ ಕಾಲಂ ಶಿವಮಯಾತ್ಮಕನಿಂ ॥
ವಿವಿಧ ಪರಮಾಣ್ವಾದಿಗಳು ಕ
ರ್ಮವಿಸರಂ ವರಬುದ್ಧಿಯಿಂ ಸಂ
ಭವಿಸಿ ಜಡರೂಪುಂಗಳಾಗಿಹವೆಂತು ಕರ್ತೃಗಳು ॥ ೮ ॥

ಮಾಯೆ ಮೊದಲಾದ ಖಿಳ ತತ್ತ್ವಾಪ್ರ
ಜ್ಞೇಯ ಚೈತನ್ಯಸ್ವರೂಪನಿ
ರಾಯತ ಪ್ರಾಜ್ಞೈಕ ತೈಜಸ ವಿಶ್ವಮಯ ಪೂರ್ಣ ॥
ಸ್ಥೇಯ ನಿತ್ಯಾಖಂಡ ಬೋಧಾ
ಧ್ಯೇಯ ಮಾತ್ರಾನಂದಪರನಿಜ
ಧೀಯುತ ಕಲೋಜ್ವಲಿತ ಶಿವನೇಕರ್ತೃವೆನಿಸುವನು ॥ ೯ ॥

ಶಾಶ್ವತಾಮಲ ಚಿತ್ತುಸಂಜನಿ
ತಸ್ವಭಾವನಿರಾಕೃತಾತ್ಮಗ
ನೀಶ್ವರತ್ವಾದ್ದೃಷ್ಟ ಕಿಂಚಿಜ್ಞಾಸ್ವತಂತ್ರತ್ವ ॥
ನಶ್ವರಾದಿಕದೋಷವಿರುತಿರೆ
ವಿಶ್ವಪತಿಯೆಂತಹನು ತಿಳಿ ಪರ
ಮೇಶ್ವರನೇ ವಿಶ್ವೈಕ ವಲ್ಲಭ ವಿಶ್ವಚೈತನ್ಯ ॥ ೧೦ ॥

ಚಿತ್ರವೆನಗೆ ವಿಚಾರಿಸಲು ಸ
ನ್ಮಾತ್ರಬಿಂದುವಿನಿಂ ಸಮಸ್ತಜ
ಗತ್ರಯೋದಯವೆಂದೊಡಾ ಬ್ರಹ್ಮವೆ ಸುನಾನಾತ್ವ ||
ಪಾತ್ರಮಾದೊಡಜೇಯುವುಯ ರಥ
ಸೂತ್ರದಂದದೊಳಖಿಳ ಕರ್ತೃಗ
ಳೀತ್ರಿಭುವನಕದೆಂತು ಸಚ್ಚಿದ್ರೂಪ ನಿರವಿಪುದು || ೩ ||

ಪಾರಶೇಷ ನ್ಯಾಯದಂತರಿ
ಯಾರಥಂಬಳಿಕೋರ್ವನಿಂದ ಹು
ದಾರಯಲ್ ಪ್ರಜ್ಞತ್ವವಭಿಮಾನದೊಳು ತಂತಮಗೆ ||
ಸೇರಿ ತಾವೇ ಶ್ರೇಷ್ಠರೆಂಬ ವಿ
ಚಾರ ಬಹುಕರ್ತೃಗಳಿನೊಂದುಂ
ಕಾರಿಯ ನೇರ್ಪಡದು ಪರಶಿವನೋರ್ವನೇ ಕರ್ತನು || ೪ ||

ಕುಂಭದೊಲು ಕಾರ್ಯಾತ್ಮಭುವನವೆ
ಕುಂಬರನೊಲು ನಿಮಿತ್ತ ಕಾರಣ
ಸಾಂಬನಿಂ ಕಾಲ್ತಿಗುರಿಯೊಲು ಬಹುಕರ್ವ ಸಹಕಾರಿ ||
ಎಂಬ ಕಾರಣ ಬಿಂದು ಮಾಯೆಗ
ಳೆಂಬುಪಾದಾನೈಕ ಕಾರಣ
ದಿಂ ಬಹಳ ಸುಖದುಃಖಕಾರಣವೆನಿಸಿ ಜನಿಸಿತ್ತು || ೫ ||

ಸಾರ ಸಚ್ಚಿದ್ರೂಪ ಶಿವನೆ ವಿ
ಚಾರಿಸಲು ಜಲಕುಂಭ ಚಂದ್ರನೊ
ಲಾರಮಾಕರ ದರ್ಪಣಪ್ರತಿಬಿಂಬ ದಂತಖಿಳಾ ||
ಕಾರನುದಯಸ್ಥಿತಿಲಯಕ್ಕಾ
ಧಾರನವಿಕಲನದ್ವಿತೀಯಂ
ಸ್ಫಾರದವುಳನಿಮಿತ್ತಕಾರಣಕರ್ತನೆನಿಸುವನು || ೬ ||

ಸಕಲ ಕಮಲಭವಾಂಡದುದಯವ
ಸಕಲ ಕಮಲಭವಾಂಡ ವಿಲಯವ
ಸಕಲ ಭೂತೋತ್ಪತ್ತಿಯಂ ತನ್ಮಯದ ಬೆಳವಿಗೆಯು ॥
ಸಕಲ ಫಲಭೋಗಪ್ರಯಾಣಂ
ಪ್ರಕಟಮಾಗಲು ಮಾಡುವಾಟಕೆ
ಪ್ರಕೃತಿಕಾಲಪರಾಣು ಕರ್ಮಾದಿಕವೆ ಕರ್ತೃಗಳು ॥ ೭ ॥

ಶಿವನ ಸನ್ಮೂಲ ಪ್ರಕೃತಿಯಿಂ
ದವೆಯುಸದ್ರೂಪ ಪ್ರಕೃತಿಪರ
ಶಿವನ ನಿತ್ಯದಿಸಖಿಳ ಕಾಲಂ ಶಿವಮಯಾತ್ಮಕನಿಂ ॥
ವಿವಿಧ ಪರಮಾಣ್ವಾದಿಗಳು ಕ
ರ್ಮವಿಸರಂ ಪರಬುದ್ಧಿಯಿಂ ಸಂ
ಭವಿಸಿ ಜಡರೂಪಂಗಳಾಗಿಹವೆಂತು ಕರ್ತೃಗಳು ॥ ೮ ॥

ಮಾಯೆ ಮೊದಲಾದ ಖಿಳ ತತ್ತ್ವಾ
ಜೇಯ ಚೈತನ್ಯಸ್ವರೂಪನಿ
ರಾಯತ ಪ್ರಾಜ್ಞೈಕ ತೈಜಸ ವಿಶ್ವಮಯ ಪೂರ್ಣ ॥
ಸ್ಥೇಯ ನಿತ್ಯಾಖಂಡ ಬೋಧಾ
ಧ್ಯೇಯ ಮಾತ್ರಾನಂದಪರನಿಜ
ಧೀಯುತ ಕಲೋದ್ಭಲಿತ ಶಿವನೇಕರ್ತೃವೆನಿಸುವನು ॥ ೯ ॥

ಶಾಶ್ವತಾಮಲ ಚಿತ್ತುಸಂಜನಿ
ತಸ್ವಭಾವಸಿರಾಕೃತಾತ್ಮಗ
ಸೀಶ್ವರತ್ವಾ ದೃಷ್ಟ ಕಿಂಚಿಜ್ಞಾಸ್ವತಂತ್ರತ್ವ ॥
ನಶ್ವರಾದಿಕದೋಷಮಿರುತಿರೆ
ವಿಶ್ವಪತಿಯೆಂತಹನು ತಿಳಿ ಪರ
ಮೇಶ್ವರನೇ ವಿಶ್ವೈಕ ವಲ್ಲಭ ವಿಶ್ವಚೈತನ್ಯ ॥ ೧೦ ॥

ಈಜಗನ್ನಿರ್ಮಾಣ ಸುಮನೋ
ರಾಜನೆನ್ನಸ್ಮರಣ ಮಾತ್ರದಿ
ರಾಜಿಸಿದವೀತಾಮರಸಗರ್ಭಾಂಡಕೋಟಿಗಳು ॥
ಯೋಜಿತ ಮದೀಯಾಜ್ಞೆಯಿಂ ಸಂ
ಕೇಜನೇತ್ರಾದಿಗಿಳು ವರ್ತಿಪ
ರೀಜಗಜ್ಜಾಲೈಕ ವಲ್ಲಭ ನಾನೆ ವಿವರಿಸಲು ॥ ೧೧ ॥

ಕರಣ ಸಂಕಲ್ಪಂಗಳೆಂಬಧಿ
ಕರಣಯುಗ್ಮವನುಳಿದು ಮಹದಧಿ
ಕರಣದಿಂದಖಿಲಾಂಡ ದುದಯಂ ಸನ್ನಿಧಾನದೊಳು ॥
ಕರಣನಿಕರದೊಳಿರ್ದನನ್ಯ
ಸ್ಫುರಣ ನಿಜಕರ್ತೃವನುಲಕ್ಷ್ಯ
ಸ್ಮರಣೆ ಮಾಳ್ಪದರಿಂ ನಿನಗೆ ಕರ್ತೃತ್ವಮೆಲ್ಲಿಯದು ॥ ೧೨ ॥

ಆವಿಯನ್ಮುಖ್ಯಂ ವಿಚಾರಿಸ
ಲಾವ ನಿಜದಿಂ ಕಲ್ಪಿತಂ ಮ
ತ್ತಾವನಾಮಾಯಾಂ ಬುಧಿಯೊಳಖಿಳಾಂಡ ಬುದ್ಬುದದ ॥
ತೀವಿದುದಯ ಸ್ಥಿತಿಕರಂ ಮ
ತ್ತಾವನೊಳು ವಿಶ್ರಾಂತಿಯದು ಪರಿ
ಭಾವಿಸುವಡರಿದೆನಗೆ ಸಚ್ಚಿದ್ರೂಪ ನಿರವಿಪುದು ॥ ೧೩ ॥

ಸತ್ತ್ವನಿತ್ಯವ್ಯಾಪಕಾ ಕ
ರ್ತೃತ್ವ ಸರ್ವಜ್ಞತ್ವಸರ್ವೇ
ಶತ್ವ ಶಕ್ತಿಪ್ರೇರಕತ್ವ ಮಹಾಸ್ವತಂತ್ರತ್ವ ॥
ತತ್ವನಿಷ್ಕಲ ತಾನ್ಯಥಾಕ
ರ್ತೃತ್ವ ಸರ್ವಾತ್ಮತ್ವನಿಜಕ
ರ್ತೃತ್ವ ರಾಗದ್ವೇಷರಹಿತತ್ವಾದಿಗುಣಯುಕ್ತ ॥ ೧೪ ॥

ಸಂತತಾಖಂಡೈಕಪೂರ್ಣವು
ಹಾಂತ ಶಿವನಿಂದಹುದು ಮಾಯಾ
ಭ್ರಾಂತ ಶುದ್ಧಾಶುದ್ಧಜಡರಿಂದಾಗದೆಂತಹುದು ॥
ಅಂತು ಮಲ್ಲದೆಯರಿದೆ ವರಿದಪೆ
ವೆಂತರಿವೆ ವಿದನರಿಯೆ ವೆಂದುವು
ನಂತ ವೇದಗಳುರುಳಿದುವೆಲೆ ಸಹಸ್ರವಿಧವಾಗಿ ॥ ೧೫ ॥

ಕಾಲವೆಂತುಟವಮೂರ್ತನಾಗಿವಿ
ಶಾಲ ಕಾರ್ಯೋತ್ಪಾದಕ ವ್ಯಾ
ಲೋಲ ಪೂರ್ಣಸಮರ್ಥನಾಗಿ ಸಮಸ್ತ ಕಲ್ಪಿತನು ॥
ಲಾಲಿತಾಂತರ್ಯಾಮಿ ಯಾಗನು
ಕೂಲ ಶ್ರುತ್ಯಾಜ್ಞಾನಿಯಾಮಕ
ಲೀಲನೆಂದುಂಟಖಿಳ ದುದಯಕ್ರಮವನುಸಿರೆನಗೆ ॥ ೧೬ ॥

ನಿಗಮನಿಕರಾತೀತ ಪರಶಿವ
ಸಗುಣ ನಿರ್ಗುಣ ನಟನ ಕಾರಣ
ನೊಗೆದುದವನಿಂ ಮಾಯೆ ತನ್ಮಾಯೆಯೊಳಹಂಕಾರಂ ॥
ಗಗನ ಮಾರ್ಗದೊಳುಬ್ಬಿಜಲಮಾ
ಶುಗತಿಯಿಂ ವರ್ಷೋಪಲಂಬಲಿ
ದಾಗದಕೆ ವ್ವಾಸನೆ ಸಮುದ್ಭವಿಸಿದ ವೊಲೆಂತೆನಲು ॥ ೧೭ ॥

ಸತ್ತು ಚಿತ್ತಾನಂದನಿತ್ಯಾ
ಯತ್ತಪೂರ್ಣದೊಳೊಗೆದ ಬಿಂದುವೆ
ಚಿತ್ತು ವರ್ಷೋಪಲದ ಪರಿಯಾ ಮಾಯೆ ವಾಸನೆಯೇ ॥
ಮತ್ತೆ ಮಿಥ್ಯಾಜ್ಞಾನ ಸವಿಕ
ಲ್ಪೋತ್ತರಾಹಂಕಾರಮಯಮದ
ರತ್ತಣಿಂ ತನ್ಮಾತ್ರಮವರಿಂ ವಿಶ್ವ ಮುದಿಸಿತ್ತು ॥ ೧೮ ॥

ಭಾಪು ಬಲ್ಲರ ಬಲ್ಲಹನೆ ಕೇ
ಳಾ ಪರಂಜ್ಯೋತಿಯೊಳು ಪುಟ್ಟಿದ
ದೀಪದಂತವತರಿಸಬೇಕಲ್ಲದೆ ಸತೇಜದೊಳು ॥
ಲೋಪಗುಣಿಯಜ್ಞಾನಿ ಜಡನು ಮ
ಹಾಪರಾದಿವಿಭೇದ ಮಾಯೆಪ
ರಾ ಪರೈಕ ಬ್ರಹ್ಮದಿಂತಾನೇಕೆ ಪುಟ್ಟಿತ್ತು ॥ ೧೯ ॥

ಜ್ಯೋತಿ ರಂಗೋತ್ಕೃಷ್ಟದಿಂದೊಗೆ
ದಾತಮುಂ ಪ್ರತಿದೋರ್ಪವೊಲನಿ
ರ್ಜಾತ ಪೂರ್ಣ ಬ್ರಹ್ಮವೇ ಸೃಷ್ಟ್ಯರ್ಥಮಾಗೊಲಿದು ॥
ಪೂತ ಸಗುಣಾನಂದ ಶಕ್ತಿ ಸ
ಮೇತ ಶಿವನಾದಲ್ಲಿ ಮಾಯಾ
ಜಾತಮುವನಿಂ ಮಾಯೆಯಿಂದಖಿಳಾಂಡದುದ್ಭವವು ॥ ೨೦ ॥

ಚಿತ್ರಮದು ಕಟ್ಟಾಲಿಯೊಳಗ
ನ್ಯತ್ರ ಕಲ್ಮಷ ಮಾವರಿಸಲಾ
ನೇತ್ರದ ವಿಶಾಲಂ ಬಹುಳಮಾಗೇಂ ಪ್ರಯೋಜನವು ॥
ಗೊತ್ರಯುಸ ಮಹಿಮಾಸಮುಗ್ರತೆ
ಯೆತ್ರಿಭುವನಾ ಪುರ್ಣಮಾಗೆ ವಿ
ಚಿತ್ರ ಶಕ್ತಿಯೊಳಾಗು ಹೋಗುಗಳಾಗುತಿರಲಳವೇ. ॥ ೨೧ ॥

ದಹನ ದಾಹಕ ಶಕ್ತಿಯಂತಾ
ಮಹಿತನಿಜಮುಂ ನೆಮ್ಮಿ ಪರಶಿವ
ವಿಹಿತ ಸನ್ನಿಧಿ ಲಕ್ಷಣೇಕ್ಷಣ ಮಾತ್ರದೆ ವಿಕರಿಸಿ ॥
ನಿಹಿತ ಪೊರ್ದದ ಕಲ್ಪದೊಳುಪಡೆ
ದಹಗೆ ಪರಿಣಮಿಸೀಸು ಮಾಯೆಯೆ
ಮಹದಹಂ ಕೃತಿಯಿನ ಖಿಲಾಂಡವ ಕಲ್ಪಿಸುವಳೊಲಿದು ॥ ೨೨ ॥

ಸಚ್ಚಿದಾತ್ಮಕ ಮನ್ಮಯಾದಿಕ
ಪಂಚಕಾಂತಃ ಕರಣದಿಂ ಸತ್
ಪಂಚತನ್ಮಾತ್ರಂಗಳವರಿಂ ಭೂತಮವರಲ್ಲಿ ||
ಪಂಚವಿಂಶತಿ ತತ್ವಮವರಿಂ
ದಂಚದಖಿಳಾಂಡೋದಯಂ ಜಡ
ಸಂಚಲಾಹಂಕಾರ ವೊಂದನೆ ಪೇಳ್ವುದೇಕೆನಗೆ || ೨೩ ||

ಮರವೆಯಿಂದಗಲದ ಮನಕ್ಕೆನಿ
ತರಿವನು ಸಿರಿಮೊಡೇಂ ಮನವೆನಿನ
ಗರಿವು ಮರವೆಯೆ ಸಹಜ ಮಾಗಿಹುದಲ್ಲಮೊಡೆ ಬಳಿಕ ||
ನೆರೆನಿಜಾಂತಹಃಕರಣ ಮಾಯದೊ
ಳುರುಹಿನುದಯಾಸ್ಪದಕೆ ಕಾರಣ
ವರಿಯೆ ಶಕ್ತಿಮಯಾಂತ ಸೃಷ್ಟಿವಿಭೇದ ವೆಂತೆನಲು || ೨೪ ||

ಆದಿಶಿವಸಾದಾಖ್ಯ ಶಿವನಿಂ
ದಾದುದವರಿಂ ಸುಪ್ರಸಾದವ
ಹೋದಯ ಮದೀಶಾನ ನವನಿಂ ಯಾಕ್ಷರ ಪ್ರಣವಂ ||
ಮೋದ ಶಾಂತಾತೀತೆಯದರಿಂ
ನಾದಮಯ ಪರಶಕ್ತಿಯದರಿಂ
ದಾದುದಮಲ ಜ್ಞಾನಮದರಿಂ ಶಬ್ದತನ್ಮಾತ್ರಂ || ೨೫ ||

ಶಿವನ ನಿಜದಿನ ಮೂರ್ತಿಸಾದಾ
ಖ್ಯವು ಮಹಾಚರಲಿಂಗ ಮದರಿಂ
ದವಿಕಲಾತ್ಮಕ ತತ್ಪುರುಷನವನಿಂ ವಕಾರಮನು ||
ವಿವಿಧ ಶಾಂತಿಕಲಾದಿ ಶಕ್ತಿಗ
ಳವರೊಳಗೆಸೆವ ನೀನು ನಿನ್ನಿಂ
ದವಿರಳ ಸ್ಪರ್ಶನ ಮಹಾತನ್ಮಾತ್ರದುದ್ಭವವು || ೨೬ ||

ಆದಿ ಶಿವನಿಂ ಮೂರ್ತಿಸಾದಾ
ಖ್ಯೋದಯಂ ಶಿವಲಿಂಗಮುದರಿಂ
ಮೋದಿತಾ ಘೋರಾಖ್ಯನವನಿಂ ವರಶಿಕಾರಮನು ॥
ನಾದಮಯ ವಿದ್ಯೋತ್ಕಲೋದ್ಭವ
ಮಾದುದಿಚ್ಛಾಶಕ್ತಿಯದರಿಂ
ವೇದಿತಾಹಂಕಾರ ಮದರಿಂ ರೂಪುತನ್ಮಾತ್ರಂ ॥ ೨೭ ॥

ಅಪ್ರತಿಮನಿಂ ಕರ್ತೃಸಾದಾ
ಖ್ಯ ಪ್ರಸವ ಗುರುಲಿಂಗ ಮದರಿಂ
ಸುಪ್ರಸನ್ನಂ ವಾಮದೇವಂಮಃ ಪ್ರಣವ ಮದರಿಂ ॥
ಸುಪ್ರತಿಷ್ಠಾ ಕಲೆಯು, ಕಲೆಯಿಂ*
ದ ಪ್ರಮಾಣಜ್ಞಾನ ಶಕ್ತಿ ನಿ
ಜ ಪ್ರಕಾಶಕ ಬೋಧೆಯದರಿಂ ಸುರಸತನ್ಮಾತ್ರಂ ॥ ೨೮ ॥

ಕರ್ಮ ಸಾದಾಖ್ಯೋದಯಂ ಶಿವ
ಧರ್ಮದಿಂದಾಚಾರಮದರಿಂ
ಮರ್ಮ ಸದ್ಯೋಜಾತನವನಿಂನಾಕ್ಷರ ಪ್ರಣವಂ ॥
ವರ್ಮವಿದಿತ ಪ್ರವೃತ್ತಿ ಕಲೆಯದರಿಂ
ತೋರ್ಮೆಯಾಕ್ರಿಯ ಶಕ್ತಿಯದರಿಂ
ಶರ್ಮ ಚಿತ್ತಂಗಂಧ ತನ್ಮಾತ್ರಮೆ ಸಮುದ್ಭವವು ॥ ೨೯ ॥

ಈ ಪ್ರಕಾರ ವನರಿಯದಾದ್ಯಂ
ತ ಪ್ರಸಿದ್ಧವ ಮನವೆ ನಿನ್ನಿಂ
ದೆ ಪ್ರಕಟಮೆಂದಾಡಿದಪೆ ತನ್ಮಾತ್ರ ಮುಳಿಯಲಿಕೆ ॥
ಆ ಪ್ರಸನ್ನಂ ಸಹಿತ ಷಟ್ತ್ರಿಂ
ಶಪ್ರಮಾಣಂ ತತ್ವಮಿನ್ನಖಿ
ಲ ಪ್ರಕಾಶವನರಿದು ತನ್ಮಾತ್ರಕಾ ಪಂಚಕದಿಂ ॥ ೩೦ ॥

---

* ಪಾ—ಸುಪ್ರತಿಷ್ಠಾ, ಲಸತ್ಕಲೆಯಿಂ

ಶಬ್ದದಿಂದಾಕಾಶ, ಮನಿಲಂ
ಶಬ್ದ ಸಂಸ್ಪರ್ಶದಿಂ, ದನಲಂ
ಶಬ್ದ ಸಂಸ್ಪರ್ಶ ಸ್ವರೂಪಕದಿಂ, ಮಹಾಜಲವು ||
ಶಬ್ದ ಪರುಶನ ರೂಪರಸದಿಂ,
ಶಬ್ದಮುಖ* ಗಂಧದಿಂದವನಿಯು
ಶಬ್ದ ಸಂಸ್ಪರ್ಶಂಗಳಿರ್ಪಲ್ಲಿಹನು ಜೀವಾತ್ಮಂ || ೩೧ ||

ನಾದದಿಂದಾಗಸವು ಕಳೆಯಿಂ
ದಾದುವ ನಿಲಾಗ್ನಿಗಳು ಬಿಂದುವಿ
ನಾದುವಾಜಲ ಭೂಮಿಗಳು ಕಳೆನಾದ ಬಿಂದುಗಳ ||
ಮೋದ ಸಂಬಂಧದೊಳು ಜೀವಂ
ನಾದಮಯ ನೆಂದರಿವುದೀತಂ
ಗಾದುದ್ವೈ ತತ್ವಂಗಳಿಂ ತನು ಭೇದವಾದಿಯೊಳು || ೩೨ ||

ನಾದಬಿಂದು ಕಳಾತ್ರಯದೆ ಮಹ
ದಾದಿ ತತ್ವಗಳುದಯ ವಿವರೊಳು
ನಾದಮೇ ಜೀವಸ್ವರೂಪಕ ವೆಂಬುದರಿದೆನಗೆ ||
ನಾದಮೂರ್ತಿಯ ಕಿರಣಮಾಯೋ
ಪಾಧಿಯೋಳ್ಪ್ರತಿ ಬಿಂಬಿಸಲು ಜೀ
ವಾದಿಜನ ಸಂಪ್ರಾತಿಭಾಸಕನೆಂಬ ನಾಮದೊಳು || ೩೩ ||

ಸಾಂಬ ವಿದ್ಯೆಯೊಳೀಶ್ವರ ಪ್ರತಿ
ಬಿಂಬವಿರಲಾ ಬಿಂಬತಾ ಪ್ರತಿ
ಬಿಂಬದಿರವೇನಿಜೋದಯನುಸದೈಕ ವಿದ್ಯಾತ್ಮ ||
ಬಿಂಬಮಲಿನಾ ವಿದ್ಯೆಯಂತಹು
ದೆಂಬರೇ ಜಡ ಮಾಯೆಗಾಶಿವ
ಬಿಂಬಮೆ ಚೈತನ್ಯಮಯಮಾಗಿಹುದು ವಿವರಿಸಲು || ೩೪ ||

---

* ಪಾ—ಗಂಧಂಗಳಿಂದಸು, ಗಂಧಂಗಳಿಂಧರೆ.

ಒಡಕು ಭಾಂಡದೊಳಿರಿಸಿದುದಕದ
ನಡುವೆ ಬಿಂಬಂ ಬಿಂಬಿಸಿರಲಾ
ಎಡೆಯೊಳಡಗಿತು ನೋಡನೋಡಲುದಕವರಿಯಲರಿಯೆ ‖
ಪಡೆದೆ ಭವವುಂ ಮಾಯೆಯೊಳು ನಿ
ನ್ನೆಡೆಗವಿದ್ಯಾಶಕ್ತಿಯಾದುದು
ಬಿಡದ ವಿದ್ಯೆಗೆ ಚೇತನಾತ್ಮಕನಾಗಬಹುದಯ್ಯಾ ‖ ೩೫ ‖

ಸೂರ್ಯಬಿಂಬಗ್ರಹ ದೊಳೊಗೆದಾ
ಸೂರ್ಯನೊಡನಸ್ತಮಿಸಿದಂತಾ
ತುರ್ಯ ವಿದ್ಯಾಮಯ ಪರಾತ್ಮಕ ಬಿಂಬಮೇಮಾಯಾ ‖
ಭಾರ್ಯೆಯೊಳ್ಪ್ರತಿಬಿಂಬ ರೂಪಾ
ಪೂರ್ಯ ಚೇತನಮಾಗಿ ಬಿಂಬಿಸಿ
ಸ್ಥೈರ್ಯನಿಜವೊಂದಾಗಿ ರಾಜಿಸುವುದು ವಿಚಾರಿಸಲು ‖ ೩೬ ‖

ವಿಶ್ವನಾಥಂ ವಿಶ್ವಮೂರ್ತಿಯೆ
ವಿಶ್ವಜೀವತ್ವವನು ತಳೆದನು
ಶಾಶ್ವತಂ ಚಿದ್ರಸಮೆ ಛಿದ್ರಿತಮಾದತೆರನಂತೆ ‖
ನಶ್ವರಾತ್ಮಕ ಮಾಯೆಗಂ ತ
ದ್ವಿಶ್ವಕಂ ಶ್ರುತ್ಯರ್ಥ ನಿಶ್ಚಿತ
ಶಶ್ವದನುಪಮನಾನೆ ಚೈತನ್ಯ ಸ್ವರೂಪಕನು ‖ ೩೭ ‖

ಈಶವಿದ್ಯಾ ವಿಶ್ವಗತ ವಿ
ಶ್ವೇಶರೂಪಕನಾದೊಡೆಲವೋ
ಕ್ಲೇಶಕರಣದೊಳೇಕೆ ಬಳೆವುದು ನೋಡೆ ಸುಖದುಃಖ ‖
ಕೋಶದೇಹ ವಿಷಯುವನುಂಡು ವಿ
ನಾಶಿಯೆನಿಸುವುದೇಕೆ ತನುವಿಂ
ಪಾಶಬದ್ಧೋ ಭವತಿಜೀವನವೆಂಬುದೇಕೆಲವೊ ‖ ೩೮ ‖

ನಳಿನ ಮಿತ್ರನ ಬೆಳಗನಳಿವೆನು
ಗಳಗಳನೆ ನಾನೆಂದು ರಾತ್ರಿಯು
ಹಿಳಿ ತಮಸ್ಸಿನ ಕೊಳಗವುಂ ತಂದಂತೆ, ತನುವೆಂಬ ||
ಕೊಳಗವೆತ್ತಾ ಮಾಯೆಯೆತ್ತಾ
ಬೆಳಗು ನಾನೆತ್ತರಿವು ಮರವೆಗ
ಳೊಳವಹ ನೀನೆತ್ತ ಸರಿಹೋಗತ್ತ ನೀಮರುಳೆ || ೩೯ ||

ದಿವಿಯು ಮಧ್ಯದೊಳರುಣರೋಚಿ ಸು
ಕುವಲಯಾಪ್ತ ಮರೀಚಿ, ತಿಮಿರ
ತ್ರಿವಿಧಮುಂ ವರ್ತಿಸಲು ದಿವರಾತ್ರಿಗಳುಭಯವೊಂದೇ ||
ದಿವಸವಭವಾಕಾಶ ಮಧ್ಯದೊ
ಳವಿಕಲಾತ್ಮನವಿದ್ಯೆಮನವೀ
ತ್ರಿವಿಧಮುಂ ಶಿವಲೀಲೆಗಾಸ್ಪದ ಮಾಗಿತೋರಿದವು || ೪೦ ||

ರಾತ್ರಿಯೊಳ್ವಿಧುರೋಚಿ ತಿಮಿರಂ
ಮಿತ್ರನುದಯದೊಳುಂಟೆ ಪೇಳ್ದಿವ
ರಾತ್ರಿಗಾಸ್ಪದ ಮಾದನಭಮೇಂದಿಟ ವಿಚಾರಿಪೊಡೆ ||
ರಾತ್ರಿಯೋಮೇಣ್ದಿವವೊ ಪೇಳು ವಿ
ಚಿತ್ರತನುವೋ ಮನವೋ ಮಾಯೆಯೊ
ಗೋತ್ರಯನ ನಿಜರೂಪುನಾನಾತ್ರಿವಿಧದೊಳಗಲ್ಲ || ೪೧ ||

ಮಹಿತ ನಿಜಪರಿಪೂರ್ಣರೂಪ
ಪ್ರಹತ ಸಂಸಾರ ಪ್ರಪಂಚಸು
ಸಿಹಿತ ನಿತ್ಯಾಖಂಡ ಬೋಧಾದ್ವಯು ಸದಾನಂದ ||
ವಿಹಿತ ಸಂವಿನ್ಮಾತ್ರ ನಿನಗಿಂ
ತಹಿತತನು ಸಂಬಂಧಮೇಸರಿ
ವಿಹಿತ ಮಾಧುದು ನಿರವಿಸುವುದೆನಗೊಲಿದು ಕರುಣದೊಳು || ೪೨ ||

ಆದುದೆನ್ನೊಳ ವಿದ್ಯೆಯದರಿಂ
ನಾದವುಯ ಮಾಕಾಶಮದರಿಂ
ದಾದಪುಷ್ಕರದಂಶ ಸಂವಿತ್ಕರಣಮನಿಲನಿಗೆ * ॥
ಆದುದು ಗಡಾನೀಂ ಮನವೆನಿ
ನ್ನಾದಿಯಗ್ನಿಗೆ ಹಮ್ಮು* ಜಲದಿಂ
ಮೋದ ಬುದ್ಧಿ ಸುಚಿತ್ತಮವನಿಗೆ ೦ ಪಂಚ ಕರಣದೊಳು ॥ ೪೩ ॥

ಮೇಣುಮಾರುತನಲ್ಲಿ ಪಂಚ
ಪ್ರಾಣಮಗ್ನಿಯೊಳಿಂದ್ರಿಯಂ ಸಂ
ತ್ರಾಣಜಲದಿಂ ಪಂಚವಿಷಯಂ ಪಂಚಕರ್ಮಾಕ್ಷಂ ॥
ಕ್ಷೋಣಿಯಿಂ ಭೂತಂಗಳಿಂ ಪರಿ
ಮಾಣದಿರ್ಪತ್ತೈದು ತತ್ವಂ
ಕಾಣಿಸಿದು ವಿಂತಿದರಸಮರಸ ಕೂಟದಿಂದೊಲಿದು ॥ ೪೪ ॥

ಜ್ಞಾನ ಮಾಗಸಮನಿಲನಲ್ಲಿಸ
ಮಾನ ಮಗ್ನಿಗೆ ಕರ್ಣ ಜಲದಿಂ
ಧ್ಯಾನಮವನಿಗೆ ವಾಕ್ಯಮೆಂಬಿವುಗಗನ ಪಂಚಕವು ॥
ಮಾನಸಂ ನಭದಿಂ ನಿಜಾಂಶಮು
ದಾನಮನಲಗೆ ಚರ್ಮಮುದಕದೊ
ಳೇನು ಪರಿಸಂ ಧರೆಗೆ ಹಸ್ತಂ ವಾಯು ಪಂಚಕವು ॥ ೪೫ ॥

ಅನಲನೊಳು ಗಗನಾಂಶುವಿಂ ಹ
ಮ್ಮನಿಲನಿಂ ವ್ಯಾನಂ ನಿಜಮೆಲೋ
ಚನವು ಜಲದಿಂರೂಪು ಧರೆಗಡಿಯಗ್ನಿ ಪಂಚಕವು ॥
ವನನಭಗಳಿಂಬುದ್ಧಿ ಪವಮಾ
ನನೊಳಪಾನಂ ಜಿಹ್ವೆವನ್ಹಿಗೆ
ವನ ಮೆರಸ ಮಾಕ್ಷಿತಿಗೆ ಗುಹ್ಯಂತೋಯ ಪಂಚಕವು ॥ ೪೬ ॥

---

* ೧ ಪಾ—ಮೆನಲಾನೇ ಆದುದಾಶುಗನಿಂ
* ೨ ಪಾ—ಯಹಗೇಹಮುಂ ೦ ೩—ಮವನೇ

ಘೂನಭಂಗಗಳು ಚಿತ್ತಮಾಪವ
ಮಾನವೇ ಪ್ರಾಣಂ ಕೃಶಾನುಗೆ
ಪೀನ ಗಂಧವಹಂ ಮಹಾಜಲದಿಂ ಸುಗಂಧವದು ||
ತಾನೆ ವಿಶ್ವಂಭರದೊಳು ಗುದ *
ಸ್ಥಾನ ಮುರ್ವೀ ಪಂಚಕಂ ತನು
ಾವಿನ ವಿವರ ಗಗನಸಮದಿಂ ಬಲಿದಿಹುದದೆಂತೆನಲು || ೪೭ ||

ಗಾತ್ರಕಚಮಾಂಸಾಸ್ಥಿ ನಾಡಿಯೆ
ಧಾತ್ರಿಯ ಗುಣ ಸ್ವೇದಸೃಗವಿ
ಣ್ಮೂತ್ರ ಶುಕ್ಲಮೆ ಜಲದಗುಣ ಮಾಲಸ್ಯ ನಿದ್ರಾದಿ ||
ಕ್ಷುತ್ತೃಷೆ ವಿಷಯ ಮಗ್ನಿಯಗುಣ ವಿ
ಚಿತ್ರಕುಂಚನ ಚಲನಧಾವನ
ಶತ್ರುರೋಧನ ಕಂಪನಂಗಳು ಮಾರುತನ ಗುಣವು || ೪೮ ||

ಕೋಪಲಜ್ಜಾ ಲೋಭಕಾಮಾ
ಲಾಪ ಭೀತಿಗಳಾಗಸಕ್ಕಾ
ರೋಪಗುಣಮೀ ಪಂಚಭೌತಿಕ ತತ್ವಮಯಮಾಗೆ ||
ಈ ಪರಿಯೊಳಾಯ್ತಂಗ ಮಿದರೊಳು
ಲೇಪನೆಂಬಂತಿಹನು ನಿಸ್ಸಯ
ರೂಪಮನವೇ ತಿಳಿವುದಾತ್ಮಾನಾತ್ಮ ಭೇದವನು || ೪೯ ||

ಆದಿಯೊಳು ಚಿದ್ರೂಪನೆಂದಾ
ಮೋದ ವಿದ್ಯಾಕರಣಮಯನೆಂ
ದಾದಿರೂಪನ ವಿದ್ಯೆಯಿಂದೆಂದೀಗ ನಭವಂಶ ||
ವೇದಿತಾಜ್ಞಾನ ಸ್ವರೂಪಕ
ನಾದೆನೆಸೆ ಮದ್ರೂಪಕರಣದೊ
ಳಾದೆಯಲ್ಲಿಪೆ ನೀನು ಸುಮನಃ ಪಂಚಕಂಗಳೊಳು || ೫೦ ||

* ಪಾ—ವಿಶ್ವಂಭರದೊಳುದಯಮ—ಪಾನ—ಅಪಾನ ವಾಯುವಿನ ಉದಯ ಸ್ಥಾನ—ಗುದ ಎಂದು ಅರ್ಥ. D ಪಾ—ವೀನನಿರುಸರಸಮ್ಮದಿಂ

ಸರ್ಪ ನಿಂದುವ ಪಿಡಿಯಲಾಜಲ
ಸರ್ಪಕೆ ನೋವ ನಾಡುವಂತಾ
ಸರ್ಪರಾಜನ ದೆತ್ತಲೊಳ್ಳಿಯದೆತ್ತ ಸಂಕಲ್ಪ ॥
ದರ್ಪದಂಭಾವೇಶ ರೂಪಿಂ
ತೋರ್ಪಜಾಡ್ಯಭ್ರಾಂತುಮನವೇ
ದರ್ಪಕಾರಿಯ ರೂಪನೀ ಕರಣಂಗಳೊಳಗಿಹನೆ ॥ ೫೧ ॥

ಕೇಳು ವಿದ್ಯೆಯ ವಿದ್ಯೆಯು ಭಯಸ
ಮೇಳದಿಂದೊಪ್ಪಿಹುದು ತಾನೇ
ಕಾಳು ಮಾಯಿಕವೆಂತು ಮಾಯಾಭ್ರಾಂತು ಚೇತನವೇ ॥
ಖೂಳಜೀವನವೆನಿಸಿ ತನುವಿನ
ಖೂಳಕರಣಂಗಳೊಳು ಬಳೆವುತೆ
ಪಾಳಿಯಿಂದಿರ್ದಿಲ್ಲ ವೆಂದೊಡದಾರು ಮೆಚ್ಚುವರು ॥ ೫೨ ॥

ಭೂಮಿ ಸಸ್ಯಾದಿಗಳು ಬೆಳೆವವು
ಸೋಮ ಪೀಯುಷಾಂಶುವಿಂ ತತ್
ಸೋಮನವರೋಳ್ ಬಳೆವನೇ ತನುಕರಣ ಮಾಯೆಗಳು ॥
ಧಾಮನೆನ್ನಾಧೀನ ಮವುಮಾ
ಯಾಮಯಾದ್ಯಂತೈಕಸೃಷ್ಟಿಗೆ
ಪ್ರೇಮಿ ಮುಖ್ಯನುಪಾಧಿಗಂತಂತಿರ್ಪನಾನೊಲಿದು ॥ ೫೩ ॥

ಗಗನದಂಶ ಜ್ಞಾನರೂಪಿಂ
ದೊಗೆದು ಪದಿನೇಳ್ತತ್ವದಿಂತವೆ
ಮಿಗಿಲು ಸೂಕ್ಷ್ಮಮದೆನಿಸಿ ಬಳಿಕಿರ್ಪತ್ತು ನಾಲ್ಕರೊಳು ॥
ಅಗಣಿತ ಸ್ಥೂಲಾಂಗ ಮುದರಿಂ
ಬಗೆಬಗೆಯ ವೈಕಾರ ಭಾಗದ
ಸೊಗಸಿನಿಂದಹಮೆಂದು ಸಂಚರಿಸುವವನಿನ್ನಾರು ॥ ೫೪ ॥

ಆ ನಭಾನಿಲ ಮಧ್ಯದೊಳು ಜನಿ
ಸೀ ನಿರೂಪು ಸುರುಪು ಕಾರಣ
ಪೀನ ದೇಹ ಸುಷುಪ್ತಿ ಜಾಗ್ರನಿರಹಮಹಂಜ್ಞಾನಾ ||
ಜ್ಞಾನ ಸತ್ಯಾಸತ್ಯ ಮಯಮಿ
ತ್ರಾಸು ಶತ್ರು ದ್ವಿವಿಧ ರೂಪಿಂ
ನೀನೆ ವಾಯಸ ದೃಷ್ಟಿಯಂತೊಳ ಹೊರಗೆ ಕವಲಿಡಿದು || ೫೫ ||

ಸಂಶಯ ಭ್ರಮ ಕಾಮ ಸಂಕ
ಲ್ಪಾಂಶು ವಿಂ ಸಂಚರಿಸುವ ಚತು
ರ್ವಿಂಶತಿಯೆ ನಿನ್ನ ಸ್ವರೂಪುಗಳಿನ್ನು ತಿಳಿ ಮಾಯಾ ||
ಅಂಶಗಳ ಕೂಟಸ್ಥಮಾಗದ
ರಿಂ ಶರೀರಂ ವ್ಯಕ್ತ ಮಾಗಿಹು
ದಂಶಮೆನಿಸುವ ನಾಮರೂಪುಗಳಿಂದದೆಂತೆನಲು || ೫೬ ||

ಪಾಶ ಮಾಯಾ ತ್ರಿವಿಧ ಸಂಚ
ಕ್ಲೇಶ ಷಡ್ವರ್ಗೋರ್ವಿಷಡ್ ಭ್ರಮ
ಕೋಶ ಭಾವ ತ್ರಿಗುಣ ಮಲಮದ ವಿಷಯದಶಕಾಷ್ಟ ||
ಪಾಶ ತಾಪ ವ್ಯಸನ ಮೋಹಾ
ವೇಶಿತಾ ಹಂಕಾರಕರ್ಮವಿ
ನಾಶ ಷಡ್ಭಾವ ವಿಕೃತೀಷಣ ಫಲಸುಖಾದಿಗಳಿಂ || ೫೭ ||

ಮತ್ತ ಸತ್ತಾದ್ಯಮಿತ ಪಂಚಕ
ದತ್ತಣಿಂ ಜಡಮಾಯೆ ಸರ್ವಾ
ನರ್ಥಕಾರಿಣಿ ತನ್ನೊಳಂ ಪ್ರತಿಬಿಂಬಿಸಿರುತಿರ್ದ ||
ಮತ್ತ ಜೀವರ ಭ್ರಾಂತು ಲಕ್ಷಣ
ಕುತ್ತಮಾಂಗನೆಯೆನಿಸಖಿಳ ಭೋ
ಗಾರ್ಥ ಮಾಗಿಹುದಿವಕೆ ಸಾಕ್ಷಿಕನಾಗಿ ನಾನೊಲಿದು || ೫೮ ||

ಕೇಳ ವಿದ್ಯಾತೀತ ಚಿತ್ತು ಸ
ಮೇಳ ಸಂವಿನ್ಮಾತ್ರ ಭಾವಿ ನಿ
ರಾಳ ಮಾನಸ ಮುಖ್ಯಕರಣೋದಯ ಲಯಸ್ಥಾನ ||
ಭೀಳಕಾರಣ ದೇಹದೊಳು ಕರು
ಣಾಳು ಶಿವವಿದ್ಯಾಸ್ವರೂಪಕ
ನೋಳಿಯಿಂ ಚೈತನ್ಯನಾಗಿಹ ನನವರತವೊಲಿದು || ೫೯ ||

ಶ್ರೀ ಪರಂಜ್ಯೋತಿ ಸ್ವರೂಪ ನಿ
ರೂಪಿಸಿದ ಪ್ರಶ್ನೆಗೆ ನಿರುತ್ತರ
ಲೋಪ ಮಾಯಾ ಕಾರ್ಯತನು ಬಹುರೂಪವಮಾಗಿಹುದು ||
ಈ ಪರಿಯನುಸಿರೆನಗೆ ಪಾಪಾ
ಪಾಪಕರ್ಮವಶಂಗಳಿಂ ಬಹು
ರೂಪಮಾಗಿಹುದಿದನು ನಿನಗಾಂ ಮುಂದೆ ಪೇಳುವೆನು || ೬೦ ||

ನಿರುಪಮಾಖಂಡೈಕ ತತ್ತ್ವ
ಸ್ಫುರಣ ಕಾರಣ ರೂಪ ಷುಗುಣೋ
ತ್ಕರ ಮಹೋದಯ ವಸ್ತುಭಾವಾಯತ್ತ ಸನ್ಮಾರ್ಗಾ ||
ಚರಿತ ಸಚ್ಚಿತ್ಸೌಖ್ಯಮಯಪರಿ
ಚರಣಕಾಸಕ್ತಿ ಪ್ರಭಾವಾ
ಪರಿಮಿತಾನಂದಾತ್ಮ ಜಯ ಶುಭ ಮೂರ್ತಿ ಬೋಧಾರ್ಥಿ || ೬೧ ||

ಇದು ಸಮಸ್ತ ಶಿವಾನುಭಾವರ
ಪದಪಯೋರುಹಗಂಧಮುದ ಷಟ್
ಪದನು ಷಟ್‌ಸ್ಥಲ ಸಾರ್ವಭೌಮಂ ಚೆನ್ನವೃಷಭೇಂದ್ರಂ ||
ವಿದಿತಮಾಗಿ ನಿರೂಪಿಸಿದ ಸಂ
ಮುದಮಹಾ ಕ್ಷೇತ್ರಜ್ಞಸುಮನೊ
ವಾದದೊಳು ವಿಶ್ವೋತ್ಪತ್ತಿ ಸ್ಥಲದ್ವಿತಯ ಸಂಧಿ || ೬೨ ||

ಇತಿ ಕ್ಷೇತ್ರಜ್ಞ ಸುಮನೋವಾದೇ ವಿಶ್ವೋತ್ಪತ್ತಿವಿವರಣಂ
ದ್ವಿತೀಯ ಪ್ರಕರಣಂ ಅಂತುಸ್ಥಲ ವೆರಡಕ್ಕಂ ಪದ ೧೨೩ಕ್ಕಂ ಸಮಾಪ್ತಂ
ಮಂಗಳ ಮಹಾ ಶ್ರೀ ಶ್ರೀ ಶ್ರೀ

# ಮೂರನೆಯ ಸಂಧಿ

## ಪಿಂಡಸ್ಥಲಂ

ಪಿಂಡ ನಿರ್ವಚನವನು ನಿಜವನು
ಖಂಡಿತತ್ವವ ಕರುಣದಿಂ ಚಿತ್
ಪಿಂಡನೊಳು ಬೆಸಸಿದನು ಸದ್ಗುರುನಾಥ ನೊಲವಿಂದ ‖ ಪಲ್ಲವಿ ‖

ಭೀಷ್ಮ ಸಂಸೃತಿ ದಾವ ದಾವ, ಮ
ಹಾಸ್ಮರಾಚಲ ಶಂಬ, ಸಾಂಬ
ಘಸ್ಮರಾಂಗ ಪ್ರಾಣಗುಣ ಗಣಯುಕ್ತ, ಯುಕ್ತಾತ್ಮ ‖
ವಿಸ್ಮರಣ ಸುವಿರಕ್ತ ರಕ್ತಮ
ನು ಸ್ಮರಣ ಭವ ಕರ್ಮಕರ್ಮಂ
ಸಸ್ಮಿತಾನನ ಭಾವ ಭಾವಾತೀತ ಮಾಂ ಪಾಹಿ ‖ ೧ ‖

ಭೂಜಲಾನಲಮಾರುತಾಂಬರ
ರಾಜಿಯಿಂ ವರ ಪಂಚವಿಂಶತಿ
ನೈಜತತ್ವಂ ಬಳಿಕಮಿವರ ವಿಭೇದ ಗುಣಮಾಗಿ ‖
ರಾಜಿಸಿದುದಿಪ್ಪತ್ತುನಾಲ್ಕು ಮ
ನೋಜನಿತಮೀ ಸ್ಥೂಲ ದೇಹ ಮಿ
ದೇ ಜಡಾತ್ಮಕಮಾಗಿ ತೋರ್ಪುದು ತಿಳಿದು ನೋಡಿದಡೆ ‖ ೨ ‖

ಏನನೆಂಬೆನು ನಿನ್ನ ನೀ ತನು
ತಾನೆ ಜಡಮಯ ಮೆಂದೊಡೆಂತಹು-
ದೈ ನಿಜೋದಯರೂಪ ದೇಹಮೆ ಜಾಡ್ಯಮಯ ಮಾಗೆ ||
ಪೀನ ಪುಣ್ಯಾ ಪುಣ್ಯ ಸುಖದುಃ
ಖಾನುಭವ ಸಾಮರ್ಥ್ಯಮುಂ ಕ
ರ್ಮಾನು ಗುಣ್ಯಮು ಮಖಿಲ ಚಾತುರ್ಯತ್ವಮೆಲ್ಲಿಯದು || ೩ ||

ಅಂಬು ದಹಿಸಿತ್ತಾ ಶರೀರವ
ನೆಂಬ ಜಡಮತಿಯಂತೆ ನಿಜದ ಪೊ
ಲಂಬ ನರಿಯದೆ ತನುವೆ ಚೈತನ್ಯಾತ್ಮನಹುದೆಂದು ||
ಪಂಬಲಿಸಿ ವಿಷಯಂಗಳೊಳು ವಿಸ
ಟಂಬರಿದು ಕೆಡುತಿರ್ಪುದಿದನೇ
ನೆಂಬೆನೀಂ ಮರವೆಯಿ ನೊಡಲು *ನೀನೆಂಬ ಕುಹಕವನು || ೪ ||

ಆನೆ ತನುತನುವಾನೆ ಮತ್ತನು
ಮಾನಮಿಲ್ಲಿದ ನರಿದು ನೋಡಿದೊ
ಡಾನು ಗುಜ್ಜಂ ನಿಡಿಯ ನಸಿಯಂಕರಿಕ ನಾಂ ಕೆಂಪು ||
ಈ ನಖಾಕ್ಷಿ ಪ್ರಾಣ ಹಸ್ತ ವಿ
ತಾನದಿಂ ಸೌಂದರ ನೆನಲ್ಕಿದು
ತಾನೆ ಚೇತನ ರೂಪ ಮಲ್ಲದೆ ಕಾಣೆನಾರುವನು || ೫ ||

ಅಕ್ಕಟಕಟಾ ಮರುಳೆ ಚೇತನ
ಮಕ್ಕುಮಾದೊಡೆ ನಿಚ್ಚ ನಿಚ್ಚಂ
ಚಿಕ್ಕಸಾವಹ ಸುಪ್ತಿ ಮೂರ್ಛೆಯೊಳೇಕೆ ಕರ್ಮವನು ||
ಮಿಕ್ಕುಮಾಡುದು ಚೇತನಂಬೊ
ತ್ತಕ್ಕರಿಂ ಘಟಪಟಗಳಂ ತೊಳ-
ಪೊಕ್ಕನಾತ್ಮಕತತ್ವಮೆನಿಸಿಹುದೇಕೆ ಭಾವಿಸಲು || ೬ ||

* ಪಾ—ನಾನೆಂಬ

ಪಂಚ ಭೌತಿಕ ಯೋಗಮಾಗದ
ರಿಂ ಚಮತ್ಕೃತಿಯಿಂದಜಾಂಡದ
ಸಂಚಿತೋದ್ಭವ ಮೆಂತು ಪಿಂಡಾಂಡಕ್ಕೆ ಚೈತನ್ಯಂ ॥
ಪಂಚವಿಂಶತಿ ತತ್ವವೀ ತ-
ತ್ಪ್ರಾಂಚಿತನೆ ಸಂಹನನ ಮಾಗಿರೆ
ಸಂಚರಿಪ ಚೈತನ್ಯವಲ್ಲದೆ ಜಾಡ್ಯಮೆಂತಹುದು ॥ ೭ ॥

ಮೌಢ್ಯ ಮನವೇ ಮಾಯೆ ಮುನ್ನವೆ
ಜಾಡ್ಯಮುದರಿಂದಾದ ಭೇದ ಗು-
ಣಾಢ್ಯ ಭೂತಮೆ ಜಡಮುಯಂ ತತು ಜನಿತ ತತ್ವಾಳಿ ॥
ಜಾಡ್ಯಮುವರಿಂ ದುದಿತ ದೇಹಂ
ಜಾಡ್ಯಮದು ಮುನ್ನವೇ ತತ್‌ಸ್ಥಿತಿ
ಕುಡ್ಯದಂತೆ ನಿರಾತ್ಮಕತ್ವದೊಳಿಹುದು ಭಾವಿಸಲು ॥ ೮ ॥

ಅಹುದಹುದುದಂತಿರಲಿ ತನುವಿಗೆ
ವಿಹಿತವಾಗಿಹ ವಾಕ್ಕರಾಂಘ್ರಿ ಸು
ನಿಹಿತಗುದಗುಹ್ಯಂಗಳಿವು ಚೈತನ್ಯರೂಪಕವು ॥
ಮಹಿತಕರ್ಮಾಕ್ಷಗಳು ಮಾನಸ
ರಹಿತವಾಗಿಯೆ ತಮ್ಮ ವಿಷಯುವ
ವಹಿಸಲರಿಯದಿಹ ಸ್ವತಂತ್ರಿಗಳೆಂತು ಚೇತನವು ॥ ೯ ॥

ಭೌತಿಕಬ್ರಹ್ಮಾಂಡಪಿಂಡೋ
ತ್ಪತನದ ಬೆಳವಿಗೆಗೆ ವಿಷಯುಮೋ
ಚೇತನಾತ್ಮಕದಿಂ ಸಮಸ್ತಂ ಈಗಳಾಗಿಹವು ॥
ನೀತಿಯಿಂದಿದಿರಿಟ್ಟು ಪೊರಗಾ-
ಗಾತುಮ ಪ್ರೇರಕದೊಳೊರೆವಾ-
ಮಾತರಿಶ್ವಾಯತ್ತದಿಂದಿಹವೆಂತು ಚೇತನವು ॥ ೧೦ ॥

ನೇತ್ರಜಿಹ್ವಾ ಘ್ರಾಣಚರ್ಮ
ಶ್ರೋತ್ರಚಯ ವಿಷಯ ಗ್ರಹಣದಿಂ
ಗಾತ್ರ ಗುಣ*ಮುಖ್ಯನಹಿಕುಂಡಗಳಿಂ ಸಚೇತನವು ||
ಪಾತ್ರ ಬುದ್ಧೀಂದ್ರಿಯ ದೊಳಕ್ಕಿ
ಶ್ರೋತ್ರಮೆಂಬಿವು ನಷ್ಟಮಾಗಿ ವಿ-
ಚಿತ್ರ ರೂಪಧ್ವಾನ ವಿಷಯವರಿಯವನಾತ್ಮಕವು || ೧೧

ನೈಜದಿಂ ಪಿಂಡಾಂಡಮುಭಯ
ಕ್ಕಾ ಜಗತ್ ಪ್ರಾಣಮೆ ವಿವಿಧ ಗುಣ
ರಾಜಿಯಿಂ ಚೈತನ್ಯರೂಪಾಧಾರಮಾಗಿಹುದು ||
ಯೋಜಿತ ಸ್ವರವಾವುದೆನಲಾ
ನೋಜೆಯಿನರಿದುಸುರ್ವೆನೆಂಬ ವಿ-
ರಾಜಿತ ಪ್ರಾಣಿಕನಿರಲನಿಲನೆಂತು ಚೇತನವು || ೧೨ ||

ಚಿತ್ತಮೇ ನಿಶ್ಚಯಿಸಿ ತನುವಂ
ಪೊತ್ತು ಸಕಲವಿಹಾರದಿಂ ನಡ-
ಸುತ್ತೆ ಸುಖಮಂ ಮಾಳ್ಪ ಕಾರಣದಿಂ ಸಚೇತನವು ||
ಮತ್ತೆ ಸಂಸಾರ ಪ್ರಪಂಚಿನ
ವೃತ್ತಿಯಂ ನಿಶ್ಚಯಿಸುತಿನ್ನೊಂ-
ದತ್ತಲಿತ್ತಲೆನುತ್ತ ಬಳಲುವುದೆಂತು ಚೇತನವು || ೧೩ ||

ಬುದ್ಧಿಯವಧರಿಸಿಯೆ ಶರೀರವ
ನುದ್ಧರಿಸಿ ಸುಖವಿತ್ತು ಕಡೆಯೊಳು
ಶುದ್ಧ ತತ್ವವ ನರುಹಿಪುದರಿಂ ಚೇತನಾತ್ಮಕವು ||
ಬದ್ಧ ಶಿವ ಕರ್ಮವನು ವಿಷಯವ
ನುದ್ಧರಿಸಿ ಯವಧರಿಸಿ ಕಡೆಯೊಳ-
ಶುದ್ಧದುಃಖವ ನೀವದೆಸೆಯಿಂ ಜೀವಮಯುಮಲ್ಲು || ೧೪ ||

---

* ಪಾ—ಮುಖ್ಯಾನುಕೂಲಗಳಿಂ.—ಮುಖ್ಯನುಜ ಕೂಡಲಗಳಿಂ ।

ಬಳಿಕ ಬುದ್ಧೀಂದ್ರಿಯಸಮೂಹದ
ಬಳಗದಿಂ ಕರಣಂಗಳಿಂ ತನು-
ಗಳಿಗೆ ವಿಷಯಮನೀವಹಂಕೃತಿ ಜೀವ ರೂಪಕವು ॥
ತಿಳಿ ಮರುಳೆಲೋಹಾಂತ ಕುಂತದೊ
ಲುಳುಮೆಯಾತ್ಮಜ್ಯೋತಿಯೆನ್ನಯ
ಬೆಳಗಿನಿಂ ಸಂಚರಿಪುದಾಗಿ ಯದಹಮನಾತ್ಮಕವು ॥ ೧೫ ॥

ಕೃತ್ಯ ವಿಷಯಕ್ಕಾತ್ಮನಾಗಿ
ಪ್ರತ್ಯಗಾತ್ಮಗೆ ವೇದ್ಯವಹುದರಿ
ನತ್ಯಮಲ ದರ್ಶನದ ಪೂರ್ವಾಪರ ವಿಭಾಗದೊಲು ॥
ನಿತ್ಯ ತೇಜೋಮಯ ತಮೋಹಂ
ಪ್ರತ್ಯಯಮೆ ತನು ಚಿತ್ಪ್ರಕಾಶ
ಪ್ರತ್ಯಗಾತ್ಮ ತ್ರಿವಿಧ ರೂಪಾಗಧಿಕ ಜೀವನವು ॥ ೧೬ ॥

ಬಿಡದೆ ಕೆಂದಾವರೆ ವಿಶೇಷಣ
ದೊಡನೆ ಕೆಂಪೆಂಬತಿವಿಶೇಷ್ಯಂ
ಬಡೆದ ತಾವರೆ ಸಲ್ವತೆರನು ಕೃಶೋಹವೆಂಬಲ್ಲಿ ॥
ಒಡಲೊಡನೆ ಶ್ರೋತ್ರಾಹ ಮಿಂದ್ರಿಯ
ದೊಡನೆಧ್ಯಾತೋಹಂ ಸುಕರಣಂಗ
ಳೊಡನೆ ಕೂಡಿಯೆ ವೇದ್ಯವಹುದರಿನೆನಗನಾತ್ಮಕವು ॥ ೧೭ ॥

ಮತ್ತಹಂಜಾನಾಮಿ ಎಂಬುದ
ನಿತ್ತಣಿಂ ಸಂವಿತ್ಪ್ರಯೋಗಾ
ಯತ್ತ ವಿಲಸದಹಂಕೃತಿಯೆ ಬಾಹ್ಯೇಂದ್ರಿಯೋತ್ಕರದ ॥
ತತ್ತದಖಿಳ ವಿಷಯವ ನರಿವ ನಿ-
ಮಿತ್ತ ಸಾಮಗ್ರಿತ್ವದಿಂ ಮಹ
ದುತ್ತಮಾಖಂ ಡೈಕಚೈತನ್ಯಸ್ವರೂಪಕವು ॥ ೧೮. ॥

ಲಸದಕಾರಬ್ರಹ್ಮದೃಗ್ರಾ
ಜಸ ಹೃದಷ್ಟದಳಾದಿಗತಿಯಿಂ
ಪೊಸವಿರಾಟ್ ಸಂಜ್ಞೇಶ್ವರರುವೊಂದಾಗಿ ಜಾಗ್ರದೊಳು ||
ಎಸೆವಯೋಪಲ ಸನ್ನಿಧಿಯೊಳಾ
ನಿಶಿತಸೂಚಿಯೆ ಸಂಚರಿಸುವಂ
ತೊಸೆದು ವಿಶ್ವನ ಕೂಡಿ ಯರಿವುದರಿಂದನಾತ್ಮಕವು || ೧೯ ||

ಉತ್ತಮೋಹಂಕರ್ತನೆಂಬುದ
ರತ್ತಣಿಂದಾತ್ಮ ಪ್ರಯೋಗೋ-
ದಾತ್ತ ಮತಿಯಿಂದಂತರಂಗದೊಳಖಿಳಭೋಗವನು ||
ಮತ್ತ ಮಾನಸ ಕರಣದಿಂದರಿ
ದಿತ್ತನಂತ ಮುಖಸ್ವರೂಪಾ
ಯತ್ತ ಜೀವನೊಳಿರ್ಪ ಹಂಕೃತಿ ತಾನೆ ಚೇತನವು || ೨೦ ||

ಸತ್ವವಿಷ್ಣು ವುಕಾರ ಕಂಧರ
ಹೃತ್ಕಮಲಕರ್ಣಿಕೆಯ ಗತಿಯಿಂ
ಸೂತ್ರಮಯ ಸಂಜ್ಞೇಶ್ವರರುವೊಂದಾಗಿ ಕನಸಿನೊಳು ||
ಮಿತ್ರ ಮುಕುರದ್ಯುತಿಯ ವೊಲಸಂ
ವಿತ್ತಮೋಹಂಕೃತಿಯ ತೈಜಸ
ಚಿತ್ತಿನೊಡವೆರದರಿವ ಕಾರಣದಿಂದನಾತ್ಮಕವು || ೨೧ ||

ಮತ್ತಜಸ್ರಮಹಂ ಚರಾಮಿಯೆ
ನುತ್ತು ಮಿಹ ಚಿದ್ಬಿಂಬಯುಕ್ತೋ
ದಾತ್ತರೂಪಾಹಂಕೃತಿಯೆ ವಿವಿಧ ಭ್ರಮಿತ ಮಾಯಾ ||
ವೃತ್ತಿ ಸೂಕ್ಷ್ಮಾಂತಃಕರಣಕುಲ-
ಕುತ್ತಮಚಿದಾನಂದ ವಿಷಯವು
ನಿತ್ತು ರಕ್ಷಿಪ ಕಾರಣಂ ಚೈತನ್ಯ ರೂಪಕವು || ೨೨ ||

ತಮಸುಮಾಕ್ಷರ ರುದ್ರ ಹೃದಯ ಸು- *
ಕಮಲ ಕರ್ಣಿಕೆಯಾದಿ ಗತಿಯಿಂ
ಸುಮಹದಂತರ್ಯಾಮಿ ಸಂಜ್ಞೇಶ್ವರರುವೊಂದಾಗಿ ||
ವಿಮಲ ಬೊಮ್ಮಾನಂದ ವಿಷಯವ
ನಮಿತ ನಿರಹಂಕರಣದಿಂ ವಿ-
ಶ್ರಮಿಸಿ ಭೋಗಿಪ ಪ್ರಾಜ್ಞನೊಳು ಲಯಮಾಗರಿಯದಿಹುದು || ೨೩ ||

ಪ್ರಖ್ಯ ಸಂವಿನ್ಮಾತ್ರ ಸಚ್ಚಿ
ತ್ತಾಖ್ಯ ರೂಪಂ ಭಾವಭಾವಿತ
ಮುಖ್ಯ ಸಂಹನನ ತ್ರಯಾವಸ್ಥಾ ತ್ರಯಂಗಳೊಳು ||
ದುಃಖ್ಯಹಂ ಪರಿಪೂರ್ಣ ಪಾವನ
ಸುಖ್ಯಹಂ ಎಂದಖಿಳವನು ಜೀ
ವಾಖ್ಯಮುಯವೆಂದರಿವ ಕಾರಣದಿಂ ಸಜೀತನವು || ೨೪ ||

ಎನ್ನ ಸನ್ನಿಧಿ ಮಾತ್ರದಿಂ ಮು-
ತ್ತಿನ್ನ ಚೈತನ್ಯಾತ್ಮ ಬಿಂಬವೆ
ತನ್ನೊಳಿರ್ಪುದು ಜಡಾಹಂಕಾರಮೇ ಬಾಹ್ಯಂ ||
ಸನ್ನುತೇಂದ್ರಿಯ ವಿಷಯದರಿವಿಂ
ಭಿನ್ನ ಜಾಗ್ರುತ್ ಸ್ವಪ್ನಯುಗದೊಳು
ಗನ್ನದಿಂ ಸಂಚರಿಸಿ ಸುಪ್ತಿಯೊಳರಿಯದಡಗಿಹುದು || ೨೫ ||

ಮತ್ತಮಹಮಿಚ್ಛಾಮಿಯೆಂಬುದ
ರತ್ತಣಿಂದಂತಃಕರಣ ಧ
ರ್ಮೋತ್ತಮಾತ್ಮಗೆ ಸಿಂಧುಪತಿತಾದಿತ್ಯ ಬಿಂಬದೊಲು ||
ಕೃತ್ರಿಮಾವಿದ್ಯಾವಯವದೊಳು-
ದಾತ್ತ ಸಂವಿನ್ಮಾತ್ರ ಮಾಗರಿ-
ವುತ್ತು ಮಿಹ ತದ್ಧರ್ಮತಾಹಂಕೃತಿಯೆ ಜೀವನವು || ೨೬ ||

ಪಾ—ಸ

ಕುಕ್ಕುಟಂ ಪರಿದುಂಬ ಮರಿಗಳ
ಪಕ್ಕದೊಳು ಮರಸಿರದೆ ನಿದ್ರೆಯ
ನಕ್ಕರಿಂ ಮಾಳ್ಪಂತಖಿಳ ಕಾರ್ಯಗಳ ನೊಳಕೊಂಡು ॥
ತಕ್ಕ ಸಂಸ್ಕೃತಿ ಸಹಿತ ಮಾತ್ಮಕ
ನಿಕ್ಕೆಯೊಳು ನಿರವಸ್ಥೆಯಿಂ ದೊಳ
ಪೊಕ್ಕ ವಿದ್ಯೆಯೊಳುದಧಿ ಮಗ್ನ ಘಟಾಳಿಯಂತಿಹುದು ॥ ೨೭ ॥

ಏನನರಿಯದೆ ಸುಖದೊಳೊರಗಿದೆ
ನಾನೆನುತಿಹುದಕಖಿಳ ವಿಷಯ
ಜ್ಞಾನ ದುಃಖಂಗಳನಳಿದು ಕೇವಲ ಸುಷುಪ್ತಿಯೊಳು ॥
ಹೀನ ಮಾಯಾ ಸಾಕ್ಷಿಕಾತ್ಮಕ
ನೀನಿರುತ್ತಿರಲಲ್ಲಿ ಯೋರ್ವ್ವಂ
ನಾ ನರಿದೆ ನೆನಲದೇನು ಕಾರಣವೆಲೆ ಮಹೋದಯನೆ ॥ ೨೮ ॥

ವರಸುಷುಪ್ತಿಯನೆಯ್ದಿ ದಾತ್ಮಂ
ಮರಳಿಯೇನುವನರಿಯದೊರಗಿದೆ
ನಿರದೆ ಸುಖದಿಂ ನಿದ್ರಿಸಿದೆ ನೆಂಬುಭಯಮನನಕ್ಕೆ॥
ಸ್ಫುರಿಪುವವುಭಯ ವಿಲ್ಲದೆಂಬಂ-
ತಿರೆ ಸಮಸ್ತ ಘಟಾದಿ ರೂಪಕ
ದಿರವನೊಳಕೊಂಡಿರ್ಪ ತಮಮಂ ಕಣ್ಣು ಕಾಣ್ಬಂತೆ ॥ ೨೯ ॥

ಎಲ್ಲಮುಮನೊಳಕೊಂಡವಿದ್ಯೆಯ
ನಲ್ಲಿ ಸೂಕ್ಷ್ಮದೆ ಚಂಚಲದ ತರು
ಪಲ್ಲವಾಂತರ ಚಂದ್ರಿಕಾ ಲೇಶಂಗಳೊಲು ಪೊಳೆದು ॥
ತಲ್ಲಯನಿಜಾನಂದ ಕಿರಣವ
ನಲ್ಲಿ ಕರಣಾಂತರದಪೇಕ್ಷೆಗ-
ಳಿಲ್ಲದನುಭವಿಸುವನಹಂಕೃತಿಯುಳಿದ ನಿಜದರಿವಿಂ ॥ ೩೦ ॥

ಪ್ರಕೃತಿ ಸಪ್ತಕದಿಂ ವಿಹಿತ ಭೌ-
ತಿಕ ಸಮೂಹನಮಜ ಭವಾಂಡಾ-
ಧಿಕ ಶರೀರ ಘಟಾಳಿ ವಿಶ್ವೋದಯುವಹಂಕೃತಿಯಿಂ ॥
ಪ್ರಕಟಿತಂ ಜೀವತ್ರಯಂ ಬಳಿ-
ಕ ಕುಟಿಲಾಹಂಕೃತಿಯ ನುಳಿದಾ-
ತ್ಮಕನರಿವುದೇ ಕಾರಣಂ ಚಿದ್ರೂಪನಿರವಿಹುದು ॥ ೩೧ ॥

ಒಂಪರೊಳಗೊಂದಿಲ್ಲವಾಗಿವು
ಮಂದ ಕಾಲ ಸುದೇಶ ನಿಯಮದ
ಸಂದು ತೋರಿದವಾಗಿ ಮಿಥ್ಯಾಭೂತಮಿವರಲ್ಲಿ ॥
ಕುಂದದೆಯನುಸ್ಯೂತನಾಗರಿ-
ವಂದದಖಿಳಾನುಸಮ ಮಹತ್ವಾ-
ನಂದ ರೂಪ ಸದೋದಿತಾತ್ಮನೆ ಸತ್ಯನೆಂತೆನಲು ॥ ೩೨ ॥

ಸದಮಲಾತ್ಮಜ್ಯೋತಿ ಮಾಯೆಯ
ಮೊದಲವಸ್ಥಾಮಯ ಮಹತ್ ತ-
ತ್ವದಸುದೇಹಳಿಯಲ್ಲಿರುತ್ತಾ ನಿದ್ರೆಯೆಂದೆಂಬ ॥
ಕದವು ಮುಚ್ಚಿರುತಿರಲಹಂಕಾ-
ರದಲಯಸ್ಥಾನತ ಸುಷುಪ್ತಿಯೊ-
ಳಾದವಿದ್ಯಾಂತಃಪುರವ ತಾಂ ಬೆಳಗುತಿರಲಾಗಿ ॥ ೩೩ ॥

ಕಾಲ ಕರ್ಮಾದಿಕ ಸಮೀರಣ
ಲೀಲೆಯಿಂ ನಿದ್ರಾಕವಾಟದ
ಕೀಲು ಸಿಡಿಯಲು ಸಾತ್ವಿಕಾಹಂಕೃತಿಮಣಿತದೀಯ ॥
ಜ್ವಾಲೆ ವಿಡಿದೀ ಸ್ವಪ್ನಘನಮ-
ಧ್ಯಾಲಯವ ಬೆಳಗಿಂದ್ರಿಯಗವಾ
ಕ್ಷಾಲಿಯಿಂ ಪೊರಮಟ್ಟು ಜಾಗ್ರಾಂಗಣವ ಬೆಳಗುವುದು ॥ ೩೪ ॥

ಮುನ್ನಿನೊಲು ನಿದ್ರಾಕವಾಟವು-
ಭಿನ್ನಮಾಗಲಹಂಕೃತಿಯೆ ತಾಂ-
ತನ್ನವಿದ್ಯೆಯೊಳಡಗೆ ಜಾಗ್ರಾಂಗಣವು ಕನಸೆಂಬ ॥
ನನ್ನಿ ನಡುವುನೆಯಂಧಕಾರವು
ಯೆನ್ನುತಾಹಂ ಸ್ಫಟಿಕ ಮಣಿಯೊಳು
ಮುನ್ನ ಪ್ರತಿಫಲಿಸಿರ್ದ ಚಿದ್ದೀಪ ಪ್ರಭೆಯೆ ತನಗೆ ॥ ೩೫ ॥

ಮೂಲ ಭೂತ ಪ್ರತ್ಯಗಾತ್ಮ
ಜ್ವಾಲೆಯೊಳು ಬೆರದಿಹುದವಸ್ಥಾ
ಜಾಲದೊಳಹಂಕಾರ ಭಾವಾ ಭಾವಗಳನನುವಿಂ ॥
ಮೇಲವಿಕಲದಿನರಿವ ಧೀರಂ
ಲೋಲನೋರ್ವಂ ಬೇರಿರಲ್ಕಿದು
ಕೀಲಿಸಿದಹಂಕಾರ ಮಾತ್ಮಕ ನಲ್ತು ನಿಶ್ಚಯಿಸು ॥ ೩೬ ॥

ಇನಿತಸಂತಮು ಮೆನ್ನನೆನಹಿಂ
ಜನಿತಮಾಗಿ ಶರೀರ ಘಟವೆನ
ಲನಿತರಿಂ ಬಾಹ್ಯಾಂತ ರಂಗದೊಳಿರ್ಪಿನೀ ತನುವೆ 1 ॥
ಎನುತರಿವಿನಿಂದಿಹಪರೋಭಯ
ಘನತರಾಮಲ ಸುಖವನೀವೆನು
2 ನೀನು ತನತೆಂಬೆಲ್ಲ ಮುಂಪುಸಿಯಾನೆ ಚೇತನವು ॥ ೩೭ ॥

ಸುಪ್ತಿಗತ ದೇಹವನು ಬಿಟ್ಟು ನಿ
ಜಾಪ್ತ ಚೇತನವಿಡಿದು ಸಂಶಯ
ಸಪ್ತ ಧಾತು ವ್ಯಸನ ವಿಷಯ ಭ್ರಮ ವಿಕಲ್ಪಗಳಿಂ ॥
ಗುಪ್ತದಿಂ ಸಂಚರಿಸಿ ಬಂದು ಸು-
ಷುಪ್ತಿಯೊಳು ಲಯವಾಗಿ ಸಹಜ
ಜ್ಞಪ್ತಿಯಂ ಮರೆದಾಡುತಿಹ ಮನವೆಂತು ಚೇತನವು ॥ ೩೮ ॥

---

1 ಪಾ—ಳಿರ್ಪನಿನಿತನುವೆ 2 ನೀನು ತನುವೆಂಬೆಲ್ಲ 1 ನಿನುತುತನತೆಂಬೆಲ್ಲ.
3 ನಿನತುತನತೆಂಬೆಲ್ಲ

ಸಚ್ಚಿದಾನಂದೈಕಬೋಧ
ಸ್ವಚ್ಛ ನಿತ್ಯಾಖಂಡ ಪೂರ್ಣೋ
ದ್ಯಚ್ಚರಿತ್ರ ಜ್ಞಾನಮೂರ್ತಿ ವಿಶಾಲಮಯ ಕೀರ್ತಿ ||
ಬಚ್ಚಬರಿಯ ಬ್ರಹ್ಮವೇ-ಎ
ನ್ನಚ್ಚುಗದ ವಿಪರೀತಸಂಶಯ
ವಚ್ಚಳಿಯೆ ನಿನ್ನ ಸ್ವರೂಪವ ನೊಲಿದು ನಿರವಿಪುದು || ೩೯ ||

ಜಡಮಯಾನೃತೆ ಮಾಯೆತನ್ನಿಂ
ಪಡೆದ ಭೂತಂಗಳೊಳು ತತ್ವದ
ಗಡಣ ಮವರಿಂದಾದ ವಿಕಟಸ್ಥೂಲದೇಹಮಿದು ||
ಬಿಡದೆ ಬಂಡಿಯ ಮೂಕಿನೊಲು ಮುಂ-
ಬಡಿವುತಿಹ ಕಾರಣದೆ ಮುನ್ನವೆ
ಜಡಮಯಂ, ತಾನೆಂದು ಪೇಳಿದೆ ನೊಲವಿನಿಂಬಳಿಕ || ೪೦ ||

ಭೂಜಲಾನಲ ಮಾರುತಾಂಬರ
ಯೋಜಿತ ಸ್ಥೂಲಾಂಗಮೇ ಜಡ
ಮೋಜೆಯಿಂ ಪದಿನೇಳು ತತ್ವಾದ್ಯುಕ್ತಸೂಕ್ಷ್ಮತನು ||
ತಾಂ ಜಡಾಜಡ ಮಾತ್ತ ಚಿತ್ತು ವಿ
ರಾಜಿತಾಹಂಕಾರಯುತ ಮಾ
ಯಾ ಜನಿತ ಕಾರಣ ಶರೀರಮಿದಜಡಮೆಂತೆನಲು || ೪೧ ||

ವೀರ್ಯ ಜನಿತಾಧ್ರುವಲಯೋದಯ
ಕಾರ್ಯ ದೃಶ್ಯಮುದಾಗೆ ಜಡ ನಿ-
ಸ್ಸಾರ್ಯತನು, ವರ್ಧನವೆ ತಾನಹ ಮನವೊಡಲು ವಿಡಿದ||
ಕಾರ್ಯರೂಪಕ ಕಾರಣದಗಾಂ-
ಭೀರ್ಯರೂಪಕ ತನುವಿಡಿದುಭಯ-
ಕಾರ್ಯ ಕಾರಣಮೆನಿಸಿತಿದುಕಾರಣ ಜಡಾಜಡನು || ೪೨ ||

ಈ ಪರಿಯ ತನುಗಳನು ತನ್ನೊಳು
ಲೇಪಿಸಿಯೆ ತಾಂ ಕಾಣಿಸಿದ ನಿ
ರ್ಲೇಪ ಕಾರಣವ ಜಡವೀ ತ್ರಿವಿಧಾಂಗ ಚೇತನವು ||
ಆಪರಮು, ನಂತರನು ಜೀವಂ
ಲೋಪ ಮಾಯಾ ಹಂಕರಣದಿಂ
ವ್ಯಾಪಕಾಯುತ ವಿಶ್ವತೈಜಸ ಪ್ರಾಜ್ಞರುದಿಸಿದರು || ೪೩ ||

ಆ ಮನೋವ್ಯಾಪಾರ ದೂರ ನಿ-
ರಾಮಯ ಬ್ರಹ್ಮೈಕ್ಯ ಚಿಂತಾ
ಕಾಮು ಪರಿಪೂರ್ಣ್ಣಾನುಭವಬೋಧಾದ್ವಯಾನಂದ ||
ಸೀಮು ಮಾಯಾಹಂಕರಣದಿಂ
ಪ್ರೇಮದಿಂ ಜೀವತ್ರಯಂಗಳ
ನಾಮವೇಪರಿಯಿಂ ವಿರಾಜಿಸಿತೊಲಿದು ನಿರವಿಪುದು || ೪೪ ||

ಎಸೆವ ಚಂದ್ರೋಪಲಮದು ಜಪಾ
ಕುಸುಮಸನ್ನಿಧಿಯಿಂ ಸರಾಗೋ-
ಲ್ಲಸಿತಮಪ್ಪವೊಲಿಂತಹಂಕೃತಿಯೋಗದಿಂದಾತ್ಮಂ ||
ನಿಶಿತ ಮಾಯಾ ಕಾರ್ಯ ತನುವಿನೊ-
ಳೊಸೆದು ಜೀವನ ನಾಮದಿಂ ರಾ
ಜಿಸಿದವನಿಭೋಗಾರ್ಥಮಾಗಿ ವಿಚಾರಿಸುವೊಡೊಲಿದು || ೪೫ ||

ದೋಷ ದುರ್ಗ್ಗುಣ ದೂರ ನಿಜಸಂ-
ತೋಷ ಭಾವಾದ್ಯಂತವರ್ಜ್ಜಿತ
ಭೀಷಣಾಹಿತವರ್ಗ್ಗಗಿರಿವಿದಳನ ಕುಲಿಶ ಮಾಯಾ ||
ಭೀಷಣಾಹಂಕರಣದಿಂ ತನು
ವೇಷ ಜೀವತ್ರಯದ ನಾಮ ವಿ-
ಶೇಷಮೇಪರಿಯಿಂ ವಿರಾಜಿಸಿತಯ್ಯ ಪರಿಕಿಪೊಡೆ || ೪೬ ||

ನಾಹಮೆಂದು ಚಿದಾವಭಾಸನು
ಕೋಹಮೆಂದಾ ಪ್ರಾತಿ ಭಾಸನು
ಸೋಹಮೆನೆ ಮಾಯೋಪ ಹಿತನಾ ವ್ಯಾವಹಾರಿಕನೆ ||
ಮೋಹಿ ವಿಶ್ವಂ ಪ್ರಾತಿಭಾಸಿಕ
ನೇಹಿತೋದಯ ತೈಜಸಂ ನಿ-
ರ್ದೇಹ ಸಂಯುತ ಪಾರಮಾರ್ಥಿಕನೇ ಪರಪ್ರಾಜ್ಞಂ || ೪೭ ||

ಲಸಿತ ವಿಶ್ವನೆ ಜೀವನಂ ತೈ-
ಜಸನೆ ನಿಜ ಮಹಿಮಾಂತರಂ ಪ್ರಾ-
ಜ್ಞ ಸುಮತಿಯೆ ಪರಮಾತ್ಮನಾ ವಸ್ತುವ ನರಿವನಾಗಿ
ಎಸೆವ ಪ್ರಾಜ್ಞಂ ಜೆಳಗುವಂ ತೈ
ಜಸ ಮಹೋದಯ ರೂಪಕಂ, ಭಾ-
ವಿಸಲು ಪರಿಪೂರ್ಣಾತ್ಮನಾಗಿಯೆ ವಿಶ್ವನುಂ ತಾನೆ || ೪೮ ||

ವರ್ಣರಹಿತ ನಿಜಾನುಭವ ಸಂ-
ಕೀರ್ಣ ಮಯ ಪರಮಾತ್ಮಗಂ ಪರಿ-
ಪೂರ್ಣನಹ ತನವಲ್ಲದಾ ಧಿ ವ್ಯಾಧಿ ಸುಖದುಃಖ ||
ತೂರ್ಣ ಬಂಗುರ ಬಿಂದು ಜನಿತೋ
ದೀರ್ಣ ದುರ್ಗ್ಗುಣ-ದೃಶ್ಯ ಜಡಮಯ
ಜೀರ್ಣ ತನುವಿಡಿದಿರ್ಪ ಜೀವಂಗೆಂತು ಸಮನಿಪುದು || ೪೯ ||

ನಿಸ್ತರಂಗಾಂಬುಧಿಯೊಳೊರ್ಮಿಯೆ
ಶಸ್ತ ಮಾರುತ ಚಲನೆಯಿಂ ವಿ-
ನ್ಯಸ್ತ ಪೀನತರಂಗ ಬುದ್ಬುದ ಮುದಿಸುವಂತಮಲ ||
ವಸ್ತು ಜನಿತ ಪ್ರಕೃತಿಮಯ ಭವ
ನಾಸ್ತಿಕದೊಳಾ ನಾಮರೂಪು ಸ-
ಮಸ್ತ ದೇಹೋಹ ಮೆನ್ನಿಂ ವಿಶ್ವಾಖ್ಯನೆನಿಸಿದನು || ೫೦ ||

ತಪ್ತಲೋಹದ ಪಿಂಡದಂತತಿ-
ಸುಪ್ತಿಗತತನುಯುಕ್ತ ಭವಲೋ
ಲುಪ್ತಿಯಿಂ ಜೀವಾತ್ಮನಂಬುಜ ಪತ್ರ ಜಲದಂತೆ ||
ಜ್ಞಪ್ತಿ ತಾಮಸನಂತರಂ ಕಮ
ಲಾಪ್ತನೊಲು ಜೀವಾಂತರೋಭಯ
ಲುಪ್ತ ಸಂಸಾರಾ ಮಯಕೆ ಸಾಕ್ಷಿಕನೆ ಪರಮಾತ್ಮ || ೫೧ ||

ಪಂಚಭೂತ ಶರೀರ ವಿಷಯೋ
ದಂಚಿತಸ್ಮೃತಿ ವ್ಯಸನ ಭ್ರಮು ಪ್ರ-
ಪಂಚಿಕವ ನಂಗೀಕರಿಸಿ ಭವರೋಗ ಕರಣಗಳಿಂ ||
ಸಂಚಿತ ಪ್ರಾರಬ್ಧ ಗುಣದಿಂ
ಪಂಚಕೋಶದೊಳಿಡಿದು ವಿಸ್ಮೃತಿ
ಯಿಂ ಚರಿಸಿ ಬಳಲುವ ಸಜೀವಂ ಮುಖ್ಯನಲ್ತಿವನು || ೫೨ ||

ಶಿವ ಶಿವೇ ನಚ್ಚರಿಯವಿದು ಮು-
ನ್ನವಿಕಲ ಬ್ರಹ್ಮ ಸ್ವರೂಪಕ
ನವಿರಳಾಖಂಡೈಕ ಬೋಧಾಮಾತ್ರ ವಹನೀನೆ ||
ವಿವಿಧ ಜೀವನನೆಂದು ಬಳಕೀ
ಗಿವನು ಪರವಲ್ತೆಂಬುದೇಂಬಗೆ
ವಿವರಿಸೆನ್ನೊಳು ತಿಳಿವ ವೊಲು ಜೀವ ಸ್ವರೂಪವನು || ೫೩ ||

ಮೆರೆವ ತತ್ವವಿಮರ್ಶನದೊಳಿವ
ನರಿದು ಜಾಲಿಸಲುಳಿವ ನೋರ್ವಂ
ಬರಿಯ ವಪುರಭಿಮಾನಿ ಮಾಯೋಪಾಧಿ ಜೀವನನು ||
ನೆರೆ ಜಹಲ್ಲಕ್ಷಣೆಯೊಳಾತ್ಮಂ
ಗರಿ ಶಿವಂಗರವಿಲ್ಲ ತರಣಿಯೊ-
ಳುರಿ ಜನಿತ ಕಿರಣಾಳಿ ತರಣಿಗಭೇದ ಮಪ್ಪಂತೆ || ೫೪ ||

ಷಡ್ವಿಕಾರೋಪೇತ ಮಲ್ಲದ
ಷಡ್ವಿಷಯ ಸಂಚಾರವಿಲ್ಲದ
ಷಡ್ವಿಧ ಭ್ರಮೆಯುಲ್ಲದಿಹ ಪರವಿಲ್ಲದಾಕರಣ ॥
ಷಡ್ವಿಧಾಸೋಪಾಧಿಯುಲ್ಲದ
ಷಡ್ವಿಧೋರ್ಮಿಗೆ ಸಲ್ಲದರಿಕುಲ
ಷಡ್ವಿಜಯಮಾಗೊಪ್ಪುವಾನಂದವೆ ನಿಜಾತ್ಮಕನು ॥ ೫೫ ॥

ಈ ಪ್ರಕಾರದೊಳರಿವು ಮರವೆಯೊ-
ಳಾ ಪ್ರಕೃತಿ ಸಂಸರ್ಗದಿಂ ಪರ-
ಮ ಪ್ರಸಿದ್ಧನೆ ಜೀವ ಭಾವಮನಾಂತು ಭವ ಭವದಿ ॥
ಸ್ವಪ್ರಮಾಣವ ಮರೆಯುಲವರೊಳ
ಗ ಪ್ರಯತ್ನದೆ ಪುಣ್ಯದಿಂ ಪಾ-
ಪ ಪ್ರಣಾಶನ ಮಾಗೆ ಶುದ್ಧಾಂತಃಕರಣ ಪಿಂಡ ॥ ೫೬ ॥

ಚಾರುತರ ಬಿಂಬತ್ವಮುಂ ವಿ
ಸ್ತರ ಪ್ರತಿಬಿಂಬತ್ವ ಮುಭಯಂ
ಸೂರನಿಂ ಕಲ್ಪಿಸಲು ಪಟ್ಟುವು ಪರಶಿವನೊಳಂತೆ ॥
ಆರಯಲು ಜೀವತ್ವಮುಂಪರಿ
ಪೂರಿತೈಕ ಶಿವತ್ವಮುಭಯಂ
ಸ್ವಾರದಭಿನವ ಮಾಗಿ ಸಂಭವಿಸಿದವಭೇದದೊಳು ॥ ೫೭ ॥

ಭೋಕ್ತೃಭೋಜ್ಯ ಪ್ರೇರಕಾಖ್ಯ
ವ್ಯಕ್ತದಿಂ ತ್ರಿಗುಣಸ್ವರೂಪಿಂ
ಶಕ್ತಿಯೊಂದಾ ಬ್ರಹ್ಮದಿಂದಾದುದು ಶಿವಾಶ್ರಿತ್ವ ॥
ಶಕ್ತಿಯಿಂ ಸಾತ್ವಿಕ ರಜೋನ್ವಿತ
ಭೋಕ್ತೃತಾಮಸ ಭೋಜ್ಯಮಯನಿ
* ರ್ಮುಕ್ತ ಮಾಯೆಗಳೀತ್ರಿವಸ್ತು ವಿರಹಿತ ವಾ ಬ್ರಹ್ಮ ॥ ೫೮ ॥

* ಪಾ—ರ್ಣಕ್ತ

ಶುದ್ಧಶಕ್ತಿಯುಪಾಧಿ ಸೌಖ್ಯಸ
ಮೃದ್ಧಿ ಸಚ್ಚಿದ್ರೂಪ ಪೂರ್ಣ ಸ
ಮುದ್ಧರಾ ಖಂಡೈಕ್ಯ ಬೋಧಾದ್ವಯನೆ ಪ್ರೇರಕನು ॥
ಬುದ್ಧಿ ಕರ್ಮಾವೇಶ ಶುದ್ಧಾ
ಶುದ್ಧ ಶಕ್ತ್ರಿಯು ಪಾಧಿ ಭೇದಾ
ಬದ್ಧ ಪಾಶನಿಯುಕ್ತ ಭೋಕ್ತೃವೆ ಪಶುಗಳೆನಿಸುವರು ॥ ೫೯ ॥

ಸ್ವಾಶ್ರಿತಾಖಿಳ ವಸ್ತು ಮೋಹಿನಿ
ವಿಶ್ರುತಾಸದ್ರೂಪಿಣಿ*ಯ ಶು
ಧ್ಧಾಶ್ರಿತಾತ್ಮಕಿ ಕುಮತಿಸರ್ವಾನರ್ಥಕಾರಣೆಯೆ ॥
ವಿಶ್ರಮಾಧೋಮಾಯೆ, ವಿಮಲ
ಸ್ವಾಶ್ರಿತಾಖಿಳವಸ್ತ್ವಮೋಹಿನಿ
ಮಿಶ್ರಿತಾನಂದೈಕಕಾರಿಣಿಯೂರ್ಧ್ವಮಾಯೆಯಲಾ ॥ ೬೦ ॥

ವಿತತ ಸಚ್ಚಿದ್ರೂಪ ಸತತೋ
ದಿತಮಹೋದಯ ನಿತ್ಯಪೂರ್ಣಾ
ಯತ ಸದಾನಂದೈಕ ರಸಮಯ ಶಿವನೆ ಚೈತನ್ಯ ॥
ಪತಿ ಪದಾರ್ಥ ಪ್ರೇರಕಂ ನಿ-
ಶ್ಚಿತ ಸುಗುಣಿ ಸರ್ವಜ್ಞನವಿಕಲ
ನತುಳ ಮಹಿಮಾಬ್ಧಿ ಸಕಲಾಧಿಷ್ಠಾತೃವೆನಿಸುವನು ॥ ೬೧ ॥

ಮಹಿತ ಜೀವತ್ರಯ ಮಯಂ ಸ-
ನ್ನಹಿತ ಕಿಂಚಿಜ್ಞಂ ವಿನಾಶಿ ವಿ
ರಹಿತ ಸಮ್ಯಜ್ಞಾನಿ ದುರ್ಗುಣ ಕಾರ್ಯಕಾರಣನು ॥
ವಿಹಿತ ದುಃಕರ್ಮಾಶ್ರಯಂ ಭ್ರಾಂ
ತಿಹಿತ ನಖಿಳಾ ಕಾರನಾತ್ಮಕ
ನಹಿತ ಮಾಯಾ ಮೋಹಿತಂ ಪಶುಭೋಕ್ತೃವೆನಿಸುವನು ॥ ೬೨ ॥

* ಪಾ—ಯಥಾ ಶು—ದ್ಧಾಶ್ರಿವ

ಮತ್ತ ಸದ್ರೂಪಿಣಿ ಸಮಾಯೆ ನಿ-
ಮಿತ್ತ ಲೋಕೋಪಾಧಿಕಾರಿಣಿ
ಮತ್ತ ಚಿತ್ತೆಯು ಚೇತನಾತ್ಮಕಿ ವಪುರಹಂಕಾರಾ ॥
ಯತ್ತ ಜನನಿಯು ಶುದ್ಧಮಾನಸಿ
ಕೃತ್ರಿಮಾಂಗಿ ಸಮಸ್ತ ಭೋಗ್ಯೋ
ದಾತ್ತ ಭಾವೆಗುಣಾದಿ ಪಾಶ ಪದಾರ್ಥಮೆನಿಸುವಳು ॥ ೬೩ ॥

ಪೂರ್ವದೇವಾಮರ್ತ್ಯನರ ಗಂ-
ಧರ್ವ ಯೋನಿಯೊಳಿಹನು ಜೀವಂ
ಸರ್ವ ಜೀವರ ಹೃದಯದೊಳು ಶಶಿಕಾಂತ ಜಲದಂತೆ ॥
ನಿರ್ವಿಕಲ್ಪನಮೂರ್ತಿ ಪರಶಿವ
ನೋರ್ವ ತನ್ನಯ ಮಾಯೆ ಸಹಿತಂ
ನಿರ್ವಿಕಾರಂ ಪ್ರೇರಕಾತ್ಮಕನಾಗಿ ನೆಲಸಿಹನು ॥ ೬೪ ॥

ಅವಿರಳಾಖಂಡೈಕ್ಯರಸಮಯ
ನವಿಕಲಾತ್ಮಂ ಪ್ರಕೃತಿ ಕಾರ್ಯಕೆ
ವಿವಿಧ ತನುವಂತೊಡಲದೇಂ ಕಾರಣವರಿಯೆ ಬಳಿಕ ॥
ಕುವಿಧ ಮಾಯಾ ಸಹಿತ ವಭವ
ಪ್ರವಿಮಲಾಂತರ್ಯಾಮಿಯಾ-ಮಾ-
ನವ ಹೃದಯಾಂಬುರುಹದಲ್ಲಿರಲೇನು ಕಾರಣವು ॥ ೬೫ ॥

ಸಂತತಾಶ್ರಿತ ವಸ್ತು ನಿವಹ
ಭ್ರಾಂತಿಯಿಂದಜ್ಞಾನದಿಂದ-
ಶ್ರಾಂತ ಮೋಹಿತಮಹದ ವಿದ್ಯಾರತಿ ವಿಭೇದದೊಳು ॥
ಸ್ವಾಂತ ನಿರ್ಮಲನವಿಕಲಾತ್ಮಂ
ಚಿಂತಿತ ಶ್ರುತಿ ಮಸ್ತಕನಾ ಭ-
ವಾಂತ ನಿಜಮಂ ಮರೆದು ನಾನಾಯೋನಿಯಲ್ಲಿಹನು ॥ ೬೬ ॥

ಮರ್ತ್ಯಪಶು ಗಂಧರ್ವ ದನುಜಾ
ಮರ್ತ್ಯಯೋನಿಯನಾಶ್ರಯಿಸಿತಾಂ
ಮರ್ತ್ಯದೊಳು ಜಾತ್ಯಾಯುರಾರೋಗ್ಯಾದಿ ಭೋಗಕ್ಕೆ ॥
ಕೀರ್ತ್ಯ ಬಲೆಗೋಸ್ಕರವು ಮತಿ ಸಾ-
ಮರ್ಥ್ಯಮಿಲ್ಲದೆ ಸಂತತಂ ನಿ-
ಶ್ಯಾರ್ಥ್ಯವಿದ್ಯಾಕರ್ಮಮಂ ಕುರುಹಿಟ್ಟು ಮಾಡುವನು ॥ ೬೭ ॥

ಕರ್ಮ ಶತ ಕೋಟಿಯನೆಸಗಿ ನಿಜ-
ಮರ್ಮವರಿಯದೆ ಕಪಟ ಸಂಸೃತಿ
ಧರ್ಮದೊಳು ವಿಪರೀತ ಕಾರಣ ವಳಲು ವಾತ್ಮಗ್ಗೆ ॥
ಕರ್ಮ ಸಾಕ್ಷಿಕನಾಗಿ ಶಿವ-ನಾ
ಕೂರ್ಮೆಯಿಂ ಸು ಹಿತೋಪದೇಶವ
ಮರ್ಮದಿಂ ಬೋಧಿಸ ಪ್ರೇರಕನಾಗಿ ನೆಲಸಿಹನು ॥ ೬೮ ॥

ಚಂದ್ರಕಾಂತೋದಕದವೊಲು ದಿವ
ಸೇಂದ್ರಕಾಂತಾನಲನವೊಲು ಸುಮ
ಹೇಂದ್ರಜಾಲದ ಕೃತ್ರಿಮದವೊಲು ಜಲಧರಾಂತಸ್ಥ ॥
ರುದ್ರಮಹಿತಕ್ಷಣರುಚಿಯವೊಲು
ಸಾಂದ್ರಬೀಜಾಂಕುರದವೊಲು ನಿ-
ಸ್ತಂದ್ರ ನಿಷ್ಕಲ ಪರಶಿವಂ ಪಿಂಡಸ್ಥ ಮಾಗಿಹಮ ॥ ೬೯ ॥

ಇಂತು ತನ್ಮಯಲೀಲೆಯಿಂದೀ
ಭ್ರಾಂತುಚ್ಛೈತನ್ಯಾತ್ಮನಂ ನಿ
ಶ್ಚಿಂತನಂ ಮಾಡುವೆನೆನುತ್ತುಂ ಪ್ರೇರಿಸಲ್ಕಿವನ ॥
ಸ್ವಾಂತ ನಿರ್ಮಲಮಾಗಲದರಿಂ
ಶಾಂತಮೂಗೆ ಮಲತ್ರಯಂಗಳು
ಮುಂತೆ ಪಿಂಡಜ್ಞಾನಿ ಯೆನಿಸಿದನಿದನು ಮುಂದೊರೆವೆ ॥ ೭೦ ॥

ಪಾಶಹರ ಪರಿಪೂರ್ಣ ಭಾವಾ
ವೇಶ ಸಚ್ಚಿದ್ರೂಪ ಪರಮಾ
ಕಾಶಮಧ್ಯದಿ ವಿಹರ ಶಿವತತ್ವಾಸುಭವಸಾರ ||
ಕೋಶ ಪಾವನ ಚರಿತ ವಿಜಿತ
ಕ್ಲೇಶ ಷಡ್ವರ್ಗಾದಿ ಕಾಂತಾ
ರಾಶುಗಾಪ್ತಸುಮಹೋದಯ ಜಯ ಜೀಯ ನಿರ್ಮಾಯ || ೭೧ ||

ಇದು ಸಮಸ್ತ ಶಿವಾನುಭಾವರ
ಪದಪಯೋರುಹ ಗಂಧಮದ ಷ-
ಟ್ಪದನು ಷಟ್‌ಸ್ಥಲ ಸಾರ್ವಭೌಮಂ ಚೆನ್ನ ವೃಷಭೇಂದ್ರಂ ||
ವಿದಿತವಾಗಿ ನಿರೂಪಿಸಿದ ಸ-
ಮ್ಮುದ ಮಹಾ ಕ್ಷೇತ್ರಜ್ಞ ಸುಮನೋ
ವಾದದೊಳು ಪಿಂಡಸ್ಥಲಕೆ ಮೂರನೆಯ ಮಹಾಸಂಧಿ || ೭೨ ||

ಇತಿ ಕ್ಷೇತ್ರಜ್ಞಸುಮನೋವಾದೆ ಪಿಂಡ ವಿವರಣಾ ತೃತೀಯ ಪ್ರಕರಣಂ ||
ಅಂತು ಸ್ಥಲ ಮೂರಕ್ಕಂ ಪದನು ೧೯೮ ಕ್ಕಂ (೧೨೬+೭೨).
ಸಮಾಪ್ತಂ ಮಂಗಳ ಮಹಾಶ್ರೀ.... ಶ್ರೀ.... ಶ್ರೀ....



ಶ್ರೀಗುರು ಬಸವಲಿಂಗಾಯನಮಃ

# ನಾಲ್ಕನೆಯ ಸಂಧಿ

## ಪಿಂಡಜ್ಞಾನ ಸ್ಥಲಂ

ಚರಮದೇಹಿಯೆ ಪಿಂಡ ನಾಮಂ
ಪರಮ ಸದಸದ್ವಸ್ತು ವಿವರ
ಸ್ಥಿರಮತಿಯೊಳಿಂತಿವನೆ ಪಿಂಡಜ್ಞಾನಿ ಎನಿಸಿದನು ॥ ॥ ಪಲ್ಲವಿ ॥

ಅಕ್ಷರಾಕ್ಷರ ಭಾವ ಭಾವಾ
ಲಕ್ಷ ಲಕ್ಷಣ ಯೋಗ ಯೋಗನಿ-
ಜಕ್ಷವ ಕ್ಷವ ತತ್ವ ತತ್ವ ಸುಸೂಕ್ಷ್ಮ ಸೂಕ್ಷ್ಮಗತ ॥
ಶಿಕ್ಷ ಶಿಕ್ಷಿತ ಕಾನು ಕಾಮ ವಿ-
ಮೋಕ್ಷ ಮೋಕ್ಷದ ದೇವ ದೇವಾ
ಧ್ಯಕ್ಷ ದಕ್ಷ ವಿಪರೋಕ್ಷ ಮಾಂ ಪಾಹಿ ॥ ೧ ॥

ವ್ಯಕ್ತ ಶಿವ ಕರುಣಾಕಟಾಕ್ಷದ
ಶಕ್ತಿ ವರ್ತಿಸುತಿರೆ ನಿವೃತ್ತಿಯ
ಶಕ್ತಿ ವರ್ತಿಪುದಖಿಳ ವಿಷಯದೊಳಾ ನಿವೃತ್ತಿಮಯ ॥
ಶಕ್ತಿಯಿಂ ಚಿಚ್ಛಕ್ತಿ ವರ್ತಿಪು
ದುಕ್ತಿಸಲು ಚಿಚ್ಛಕ್ತಿಯಿಂ ನಿ-
ರ್ಣಿಕ್ತ ಸದಸದ್ವಸ್ತು ವಿವರವನರಿವುತಿಹನೊಲಿದು ॥ ೨ ॥

ಆ ಪರಬ್ರಹ್ಮಾಮಳಿನ ಸ-
ದ್ರೂಪಿಗೇ ನೊಂದನ್ಯಥಾ ಸ-
ದ್ರೂಪ ವಿಲ್ಲಾಗಿಯೆ ಸದೋದಿತಸಚ್ಚಿದಾನಂದಾ ॥
ಲೇಪ ಪರಿಪೂರ್ಣಾದ್ಯಖಂಡ
ವ್ಯಾಪಕ ಬ್ರಹ್ಮವೆ ಗಗನ ದಂ-
ತಾಪರಿಯೊಳತ್ತತ್ತ ನಿರವಯಮಾಗಿ ರಾಜಿಪುದು ॥ ೩ ॥

ಕುಸುಮ ಪಲ್ಲವ ಫಲ ಸಮಾಜಂ
ವಸುಮತೀರುಹದಿಂ ಸ್ವಗತಮಾ
ಗೆಸೆವವೊಲಸದ್ರೂಪಿಣಿ ಜಗತ್ಕಾರಿಣಿ ವಿಜಾತಿ ॥
ನಿಶಿತ ಜಡಮಯಿ ಮಾಯೆ ಪೂರ್ಣೋ
ಲ್ಲಸಿತನಿರವಯವಸ್ತುವಿಂ ಭಾ
ವಿಸುವೊಡುಂಟಾಗಿರ್ಪುದೇಂ ಕಾರಣವೊ ಚಿದ್ರೂಪ ॥ ೪ ॥

ಶುಕ್ತಿರಜತ ಸ್ಥಾಣುಚೋರ ವಿ
ವಿಕ್ತರಜ್ಜ್ವಹಿರೂಪ ಮೆಂಬಂ
ತುಕ್ತಿಸುವೊಡಿಲ್ಲದ ಸಮಾಯಾ ಕಲ್ಪನೆಯನುಳಿದು ॥
ಯುಕ್ತಿಯಲ್ಲಿ ವಿಚಾರಿಸಲು ಪೂ-
ರ್ವೋಕ್ತ ಕಲ್ಪನೆ ಮಿಥ್ಯಮಾಗ-
ವ್ಯಕ್ತ ಸಚ್ಚಿದ್ರೂಪ ವಸ್ತುವೆ ಸತ್ಯಮಾಗಿಹುದು ॥ ೫ ॥

ಶಶಿ ಕಲಂಕೆಂತಂತೆ ನೆಮ್ಮಿಯೆ
ಮುಸುಕಲಮ್ಮದೆ ಚಂದ್ರನಿಂ ಬೆಳ
ಗಿಸಿಕೊಳುತ್ತಿಹುದಿಹಿಗೆ ನಾನೆನ್ನುವನರಿಯೆನೆಂಬ ॥
ಎಸೆವ ಪರಿಪೂರ್ಣವನು ನೆಮ್ಮಿಯೆ
ಮುಸುಕಲಮ್ಮದೆ ವಸ್ತುವಿಂದರು-
ಹಿಸಿ ಕೊಳುತ್ತಿಹುದಾಗಿ ಮಾಯೆ ನಿಜವನು ಬಿಟ್ಟರದು ॥ ೬ ॥

ಚಿತ್ರಶಕ್ತಿಗೆ ಚಿತ್ರಕನೊಳ-
ನ್ಯತ್ರ ಕಲ್ಪನೆಯಿಲ್ಲದೊಲು ಸ-
ನ್ಮಾತ್ರ ಪೂರ್ಣಬ್ರಹ್ಮದಿಂ ಮಾಯೆಗೆ ವಿಲಕ್ಷಣಮೇ ।
ಶತ್ರುವಾಗಿಹುದಾ ವಿಜಾತಿ ವಿ-
ಚಿತ್ರಮಾಯಾ ಕಲ್ಪನೆಯೆ ಚಿ-
ನ್ಮಾತ್ರ ವಸ್ತುವಿನೊಳು ವಿಚಾರಿಸಲಿಲ್ಲ ನಿಜದಲ್ಲಿ ॥ ೭ ॥

ಸುಶಿಖಿದಾಹಕ ಶಕ್ತಿಯೆಂತಂ
ತೊಸೆದು ಮಣಿಮಂತ್ರಂಗಳಿಂ ಬಂ-
ಧಿಸಿಕೊಳುತ್ತಿಹುದಾಗನಲ ರೂಪಲ್ಲದಾ ಶಿಖಿಯ ॥
ದೆಸೆಯ್ಯನುಳಿದ ರುಹದ ಸ್ಫೋಟಕ
ವೆಸೆವ ಕಾರ್ಯಕೆ ವಿಹತಮಹುದಾ
ಗುಸಿರಲಾ ಬ್ರಹ್ಮಸ್ವರೂಪಿಣಿಯಪಳಲಾ ಮಾಯೆ ॥ ೮ ॥

ಏಕಮೇವಾದ್ವೈತಮೆಂಬ ವಿ-
ವೇಕ ಶ್ರುತ್ಯನು ಭಾವದಿಂ ಸು-
ಸ್ವೀಕೃತಾಖಂಡೈಕಬೋಧಾಪೂರ್ಣಮಯಮಪ್ಪ ॥
ಆಕಲಾ ಬ್ರಹ್ಮದೊಳು ತಿಳಿಯೆ ನಿ-
ರಾಕೃತ ಸ್ವಗತಾದಿ ಭೇದೋ
ದ್ರೇಕ ಮಾಯಾಕಲ್ಪನೆಯೆ ಪುಸಿ ಮತವದಂತಿರಲಿ ॥ ೯ ॥

ರಾಗದಿಂ ಬ್ರಹ್ಮದೆ ವಿಲಕ್ಷಣ
* ಮಾಗಿ ತೋರದೆ ಬ್ರಹ್ಮದೊಳು ಸಂ-
ಯೋಗಿಯಾಗಿ ವಿಘಟಿತಘಟನಾದಿಕಸಮರ್ಥತೆಯಿಂ ॥
ಆ ಗಗನ ಮುಖ್ಯ ಪ್ರಪಂಚೋ
ದ್ಯೋಗಮಯ ತತ್ಕಾರ್ಯ ವಿತ್ತ ಮೆ
ಯಾಗಿ ಮಾಡುವಳಖಿಳ ಕಮಳಭವಾಂಡದುದಯವನು ॥ ೧೦ ॥

---

* ಪಾ—ಮಾಗಿರೆ ತಾರ

ವಿಲಯ ಸುಪ್ತಿಗಳಲ್ಲಿ ನಿಜಮೊಡ-
ನೊಲವಿನ ಧ್ಯಾನ್ಯೈಕ್ಯಮಾಗಿ-
ರ್ದುಲಿಡು ಭೇದಾವಸ್ಥೆಯಂ ಜಾಗ್ರೋದಯಂಗಳೊಳು ॥
ನಲವಿನ್ನೈದುವು ದಾಗಿ ಯಾಗಳು
ಲಲಿತ ಶಿವಚೈತನ್ಯ ಮದರೊಳು
ಫಲಿಸದಾಗಿ ವಿಲಕ್ಷಣಾತ್ಮಕಿ ಯೆನಿಪಳಾಮಾಯೆ ॥ ೧೧ ॥

ಪ್ರಣುತ ಶಿವಚೈತನ್ಯಮಂ ಬಿ-
ಟ್ಟೆಣಿಸದಾ ಚಿತ್ರಾಂಬರಂ ಪ್ರಸ-
ರಣಾ ದೊಳರುಹಿಸಿ ಚಿತ್ರಮಂ ಮುಗಿದಡಗಿಪೊಲುಮಾಯೆ ॥
ಗಣಿತ ಸೃಷ್ಟಿಯೊಳಾ ಜಗತ್ಕಾ
ರಣಮೆನಿಸಿ ಲಯದಿಂ ಮರಸಿ ಸ
ದ್ಗುಣಿಗವಚ್ಛಿನ್ನಸ್ವರೂಪೋಪಾಧಿಯೆನಿಸುವಳು ॥ ೧೨ ॥

ಕ್ರೂರಮಾನಸಿ ಮೂಢವರ್ತಿನಿ
ಯಾರಜಸ್ತಾಮಸ ಗುಣಾತ್ಮಕಿ
ಘೋರ ಬುದ್ಧಿನಿವಾಸಿ ಕರ್ಮಾಶ್ರಯೆ ಪರಿಚ್ಛೇದಿ ॥
ಪಾರಮಾರ್ಥಿಕಯೋಗಭೋಗ ಮ-
ಹಾರತಿ ಪ್ರಿಯೆ ಜಾಡ್ಯರೂಪಿಣಿ
ಚಾರುಸದ್ರೂಪಕ ವಿಲಕ್ಷಣೆ ಮಾಯೆ ನಿಜಕಿಲ್ಲ ॥ ೧೩ ॥

ಸತತ ಚೈತನ್ಯ ಸ್ವರೂಪೋ-
ನ್ನತ ವಿಶಿಷ್ಟ ಪ್ರೇರಕಾಧಿಕ
ವಿತತ ಸರ್ವಜ್ಞಾದಿ ಸದ್ಗುಣ ಭರಿತ ನಿರ್ಮಳಿನ ॥
ಪತಿಪದಾರ್ಥ ಮಹೇಶ್ವರಂಗ-
ಪ್ರತಿಮ ಲೋಕೋಪಾಧಿ ಯಾಗವಿ-
ರತ ವಿಮೋಹನಕಾರಣಾತ್ಮಕಿ ಯೆನಿಸಿ ಮೋಹಿಪಳು ॥ ೧೪ ॥

ಶುಕ್ತಿ ರಜತಭ್ರಾಂತಿಯಂತ
ವ್ಯಕ್ತಮೋಹಿನಿ ಗಗನಕುಸುಮಾ
ರಕ್ತಿಯೊಲು ತುಚ್ಛಾತ್ಮಕಿ ಶಶವಿಷಾಣ ಮಯದಂತೆ ॥
ಯುಕ್ತಿ ಸಲಸದ್ರೂಪಿಣಿ ನಿಜ ವಿ-
ಮುಕ್ತೆ ದುಃಖಾನಿತ್ಯ ಖಂಡಿತ
ಯುಕ್ತ ಜಡಮಯೆ ಮಾಯೆ ಸಹಜಕುಪಾಧಿಯೆಂತಹುದು ॥ ೧೫ ॥

ಸಾವಯಂ ನಿರವಯವು ನಿರವಯ
ಸಾವಯಂ ಸದಸಕ್ತ ಸತ್ ಸ-
ತ್ತ್ರೋ ವಿಭಿನ್ನ ಮಭಿನ್ನ ಭಿನ್ನಾಭಿನ್ನ ರೂಪುಗಳಿಂ ॥
ತೀವಿ ತಿಳಿಯಲು ಲೋಕ ಸಂಬಂ-
ಧಾವರಣ ಯುಕ್ತಿಯೊಳು ವಸ್ತು ವಿ-
ಭಾವದಂತಾ ಮಾಯೆ ನಿತ್ಯೋಪಾಧಿಯೆನಿಸುವಳು ॥ ೧೬ ॥

ಕಲುಷ ಕರ್ಮೋದ್ಭಾವೆ ಚಿಂತಾ
ನಿಲಯೆ ಸರ್ವಾನರ್ಥಕಾರಿಣಿ
ಫಲಿತ ಬಹು ಮಿಥ್ಯಾಸ್ವರೂಪಿ ತಮಃ ಪ್ರಧಾನ ಮಯೆ ॥
ಮಲಿನರೂಪಾವಿದ್ಯೆ ನಿಜ ನಿ-
ಷ್ಕಲಿತಪರಮಾನಂದ ಮಹದು-
ಜ್ವಲಿತನಿರುಪಾದಿಕಗುಪಾಧಿಯೆನಿಸುವುದೇಪರಿಯಿಂ? ॥ ೧೭ ॥

ಅನುಪಮಿತ ಮಿಥ್ಯಾ ಸ್ವರೂಪಿಣಿ
ಯೆನಲಿದೇನಾಗಗನಕುಸುಮ ದೊ-
ಲನವರತ ಶೂನ್ಯ ಮೆದಲಲ್ತಾಸ್ವಪ್ನ ಗಜದಂತೆ ॥
ಘನ ವಿಚಾರಣ-ಬಾಧಿತಮೆ ತ
ಜ್ಜನಿತ ಮಿಥ್ಯಾರೂಪ ಮಾಯೆ ಸ-
ವಿನಯ ವಸ್ತುಗೆ ಶುದ್ಧ ತತ್ತ್ವೋಪಾಧಿಯೆನಿಸುವಳು ॥ ೧೮ ॥

ನಿರ್ವಿಕಲ್ಪ ನಿರಧಿಕ ನಿಶ್ಚಲ
ನಿರ್ವಿಕಾರ ನಿರೀಹ ನಿರುಪಮ
ನಿರ್ವಿಶೇಷ ನಿರಘ ನಿರಜ ನಿರ್ಗುಣ ನಿಜಾನಂದ ॥
ನಿರ್ವಿರಳ ಪರಮೇಶ್ವರಂಗೆ ಕು
ದುರ್ವಿಜಯೆ ದುರ್ಗುಣೆ ದುರಾತ್ಮಕಿ
ದುರ್ವಿವೇಕಿ ದುರಾಶಿ ಮಾಯೆಯುಪಾಧಿಯೆಂತಹಳು ॥ ೧೯ ॥

ಮತ್ತೆ ನಾನಾತ್ಮದ ದೆಸೆಯೊಳನಿ-
ಮಿತ್ತದಿಂ ತನ್ನಲ್ಲಿ ಬಿಂಬಿಸಿ
ರುತ್ತುಮಿರ್ಪಾ ಪಶು ಪದಾರ್ಥಾತ್ಮಕರ ಭೋಗಾರ್ಥಂ ॥
ಮತ್ತ ಮಾಯೆಯೆ ಭೋಗ್ಯ ರೂಪಂ
ಚಿತ್ತು ಪಾಶಪದಾರ್ಥಮೆನಿಸಿ ಮ-
ಹತ್ತರ ಗುಣತ್ರಯ ಸಮಾನಾವಸ್ಥೆಯಲ್ಲಿಪ್ಪ ॥ ೨೦ ॥

ಸರ್ವಕಾರ್ಯಕ್ಕೋಸ್ಕರಂ ಶಿವ
ಪೂರ್ವ ಸನ್ನಿಧಿ ಲಕ್ಷಣೇಕ್ಷಣ
ಗರ್ವಮಾತ್ರದೊಳಂದು ಪಡೆದಾಕಾಲವಶದಿಂದ ॥
ಕೊರ್ವಿ ಪರಿಣಾಮಿಸಿ ವಿಕಾರಿಸಿ
ಚಾರ್ವವಿದ್ಯೆಯೆ ತವೆವಿಕಸಿತಾ-
ಖರ್ವ ಬೀಜದೊಲಿರ್ಪ ಸುಮಹತ್ತತ್ವಮೆನಿಸಿತ್ತು ॥ ೨೧ ॥

ಸಾರಸುಮಹತ್ತತ್ವ ವಿದು ತಾಂ
ಕಾರಣಾತ್ಮ ಪ್ರಕೃತಿಯಲ್ಲದ
ಚಾರು ಕರಣಾಳಿಯೊಳಹಂಕೃತಿಯಲ್ಲದ-ವಿಕಾರ ॥
ಕ್ರೂರಮಿಥ್ಯಾಜ್ಞಾನ ಭಾವಾ
ಪಾರ ನಿರ್ವಿಕಲ್ಪ ರೂಪೇ
ಸಾರಿ ಮಧ್ಯಾವಸ್ಥೆಯೆನಿಸಿ ವಿರಾಜಿಸುತ್ತಿಹುದು ॥ ೨೨ ॥

ಬಳಿಕ ಸುಮಹತ್ತತ್ವದಿಂದು-
ಜ್ವಳಿತ ಗುಣಭೇದಂ ಬಡೆದು ಕೇ-
ವಳದಿ ಮಿಥ್ಯಾಜ್ಞಾನ ಸವಿಕಲ್ಪ ಸ್ವರೂಪಕದಿಂ ||
ಕಳಿತ ನಿಜ ಪರಮಾತ್ಮ ಯೋಗಾ
ಮಳಿನ ಸತ್ಯಾಧ್ಯಾಸವಹ ನಳ
ನಳಿಪ ಮೂಲಾಹಂಕೃತಿ ವಿಚಾರಿಸಲುದಯಿಸಿತ್ತು || ೨೩ ||

ಲಸದಹಂಕೃತಿಯಿಂ ಗುಣತ್ರಯ
ವೆಸೆದು ವಿದರೊಳು ಸತ್ವದಿಂ ಮಾ-
ನಸ ಮುಖಾಂತಃಕರಣಕುಲ ಬುದ್ಧೀಂದ್ರಿಯಾದಿಗಳು ||
ಪೊಸ ರಜೋಗುಣದಿಂ ಶರೀರ
ಪ್ರಸರ ಕರ್ಮೇಂದ್ರಿಯವು ಪ್ರಾಣ
ಶ್ವಸನಮುಖ್ಯಸನೀರಣಂಗಳುದಿಸಿದ ವರ್ಧಿಯೊಳು || ೨೪ ||

ಆ ತಮೋಗುಣದಿಂ ನಭೋಮುಖ
ಭೂತಪಂಚಕಮುದಯಿಸಿದು ವೀ
ಭೂತ ಪಂಚೀಕೃತ ಸಮೇಳನದಿಂ ಕಮಲಜಾಂಡಾ ||
ಖ್ಯಾತ ಭುವನ ಶರೀರ ಘಟಗತ
ಚೇತನಾತ್ಮಕ ವೀತ ಗುಣ ವಿಷ-
ಯಾತುರಂಗಳೊಗೆದವು ಬಳಿಕೀ ತತ್ವನಿವಹದೊಳು || ೨೫ ||

ವೇದಿತಾಧ್ಯಾತ್ಮಿಕವು ಪದಿನಾ-
ಲ್ಕಾದ ಇಂದ್ರಿಯ ಮವರ ವಿಷಯುಗ-
ಳಾಧಿ ಭೌತಿಕ,-ಮಾಧಿ ದೈವಿಕ ತದಧಿದೈವ ಮಿವೇ ||
ಮೋದಿತ ವಿರಾಟ್ಪುರುಷಗಿಂದ್ರಿಯ
ಮಾದುವಂಗ ಹಿರಣ್ಯಗರ್ಭಂ
ಗಾದುದಂತರ್ಯಾಮಿ ಗೊಡಲೇ ತಮ ಮಯಾವರಣ || ೨೬ ||

ಮನವೆ ನೀ ನಿರ್ಪತ್ತುನಾಲ್ಕನೆ
ಯವನಹಂಕೃತಿ ಯೈದನೆಯ ದಾ-
ರನೆಯವಂ ಜೀವನನ ವಿದ್ಯೋಽಪಾಧಿಕೇಶ್ವರನೇ- ॥
ಳನೆಯವನಹಂ ಜೀವರವಕಾ-
ಶನುತ ನಂಟನೆಯವ ನಧಿಷ್ಠಾ-
ನ ನಿಜಮಹಿತ ಬ್ರಹ್ಮ ವೊಂಬತ್ತನೆಯದೆನಿಸುವುದು ॥ ೩೭ ॥

ನಿರ್ವಿಕಲ್ಪಾನಂದ ನಿಯತಾ
ಖರ್ವ ಸಚ್ಚಿದ್ರೂಪ ನಿರುಪಮ
ನಿರ್ವಿಕಾರ ಸ್ವಮಹಿತಾಖಂಡೈಕ ಪರಶಿವನಿಂ ॥
ನಿರ್ವಿಶೇಷ ನಿಜೋದಯಾತ್ಮನೆ
ಸರ್ವಮಿಥ್ಯೋಽಪಾಧಿ ಜಡಮಯ
ಪೂರ್ವ ಮಾಯೆಯೊಳಖಿಳ ಮುದಯಂ ತಿಳಿಯಲೆಂತಾಯ್ತು ॥ ೩೮ ॥

ಕಾರ್ಯದಿಚ್ಛಾ ಭಾವ ವಿಲ್ಲದ
ಸೂರ್ಯನಿಂ ಯತ್ನಾದಿಯಿಲ್ಲದ
ಸೂರ್ಯಕಾಂತದೊಳಗ್ನಿ ಜನಿಸುವ ಮಾಳ್ಕೆಯಿಂದೊಲಿದು ॥
ಧೈರ್ಯನಿಧಿ ನಿಜ ನಿರ್ವಿಕಾರ
ಸ್ಥೈರ್ಯ ಸಚ್ಚಿದ್ಬ್ರಹ್ಮದಿಂ ಜಡ
ಭಾರ್ಯ ಮಾಯೆಯೊಳರಿಯೆ ವಿಶ್ವೋತ್ಪತ್ತಿಯಾಗಿಹುದು ॥ ೩೯ ॥

ನಿತ್ಯ ನಿರ್ಮಲ ನಿರ್ವಿಕಾರ
ಪ್ರತ್ಯಯಾಖಂಡೈಕ ಬೋಧಾ
ಸತ್ಯಮಹಿತ ಬ್ರಹ್ಮದಿಂ ಜಡಮಾಯೆಯಿಂ ಕರ್ಮ ॥
ಕೃತ್ಯಮಿಥ್ಯೋಪಾಧಿ ದೃಶ್ಯಾ
ನಿತ್ಯ ವಿಶ್ವೋತ್ಪತ್ತಿಯಾಯ್ತೆನೆ
ನಿತ್ಯನಲ್ಲಿದು ಕೊರತೆಯಲ್ಲವೆ ಯಾಗಮೋಕ್ತಿಯೊಳು ॥ ೪೦ ॥

ಅತಿಶಯಬ್ರಹ್ಮಾನುಭಾವಾ
ಯತ ಯತೀಶ್ವರನಲ್ಲಿ ಸತಿಪತಿ
ರತಿ ಸುಕಾಂಕ್ಷ ತ್ರಿವಿಧಮೊಂದೇ ಸ್ವಪ್ನಕಾಲಜೊಳು ॥
ಪ್ರತಿಯಿಡಲ್ತೋರ್ದೊಡೆ ಸದಾ ನಿ
ಶ್ಚಿತ ನಿಜಾನಂದೈಕ ಮಾನಸ
ಯತಿಯೊಳಾವ ಕೊರತೆಯ ಕಲ್ಪಿಸಬಹುವದಂತಿರಲಿ ॥ ೩೧ ॥

ಅಪ್ರತಿಮಸಾಕ್ಷಿಕನೊಳನು ವಿಂ-
ದ ಪ್ರಮಾಣ ಜ್ಞಾತೃಭ್ರಾಂತಿ ನಿ-
ಜ ಪ್ರಕಾಶಜ್ಞಾನ ಭ್ರಾಂತಿ ಜ್ಞೇಯಭ್ರಾಂತಿಗಳಿಂ ॥
ಕ್ಷಿಪ್ರದಿಂ ಭ್ರಾಂತಿಸುವತ್ರಿಪುಟೆ ಮ-
ಯ ಪ್ರಪಂಚುವಿದೊಂದೆಕಾಲದೊ-
ಳೆ ಪ್ರಭವಿಸಲು ವಸ್ತುಗಾವ ನಿಷೇಧಮಿಲ್ಲರಿಯೆ ॥ ೩೨ ॥

ವಿಕಟಮಾಯೆಯೊಳರಿಯೆ ಸುಪ್ತ
ಪ್ರಕೃತಿಯಿಂ ಬ್ರಹ್ಮಾಂಡಭಾಂಡಾ
ದಿಕಲಾ ನಿರ್ಮರುತಾಬ್ಧಿಯೊಳು ಬುದ್ಬುದ ತರಂಗಾದಿ ॥
ಪ್ರಕಟಪಂತಾಶುಗಚಲನೆಯಿಂ
ನಿಕಟ ಸಚ್ಚಿತ್ ಸೌಖ್ಯ ಶಿವನಿಂ
ಪ್ರಕೃತಿ ನಾಮ ಸುರೂಪಕಾರ್ಯಮೆ ದ್ವಿವಿಧಮಾಗಿಹುದು ॥ ೩೩ ॥

ಮತ್ತೆ ಮೂಲಾಹಂಕೃತಿಯೊಳನು
ವೆತ್ತು ಬಿಂಬಿಸಿ ತೋರ್ಪ ಜೀವನು
ದಾತ್ತ ಚೈತನ್ಯಮೆ ಮಹಾಜ್ಞಾತೃ ಸ್ವರೂಪಕವು ॥
ಮತ್ತ ಮನದೊಳು ಬಿಂಬಿಸಿಹುದೆ ನಿ-
ಜೋತ್ತಮ ಜ್ಞಾನಸ್ವರೂಪು ನಿ-
ರುತ್ತರಾಖಿಳಭೂತ ಭೌತಿಕ ವಿಷಯಮೇ ಜ್ಞೇಯಂ ॥ ೩೪ ॥

ಸತ್ತು ಚಿತ್ತಾನಂದ ನಿತ್ಯಾ
ಯತ್ತ ಪೂರ್ಣಮಿವಾತ್ಮ ಲಕ್ಷಣ
ಮತ್ತರಿಯೆ ನರಿದಪೆ ನರಿವೆನಂಬಲ್ಲಿ ಕಾಮಾದಿ ||
ವೃತ್ತಿಗಳು ತೋರ್ಪಲ್ಲಿ ತೋರದಿ
ಹತ್ತಣೆನವಸ್ಥಾ ತ್ರಯಂಗಳೊ
ಳತ್ತ ಬಾಧೆಗಳಿಲ್ಲದುಂಟಾಗಿಹುದೆ ಸದ್ರೂಪ || ೩೫ ||

ಮತ್ತವಸ್ಥೆಗಳಲ್ಲಿ ವಿಷಯಮ
ನೆತ್ತಲಿದಿರಿಟ್ಟುಳಿಯದರಿವುದೆ
ಚಿತ್ತು ಪರಮಪ್ರೀತಿಗಳೆ* ನಿರ್ವಿಷಯಮಪಹತನವೆ ||
ಉತ್ತಮಾನಂದಂ ಸದೋದಿತ
ವೆತ್ತುಳುಮೆಯುದು ನಿತ್ಯಮಾ ಷ-
ರ್ವಾರ್ಥಸಾ§ ಧನಮಹುದರಿಂ ಸಂಬಂಧ ಮದು ಪೂರ್ಣ || ೩೬ ||

ಸತ್ತು ಚಿತ್ತಾನಂದವೆಂಬ ನಿ-
ಜೋತ್ತಮಬ್ರಹ್ಮಸ್ವರೂಪಾ
ಯತ್ತ ವಂಶತ್ರಯ ಮಿರಲವರೊಳಾನಂದವೆ ಬುದ್ಧಿ ||
ವೃತ್ತಿರಹಿತಾಖಂಡಪೂರ್ಣೋ
ದಾತ್ತ ನಿರುಪಮ ನಿರಘ ನಿರಜ ನಿ-
ರುತ್ತರ ನಿರಾಮಯಮಹುದರಿಂ ವಸ್ತುರೂಪಕವು || ೩೭ ||

ಸಾರ ಸಚ್ಚಿದ್ರೂಪುಗಳ ಶೃಂ-
ಗಾರದಂತೆ ಸಮಸ್ತ ವೃತ್ತಿ ವಿ-
ಚಾರದೊಳಭಿವ್ಯಕ್ತಿಯುಂಟಾಗಿಯೆ ಸದಾನಂದ ||
ಸ್ವಾರದಂಗಕೆ ನಿರವಿಸಲು ಬೇ-
ಕಾರಯಲ್ಕದ ಕಿಲ್ಲವಾಗ ಶ-
ರೀರದಾನಂದವೆ ಪರಮನೆಂಬುದು ವಿಕಲ್ಪದೊಳು || ೩೮ ||

---

* ಪಾ—ಸವಿಷಯವಹತಳುನವೆ § ಸಧನಸುಹುದದರಿಂ

ನೀರು ತತ್ಪ್ರಾಂತ್ಯೋಷ್ಣ ರೂಪ
ಸ್ಫುರಿತದೀಪೋಷ್ಣ ಗೃಹದೊಳಾ
ವರಿಸಿದಾ ಘನತೇಜವೋ ವೇಧಿಪುದು ಜಲದಲ್ಲಿ ॥
ಭರಿತಮಹುದುಷ್ಣಮೆ ಸುತೇಜ
ಸ್ಫುರಣಮಾಗಿರ ದುಷ್ಣಕಾಳಿಗ
ಳೆರಡು ತೃಣದೊಳು ತೋರ್ಪವೊಲು ಪರಮಾತ್ಮ ರೂಪಕವು ॥ ೭೯ ॥

ಕೆಲವು ಪಕ್ವದೊಳರಿಯಲಾ ಮಹ
ದಲಘುಪೂರಿತಪಾರಮಾರ್ಥಿಕ
ವಿಲಸದಮಲ ಬ್ರಹ್ಮಸದ್ರೂಪೊಂದ ಕಶ್ರಾಂತ ॥
ಶಿಲೆಯೊಳಿಹ ಪಾವಕನ ತೆರನು
ಜ್ವಲಿತ ಸಂಸ್ಫುರಣಂ ಘಟಿಪುದಾ
ಗೊಲವಿನಾ ಸದ್ರೂಪನೇ ನಿಜವಸ್ತು ರೂಪಕವು ॥ ೪೦ ॥

ಕ್ರೂರಬುದ್ಧಿ ತಮೋಗುಣದಿ ನವಿ-
ಚಾರಭಾವಿತ ಮೂಢವೃತ್ತಿಯೊ-
ಳಾ ರಜೋಗುಣದಿಂ ಸರಾಗೋದ್ರಿಕ್ತ ಪರ್ಯಟನಾ ॥
ಘೋರ ವೃತ್ತ್ಯುತ್ಕಟಗಳಿಂ ಪರಿ-
ಪೂರ್ಣ ಸಚ್ಚಿದ್ರೂಪೆರಡಕೆ ವಿ-
ಚಾರಿಸಲಭಿವ್ಯಕ್ತಿಯುಂಟಾಗಿಯೆ ನಿಜಾತ್ಮಕವು ॥ ೪೧ ॥

ಸಂತತಾಮಲಸತ್ವಗುಣದಿ ನಿ-
ತಾಂತವೈರಾಗ್ಯಾತ್ಮಕೋತ್ತಮ
ಶಾಂತ ವೃತ್ತಿಗಳಿಂ ಸದೋದಿತಸಚ್ಚಿದಾನಂದ ॥
ಕಾಂತಿರೂಪತ್ರಿವಿಧ ಕೊಲವಿಂ
ಸ್ವಾಂತ ಸಂಸ್ಫುರಣಂಗಳಪ್ಪುದ
ರಿಂ ತದೀಯಾನಂದವೇ ನಿಜವಸ್ತು ರೂಪಕವು ॥ ೪೨ ॥

ಬೇಹ ಜಾಗ್ರಾದಿಗಳೊಳಾಂತ ವಿ-
ಮೋಹ ಘಟಭೇದಾದಿ ಸತ್ಯ ವಿ.
ದೇಹಕೈವಲ್ಯಾಂತರಂ ಘನಸುಪ್ತಿ ಮೂರ್ಛಾದಿ ॥
ಸ್ನೇಹಿತಾವಸ್ಥೆಗಳೊಳಡಗಿ
ರ್ದ್ದಾಹ ಮತ್ತೆ ದ್ದೀಪ್ತಿಸಲು ಮೊದ-
ಗಿಹುದಾ ವ್ಯಾವಹಾರಿಕವೆನಿಪ ಸದ್ರೂಪು . ॥ ೪೩ ॥

ಶುಕ್ತಿರಜತ ಸ್ವಪ್ನ ವಿಷಯದ
ಸತ್ತೆ ತೋರ್ಪಾಗಲ್ಲದರಿದೆ
ಚ್ಚತ್ತ ಬಳಿಕದು ತೋರದಾಗಿಯೆ ಪ್ರಾತಿಭಾಸಿಕವು ॥
ಮತ್ತೆ ತೋರ್ಸಸಮಸ್ತಕಲ್ಪನೆ
ಗುತ್ತರವೆನಿಸಿ ತೋರದಡಗದು
ದಾತ್ತಬೊಮ್ಮದ ಸತ್ತೆ ಪರತರ ಪಾರಮಾರ್ಥಿಕವು ॥ ೪೪ ॥

ಚಿತ್ತೆ ಜೀವೇಶ್ವರ ಮಹಾಕೂ-
ಟಸ್ಥಸದ್ ಬ್ರಹ್ಮಸ್ವರೂಪೆನಿ-
ಸಿತ್ತು ವಿಮಲಾನಂದವೋ ವಿಷಯಾದಿಕ ಬ್ರಹ್ಮಾ ॥
ಯತ್ತ ಮುಖ್ಯಾದ್ವೈತ ವಿದ್ಯೋ
ದಾತ್ತ ಸಂಸ್ಕಾರಾತ್ಮ ನಿಜ ಮೆಂ
ಬುತ್ತರೋತ್ತರಭಾವನಾಷ್ಟಾನಂದವೆನಿಸಿತ್ತು ॥ ೪೫ ॥

ನಿಜದೊಳಿಲ್ಲಾ ಮಾಯೆ ಮತ್ತಾ
ನಿಜದೊಳುದಯಿಸಿ ಲಯಿಸಿತಲ್ಲಿಯೆ
ನಿಜಕೆ ಮಾಯೆಗೆ ತಿಳಿಯಲನ್ಯೋನ್ಯತೆ ಬಳಿಕ ಮಾಯೆ ॥
ನಿಜದೊಳವಿರತ ಶೂನ್ಯವೆಂಬ ಗು-
ಣಜಯುಮಾಗಿಹುದಧಿಕ ನಿತ್ಯಂ
ಋಜುಸುಪೂರ್ಣ್ಣವೆವಸ್ತು ದೇಶಾಕಾಲ ವಿರಹಿತವು ॥ ೪೬ ॥

ಆ ಸುಚಿತ್ತಿನ ಭೇದವಹ ಜೀ
ವೇಶತುರ್ಯಬ್ರಹ್ಮರೊಳು ಮೊದ
ಲಾ ಸಜೀವನೆ ಕುಂಭಬಿಂಬಿತ ಸಾಭ್ರನಕ್ಷತ್ರಾ- ॥
ಕಾಶದಂತೆ ತನುತ್ರಯಾವ
ಸ್ಥಾಸಮೂಹ ಗುಣಂಗಳಿಂ ಸವಿ
ಲಾಸ ವಿಶ್ವಪ್ರಾಜ್ಞ ತೈಜಸ ನಾಮವೆನಿಸದನು ॥ ೪೭ ॥

ಘನಮಯಾಂಶತುಷಾರದೊಳು ತೋ
ರ್ಪ ನಿಮಿತ್ತಾಕಾಶದೊಲು ಮಹ
ದನುಪಮೇಶ್ವರನೇ ವಿರಾಟಪುರುಷನೆ ಕನಕಗರ್ಭಂ ॥
ವಿನಮಿತಾಂತರ್ಯಾಮಿ ಯೆನಿಸಿದ
ನೆನಲು ಚಿತ್ರಾಂಬರವು ಧೌತಂ
*ವಿನುತ ಘಟ್ಟಕಲಾದಿಕಂ ರಂಜಿತ ಮೆನಿಸಿದಂತೆ ॥ ೪೮ ॥

ಧೈರ್ಯನಿಧಿ ಮೊದಲಲ್ಲಿ ಮಾಯಾ
ಕಾರ್ಯ ವಿರಹಿತ ಚಿತ್ತೆನಿಸುವಂ
ಕಾರ್ಯ ಕಾರಣವಾದ ಮಾಯೋಪಾಧಿಯಿಂ ಬಳಿಕ ॥
ಸ್ಥೈರ್ಯ ಪರಿಪೂರ್ಣ ಸ್ವರೂಪಾ
ತುರ್ಯನಂತರ್ಯಾಮಿ ಯೆನಿಪಂ
ಪೂರ್ವಮಾದವ್ಯಕ್ತ ಪಂಚೀಕೃತ ಮಯ ಶರೀರ ॥ ॥ ೪೯ ॥

ಆ ಸಮಷ್ಟಿ ಯುಪಾಧಿಯಿಂದೆ ಮ-
ಹಾಸುಸೂತ್ರಾತ್ಮಕ ನೆನಿಸುವಂ
ಭಾಸುರೋನ್ನತ ಮಾಗಿ ಬಳಿಕಂ ವ್ಯಕ್ತಮಯಮೆನಿಸಿ ॥
ವಾಸಿಯಿಂ ಪಂಚೀಕರಿಸಿದ ವಿ
ಲಾಸ ಭೌತಿಕ ಕಾರ್ಯ ವಿಗ್ರಹ
ದಾ ಸಮಷ್ಟಿಯುಪಾಧಿಯಲ್ಲಿ ವಿರಾಟ್ ಪುರುಷನೆನಿಪಂ ॥ ೫೦ ॥

* ಪಾ- ವಿನುತ ಘಟ್ಟತಲಾಂಛಿತಂ

ಓತವಚ್ಛಿನ್ನಾಂತರಿಕ್ಷನು-
ಯಾತಿಶಯಕೂಟಸ್ಥನೆ ಪರಂ
ಜ್ಯೋತಿ ತುರ್ಯಂ ಪ್ರತ್ಯಗಾತ್ಮಂ ಸಾಕ್ಷಿ ವಿಶ್ವಾದಿ ||
ಚೇತನಾಧಿಷ್ಠಾನನನುಸಂ-
ಧಾತೃವಂತರ್ಯಾಮಿ ಸ್ವಯ ಶ-
ಬ್ದಾರ್ಥ ಪರಮುಂ ತ್ವಂ ಪದ ಸು ಲಕ್ಷ್ಯಾರ್ಥನೆನಿಸಿದನು || ೫೧ ||

ಸುಮರುದಾಕಾಶಾತ್ಮಕ ಬ್ರ
ಹ್ಮಮೆ ಪರಬ್ರಹ್ಮಂ ಪರಾತ್ಮಂ
ವಿಮಳಿನಾಂತರ್ಯಾಮಿ ಮೊದಲಾದೀಶ್ವರ ತ್ರಿವಿಧ ||
ಸಮಧುರಾಧಿಷ್ಠಾತೃ ಸರ್ವೋ-
ತ್ತಮ ವಿಶುದ್ಧಿ ಚಿದದ್ವಯಂಧವ-
ಳಿಮ ಪರಾಪರ ತತ್ವದ ಸುಲಕ್ಷ್ಯಾರ್ಥ ಮೆನಿಸಿತ್ತು || ೫೨ ||

ಚಂದ್ರ ಸೂರ್ಯರೆ ಕುಂಭ ಜಲದೊಳು
ರುಂದ್ರ ಮಾದೊಲು, ದೀಪಮೇ ಘಟ
ರಂಧ್ರದಿಂ ಬಹು ದೀಪ ಮಾದೊಲು, ಮಾರುತನೆ ವಂಶ ||
ರಂಧ್ರದಿಂ ಮಧುರಾದಿ ಬಹು ವಿಧ
ಮಂದ್ರ ಮಾದಂತೊಂದೆ ವೃತ್ತಿಕೆ
ಸಾಂದ್ರನಾಮಸುರೂಪಿನಿಂ ಬಹುಭೇದವಾದಂತೆ || ೫೩ ||

ಸ್ವರ್ಣ ವಾಚಾರಂಭಣವೇ ಸಂ
ಕೀರ್ಣ ಮಾದಂತಾ ಸ್ವರಮೆ ಬಹು
ವರ್ಣ ಮಾದಂತರಿಯೆ ಚಿತ್ತೊಂದರೊಳು ಜೀವಾದಿ ||
ಪೂರ್ಣಸದ್ಬ್ರಹ್ಮಾಂತ ಬಹು ವಿಧ
ನಿರ್ಣಯವ್ಯವಹಾರ ಮಾಯೋ
ದೀರ್ಣ ಕಾರಣಕಾರ್ಯಮಾದುದು ಬಳಿಕ ವಿವರಿಸಲು || ೫೪ ||

ಸೂರ‍್ಯನುದಡೊಳು ಬಿಂಬ ರೂಪಿಂ
ಪೂರ‍್ಯನಾಗಿಯೆ ತಾನೆ ನಾನಾ
* ಕಾರ‍್ಯಯತ್ನದೊಳದನು ತನ್ನೊಡಗೂಡಿ ಕೊಂಬಂತೆ ॥
ಧೈರ‍್ಯನಿಧಿ ಜೀವ ಸ್ವರೂಪಿಂ
ಪೂರ‍್ಯನಾಗಿ ಸಕಲದೊಳನಘಾ-
ಚಾರ‍್ಯ ಬೋಧೆಯೊಳವನ ತನ್ನೊಡಗೂಡಿ ಕೊಳುತಿಹನು ॥ ೫೫ ॥

ಬಹಳ ತರುಗಳನುಳ್ಳುದೊಂದೇ
ಗಹನ ಮೆಂಬಂತಖಿಳಜೀವರೆ
ಮಹಿತ ಮೆನ್ನವರೆಂಬ ಮಮಕಾರಮೆ ಮಹೇಶ್ವರಗೆ ॥
ಗಹನದೊಳಗೊಂದೊಂದ ಕುರುಹಿಡು
ವಹಗೆ ಭಿನ್ನಾಭಿನ್ನ ದೇಹಿಕ
ವಿಹಿತಸೆಂಬಭಿಮಾನಮೇ ಜೀವಂಗರಿಯೆ ಬಳಿಕ ॥ ೫೬ ॥

ಜಲದೊಳಾ ನೇಸರು ಚರಿಸಿ ತೆಂ-
ಬೊಲು ಮುಗಿಲೊಡನೆ ಶಶಿ ಗಮಿಪ ನೆಂ-
ಬೊಲು ಶರೀರದ ಜನನ ಮರಣಗಳಾತ್ಮ ಗೆಂಬಂತೆ ॥
ಲಲಿತ ನಿಸ್ಸಂಗಾ ವಿಕಲ ನಿ-
ಶ್ಚಲಿತಗೀ ಜೀವಾದ್ಯವಸ್ಥೆ ಗ-
ಳೊಲವಿನಿಂ ಸಂಸಾರ ಕಲ್ಪನೆಯಾದು ವರಿವೆನಲು ॥ ೫೭ ॥

ಮಿಗೆ ಜಗದ್ರೂಪಾನ್ಯಥಾ ತೋ
ರ‍್ಕೆಗೆ ಸುಕಾರಣೆಯೆನಿಸಿ ತೋರಿದ
ಜಗದೊಳರಿಯಲು ಶುಕ್ತಿ ರಜತ ವಿಕಾರ ಬುದ್ಧಿಯನು ॥
ಬಗೆಯೆ ಪುಟ್ಟಿಸಿ ಜೀವನರಿವಂ
ತಗಾ ಸಂತತ ವಪುರಹಂ ಕಾ-
ರಿಗೆ ವಿಮೋಹಿನಿ ಯೆನಿಸಿ ಮೋಹಿಸು ತಿರ್ಪಳಾ ಮಾಯೆ ॥ ೫೮ ॥

---

* ಪಾ—ಕಾರ‍್ಯ್ಯತನ್ನೊಳಡಗುತ

ಇಲ್ಲದಿಹ ಮಾಯಾದಿ ಕಲ್ಪನೆ
ಇಲ್ಲ ಮೃತ್ತಿಕೆಯೊಳು ಘಟಾದಿಗ
ಳಿಲ್ಲವೆಯು ಪರಿಯಿಂ ತಿಳಿಯಲಾ ಪ್ರಾಗಭಾವದೊಳು ॥
ಸಲ್ಲಲಿತ ನಿಜ ವಸ್ತುವೇ ಸಹ
ಜೋಲ್ಲಸಮೊಳಾಗುವ ಸಜೀವನ
ನಲ್ಲಿ ಪ್ರಧ್ವಂಸಾದ್ಯ ಭಾವನೆಯಿಲ್ಲ ಪರಿಕಿಪೊಡೆ ॥ ೫೯ ॥

ಅಕ್ಷಯಾನಂದೈಕಬೋಧಾ
ಧ್ಯಕ್ಷ ಪರಿಪೂರ್ಣ ಸ್ವರೂಪಕ
ಸಾಕ್ಷಿಕಂ ಪರಮಾತ್ಮನಪ್ಪುದರಿಂ ನಿರಾಮಯನ ॥
ಲಕ್ಷಣಜ್ಞಾನವನು ಕೆಡಿಸಿ ಪ-
ರೋಕ್ಷನೆಂಬುದ ಮರಸಿ ಪಾತಕಿ
ಸೂಕ್ಷ್ಮಜೀವಾದಿಪ್ರಪಂಚಿನ ರೂಪ ಮಾಡಿದಳು ॥ ೬೦ ॥

ತಿಳಿಯೆ ಮಾಯಾಪಟಲದೊಳು ನಿ-
ರ್ಮಳಪರಾತ್ಮಜ್ಞಾನವನು ತಾಂ
ಮುಳಿದು ಕೆಡಿಪಳು ಮಾಯೆಯೆಂಬುದಸತ್ಯವಂತಿರಲಿ ॥
ಬಳಿಕ ಸಮಸ್ತವಿಧಸುರೂಪೋ
ಜ್ವಳಿತ ಕಾರ್ಯ್ಯಾನಾದಿ ನಿಃ ಕೇ-
ವಳ ಮಲಮೆ ಜೀವರ್ಗೆ ಭೋಕ್ತೃತ್ವವನು ಮಾಡುವುದು ॥ ೬೧ ॥

ಆ ಮಹಾಶಿವನಿಂ ಜನಿತ ಮಾ-
ಯಾಮಯವ್ಯೋಮಾದಿ ವಿಷಯ-
ಸ್ತೋಮಮೊಂದೇ ತೆರದೊಳಿಹ ವೀ ಜೀವ ಮತಿವೃತ್ತಿ ॥
ತಾಮಸ ವಿಕಲ್ಪಿತಗಳಾದಭಿ
ರಾಮ ಸು ಪೃಥಗ್ಭೋಗ್ಯ ರೂಪಮೆ
ಪ್ರೇಮವಿಷಯಂ ದ್ವೇಷವಿಷಯ,ಮುಪೇಕ್ಷೆಯೆನಿಸುವವು ॥ ೬೨ ॥

ಪಾತಕ ಕ್ಷಯಕಾರಿ ಶಿವ ಸಂ-
ಜಾತ ನೂತನ ರತ್ನ ಮಣಿಯೋಂ-
ದೇ ತೆರ ದೊಳಿಹು ದದುವೆ ತನ್ನಂ ಪಡೆದ ಮನುಜಂಗೆ ॥
ಪ್ರೀತಿ ವಿಷಯಂ, ಪಡೆಯದಿಹದು-
ರ್ನೀತಗಧಿಕ ದ್ವೇಷ ವಿಷಯಂ,
ಪೂತ ಸುವಿರಕ್ತರಿ ಗುಪೇಕ್ಷಾ ವಿಷಯ ವಾಗಿಹುದು ॥ ೬೩ ॥

ಅಂಗನಾದಿ ಸಮಸ್ತ ವಿಷಯವೆ
ಸಾಂಗ ದಿವ್ಯ ಪ್ರೀತಿ ವಿಷಯಂ
ಸಂಗತ ವ್ಯಾಧ್ಯಾದಿಯೇ ದ್ವೇಷಾನ್ವಿತ ವಿಷಯವು ॥
ತುಂಗವೀಧಿ ತೃಣಾದಿ ವಿಷಯವೆ
ಮಂಗಳೋಪೇಕ್ಷಾ ವಿಷಯವು ಸು-
ರಂಗಮಯವಹ ವಿಷಯವೇ ತ್ರಿವಿಧ ಪ್ರಕಾರಗಳು ॥ ೬೪ ॥

ಸಕಲ ವಿಷಯವೆ ಶಿವ ವಿನಿರ್ಮಿತ-
ದ ಕುಟಿಲೈಕಾ ಕಾರದಿಂದಾ-
ತ್ಮಕವಿನಿರ್ಮಿತಬಹುವಿಧದಿ ನಾ ಬೋಧಿತ ವಿಷಯವೆ ॥
ವಿಕಟಬಾಧಕವಲ್ಲವಾಗಿ
ಪ್ರಕಟ ಗುರುವಿಂ ಮೋಕ್ಷಸಾಧನ
ನಿಕಟವದು ತನ್ನಿಂಬಿಡಲಶಕ್ಯವದ ಹಂಗಿರಲಿ ॥ ೬೫ ॥

ಬಳಿಕ ಜೀವೋದಿತ ಸವಿಷಯಂ
ಗಳ ವುಬಂಧನವಹುದರಿಂ ನಿ-
ರ್ಮಳ ಮುಮುಕ್ಷುಗಳಿಂ ಸದಾ ಬಿಡತಕ್ಕುದಾದೊಡವು ॥
ತಿಳಿಯೆ ಶಾಸ್ತ್ರಾಶಾಸ್ತ್ರವೆರಡಿವ
ರೊಳಗಶಾಸ್ತ್ರೀಯ ಪ್ರಪಂಚುವೆ
ತಳಿತಮಂದಂ ತೀವ್ರಮೆಂದುಭಯ ಸ್ವರೂಪಕವು ॥ ॥ ೬೬ ॥

ಸ್ವ ಮಹಿತ ಬ್ರಹ್ಮಾತ್ಮರ ವಿಚಾ-
ರಮೆ ಸುಶಾಸ್ತ್ರೀಯಮಂ ಮಹಾ ಕಾ
ಳಿಮ ಮನಃ ಕಲ್ಪಿತಾವರಕರ್ಮಾದಿಕಮೆ ಮಂದಂ ||
ಭ್ರಮಿತ ಕಾಮ ಕ್ರೋಧ ಮೋಹಾ
ದ್ಯಮಿತ ವಿಷಯಮೆ ಮಂದಮೆಂದ ನಿ-
ಗಮ ವಿವೇಕದೊಳೊಲವಿನಲ್ಲಿ ತ್ರಿವಿಧ ವಿಷಯದೊಳು || ೬೭ ||

ಮೋದ ಶಾಸ್ತ್ರೀಯ ವಿಷಯ ಜ್ಞಾ-
ನಾದಿಸಾಧನದಿಂ ಪರ ಬ್ರ-
ಹ್ಮಾದಿಸಾಕ್ಷಾತ್ಕಾರಮಾದ ಬಳಿಕ್ಕ ಬಿಡಲಹುದು ||
ನೋದಿತೋನ್ನತತೀವ್ರ ಮಂದ ವಿ-
ವಾದಯಾಂಬುಧಿ ವಸ್ತು ನಿಜಮಯ
ವಾದಸಾಕ್ಷಾತ್ಕಾರಕರಿಯಲು ಶತ್ರುವಾಗಿಹವು || ೬೮ ||

ಪ್ರಕಟಿತಾತ್ಮಜ್ಞಾನ ದಭ್ಯಾ-
ಸಕೆ ಮೊದಲೆ ಬಿಡತಕ್ಕುದಲ್ಲ ದೊ-
ಡಕುಟಿಲಾಮಲ ವಸ್ತು ಸಾಕ್ಷಾತ್ಕರಿಸಿದ ಬಳಿಕ್ಕಾ ||
ನಿಕಟ ಮೋಕ್ಷಾನಂದ ಸಿದ್ಧ್ಯ-
ರ್ಥಕೆ ಸದಾ ಬಿಡಲಪ್ಪುದೆಂಬುದೆ
ಸಕಲ ವೇದಾದಿಕ ರಹಸ್ಯಾರ್ಥಂ ವಿಚಾರಿಸಲು || ೬೯ ||

ನುತಚತುರ್ವೇದದೊಳ್ ಪ್ರತಿ ಪಾ-
ದಿತ ಮಹಾ ಪ್ರಜ್ಞಾನ ಬ್ರಹ್ಮೋ-
ದಿತ ಮಹಂ ಬ್ರಹ್ಮಾಸ್ಮಿಮಯ ಮಾತ್ಮಾದಿಕ ಬ್ರಹ್ಮ ||
ವಿತತ ತತ್ತ್ವಮ-ಸೀತಿ ವಾಕ್ಯಂ
ಸತತ ಸಿದ್ಧಾರ್ಥ ಪ್ರಬೋಧಾ
ಯತ ಚತುರ್ವಾಕ್ಯದೊಳು ಮುಖ್ಯವು ತತ್ತ್ವಮಸಿಯೆಂಬ || || ೭೦ ||

ವರ ಮಹಾ ವಾಕ್ಯಕ್ಕೆ ತತ್ತ್ವಂ
ಸ್ಫುರದ ಸಿತ್ರಿಪದಾದಿ ಶಿವ ಜೀ
ವರುಚಿರೈಕ್ಯಾರ್ಥ ತ್ರಯಪದ ಪದಾರ್ಥ ವಾಕ್ಯಕ್ಕೆ ॥
ಚಿರ ಸಮಾನಾಧಿಕರಣಾಮಲ-
ತರ ವಿಶೇಷ್ಯ ವಿಶೇಷಣೋನ್ನತ-
ಭರಿತಲಕ್ಷಣಮೆಂಬ ಸಂಬಂಧ ತ್ರಯನಿವರೊಳು ॥ ೭೧ ॥

ತತ್ತ್ವನಿಪ ಪದಾರ್ಥಕಂ ವಾ-
ಕ್ಯಾರ್ಥ ಲಕ್ಷ್ಯಾರ್ಥಂಗಳೆಂದೆಂ
ಬರ್ಥ ವೆರಡಿವರೊಳು ಶರೀರ ಸಮಷ್ಟಿ ರೂಪಾದ ॥
ಉತ್ತಮ ವಿರಾಟ್ ಪುರುಷ ಚೇತನ
ವೆತ್ತ ಭಾವ ಹಿರಣ್ಯ ಗರ್ಭೋ
ದಾತ್ತ ಪರಮೇಶ್ವರರುಮಾ ಸದ್‌ಬ್ರಹ್ಮನುಮ ನೊಲಿದು ॥ ೭೨ ॥

ಕಾದಯುಃ ಪಿಂಡದ ವೊಲೇಕರ
ಸೋದಯಾತ್ಮಕಮಾಗಿ ತಿಳಿಯುಲ
ಭೇದ ಭಾವಿತ ತತ್ಪದಕೆ ವಾಕ್ಯಾರ್ಥ ಮುಖ್ಯಾರ್ಥಂ ॥
ಐದ ಲಭಿಧಾನಾರ್ಥ ಮಹುದಾ
ಮೋದ ದೇಹತ್ರಯ ಸಮಷ್ಟಿಕ
ರಾದ ವಿಶ್ವಾದಿಗಳನುಂ ಕೂಟಸ್ಥನನು ಮೊಲಿದು ॥ ೭೩ ॥

ಕಾದಯುಃ ಪಿಂಡದ ವೊಲೇಕರ
ಸೋದಯಾತ್ಮಕಮಾಗಿ ತಿಳಿಯುಲ-
ಭೇದಭಾವತ್ವಂ ಪದಕೆ ವ್ಯಾಕ್ಯಾರ್ಥ ಮುಖ್ಯಾರ್ಥಂ ॥
ಐದಲಭಿಧಾನಾರ್ಥ ಮಹುದಾ
ಮೋದಿತ ವಿರಾಡಾದಿಗಳನು ವಿ-
ಭೇದಿಸಿದ ನಿರುಪಾಧಿಕ ಬ್ರಹ್ಮಮೆ ವಿಚಾರಿಸಲು ॥ ೭೪ ॥

ತತ್ಪದಕೆ ಲಕ್ಷ್ಯಾರ್ಥ ಶೋಧಿತ
ತತ್ಪದಾರ್ಥ ಮೆನಿಪ್ಪುದರಿಯಲ
ಸತ್ಫಲಿತ ವಿಶ್ವಾದಿಗಳ ಜೇರ್ಪಡಿಸಿ ನಿರುಪಾಧಿ ॥
ಚಿತ್ಪರೈಕ್ಯ ಪ್ರತ್ಯಗಾತ್ಮನೆ
ಸತ್ಪರಿತ್ವಂ ಪದಕೆ ವಿಮಲೋ
ದ್ಯತ್ಪರಮ ಲಕ್ಷ್ಯಾರ್ಥ ಶೋಧಿತತ್ವಂ ಪದಾರ್ಥಮಯ ॥ ೭೫ ॥

ಮಿಸುಗುವಜಹಲ್ಲಕ್ಷಣಾದಿ ವಿ-
ಲಸಿತ ಲಕ್ಷಣದೊಳು ವಿಚಾರಿಸ
ಲೆಸೆವ ಗಂಗಾಯಾಂ ಸಘೋಷೋವಸತಿ ಕುಂತ: ಪ್ರ- ॥
ವಿಶತಿ ಸೋಯಂ ದೇವದತ್ತಃ
ಕುಶಲ ರೂಪೋದಾಹೃತಿ ತ್ರಯ
ಮೊಸೆದಿವಂ ಕ್ರಮದಿಂದುದಾಹರಿಸುವುದು ಮುದವಲರಿ ॥ ೭೬ ॥

ಗಂಗೆಯೆಂಬುದೆ ನದಿಯ ರೂಪೋ
ತ್ತುಂಗ ನಿಜ ಮುಖ್ಯಾರ್ಥಮುಳಿದು ಕ
ಡಂಗಿ ಘೋಷಮದೆಂಬ ಗೊಲ್ಲರ ಪಳ್ಳಿಗನ್ವಯವು ॥
ಸಂಗಿಸದೆ ತೀರವನು ಪೇಳ್ವುದ
ಹಂಗೆ ಕುಂತಮೆ ನಿಜಮಯಾರ್ಥವ
ಪಿಂಗದವಿರತಕುಂತಧರ ಪುರುಷನನು ಲಕ್ಷಿಪುದು ॥ ೭೭ ॥

ಲೀಲೆಯಿಂ ಸಃಶಬ್ದ ಭೂತ ಸು
ಕಾಲ,ದೇಶ,ವಯೋವಿಶಿಷ್ಟಾ
ಲೋಲ ಮಯನಹ ದೇವದತ್ತನ ಪೇಳ್ವುದಯಮೆಂಬ ॥
ಮೂಲಶಬ್ದಮೆ ವರ್ತಮಾನ ಸು-
ಕಾಲ ದೇಶ ವಯೋವಿಶಿಷ್ಟ ವಿ-
ಶಾಲಮತಿಯಹ ದೇವದತ್ತನ ಪೇಳ್ವುದಿಂತುಭಯ ॥ ೭೮ ॥

ಅರ್ಥದಲ್ಲಿ ವಿರುದ್ಧಮುಳ್ಳ ಪ-
ದಾರ್ಥ ಕ್ಯೈಕ್ಯತೆ ಘಟಿಸದಿರಲು ಪ-
ದಾರ್ಥಯುಗ್ಮವಿರುದ್ಧ ಧರ್ಮಾಂಶವನು ನೆರೆ ಬಿಟ್ಟು ॥
ಸ್ವಾರ್ಥಮಾದವಿರುದ್ಧ ಧರ್ಮಾಂ
ಶಾರ್ಥರೂಪಹ ದೇವದತ್ತ ಸ-
ದರ್ಥ ಮಾತ್ರ ಸ್ವೀಕರಿಸಲವನೆ ಇವನಿವನವಂ ॥ ೭೯ ॥

ಎಂದು ತಾದಾತ್ಮ್ಯಂ ಘಟಿಪುದನು
ಬಂಧ ತತ್ತ್ವ-ಮಸೀತಿ ವಾಕ್ಯ ದೊ-
ಳೊಂದೆ ವಿಮಲಜಹದಜ ಹಲ್ಲಕ್ಷಣೆ-ಯದೆಂದನುವಿಂ ॥
ಹೆಂದದಧಿಕತರಾರ್ಥ ಲಕ್ಷಣೆ
ಯೆಂದು ಭಾಗ ತ್ಯಾಗ ಲಕ್ಷಣೆ
ಯೆಂದು ಪರ್ಯಾಯದೊಳುದಾಹೃತಿ ಯೋಗ್ಯಮಾಗಿಹುದು ॥ ೮೦ ॥

ತತ್ತೆನಿಪ್ಪ ಪದಾರ್ಥಮೀ ವಾ-
ಚ್ಯಾರ್ಥ ಸರ್ವಜ್ಞಾದಿಸುಗುಣಾ-
ಯತ್ತ ಶಿಷ್ಟ ಪರೋಕ್ಷ ಪರಮೇಶ್ವರನ ಪೇಳುವುದು ॥
ಉತ್ತಮತ್ವಂ ಪದಮೆ ಸದ್ವಾ-
ಚ್ಯಾರ್ಥ ಕಿಂಚಿಜ್ಞಾದಿದುರ್ಗುಣ-
ಯುಕ್ತನಪ್ಪಪರೋಕ್ಷ ಜೀವನ ಪೇಳ್ವುದಿಂತುಭಯ ॥ ೮೧ ॥

ಅರ್ಥದಲ್ಲಿ ವಿರುದ್ಧ ಮುಳ್ಳ ಪ-
ದಾರ್ಥಕ್ಯೈಕ್ಯವೆ ಘಟಿಸದಿರಲು ಪ-
ದಾರ್ಥಯುಗ್ಮ ಪರೋಕ್ಷಮ ಪರೋಕ್ಷಾದಿಕ ವಿರುದ್ಧ
ಸ್ವಾರ್ಥ ಧರ್ಮಾಂಶವನು ಬಿಟ್ಟು ಸ-
ದರ್ಥ ನಿರ್ಮಲ ಚೇತನ ಸುಲ-
ಕ್ಷ್ಯಾರ್ಥ ಬ್ರಹ್ಮ ಪ್ರತ್ಯಗಾತ್ಮರ ಸ್ವೀಕರಿಸಲಾಗಿ ॥ ೮೨ ॥

ವೇದಿಸು ವೊಡದೆ ಇದಿದದೆಂದಾ
ಮೋದ ತಾದಾತ್ಮ್ಯಂ ಘಟಿಪುದು ವಿ-
ನೋದದಸಿಪದಮುಭಯ ಲಕ್ಷ್ಯಾರ್ಥಂಗಳಲ್ಲಿರ್ಪ ॥
ಭೇದ ಸುಪರೋಕ್ಷಾಪರೋಕ್ಷ
ತ್ವಾದಿಮಾಯಾಕಲ್ಪಿತಮದೆಂ
ದೋದಿಸುತ್ತಮ ಸಫಲಮಹುದಿಂತಾಗಲನವರತ ॥ ೮೩ ॥

ಅಸದೃಶಾಖಂಡೈಕಬೋಧಾ
ರಸ ಮಹೋದಯ ಸಿದ್ಧ ಮಹುದೆಂ
ದುಸಿರಲಿದು ವಾಕ್ಯಾರ್ಥಮುಭಯೈಕ್ಯತ್ವ ಮೆಂತೆನಲು ॥
ಪೊಸ ಘಟಾದಿಯುಪಾಧಿಯಳಿದಾ-
ಗಸವ ನೊಂದೇ ರಾಮಚಂದ್ರನ
ಮುಸುಪ ಮನುಜತ್ವವ ಬಿಡಿಸಿ ಸೀ ವಿಷ್ಣುನೆಂಬಂತೆ ॥ ೮೪ ॥

ಪಿಡಿದ ಕರ್ಣನ ವ್ಯಾಧ ಭಾವವ
ಬಿಡಿಸಿ ಕುಂತಿಯ ತನಯನೆಂಬಲಿ
ಕೊಡನೆ ದಶಮ ಪುರುಷನ ಮರಣದ ಶೋಕ ಬಾಧೆಯನು ॥
ಬಿಡಿಸಿ ನೀನೇ ದಶಮ ನಿಜಮೆಂ
ಬೊಡದು ನಿಜ ಪ್ರಜ್ಞೆಯಲ್ಲದೆ
ನುಡಿಯೊಳರಿದಾದೊಂದೆ ಪೂವಿಗೆ ಸಗ್ಗಮೆಂಬಂತೆ ॥ ೮೫ ॥

ಎಸೆವ ಮೋಕ್ಷಾಪೇಕ್ಷೆಯಂ ಪು-
ಟ್ಟಿಸುವ ದರ್ಥ ವಿವಾದ ಮೆಂದಾ
ಯಸದ ಮನುಜನ ನಿಂದ್ರನೆಂಬೊಲು ಸ್ತೋತ್ರ ಪತಮೆಂದು ॥
ಮಿಸುಗುವಗ್ನಿರ್ಮಾಣ ವಕ ನೆಂ
ದುಸಿರೆ ಗುಣ ಸಾದೃಶ್ಯಮೆಂದು
ಬ್ಬದೊಳಾಳರಸೆಂಬೊಲೋಂ ಪರಿ ಚಾರಕಮದೆಂದು ॥ ೮೬ ॥

ಪ್ರಣುತ ನೀಲೋತ್ಪಲಮುಡೆಂಬೊಲು
ಗುಣ ಗುಣಿತ್ವಮದಿಂದು ಬಿಂಬಾ
ಗಣಿತ ಪ್ರತಿ ಬಿಂಬೋದಕಕಣಗಳಿಗೇಕ ಮೆಂಬಂತೆ ‖
ಪ್ರಣಯದಿಂದಂಶಾಂಶಿಕಮುದೆಂ
ದಣಿಯರಂ ಭೇದವನು ಕಲ್ಪಿಸಿ
ಎಣಿಸಿ ನಿರವಿಸಲಿದುವೆ ವೇದ ವಿರುದ್ಧಮಾಗಿಹುದು ‖ ೮೭ ‖

ಸಂತತ ಸಮಸ್ತ ಪ್ರಪಂಚಿ ಗ-
ನಂತ ಮಿಥ್ಯವ ಪೇಳುತಿಹ ವೇ
ದಾಂತ ಪಕ್ಷದೊಳುದಿತ ನಿಗಮ ವಿಚಾರದಿಂ ಮುಕ್ತಿ ‖
ಎಂತಹುದೆನಲ್ ಸ್ವಪ್ನವನಿತಾ
ಭ್ರಾಂತಿ ರತಿಯಿಂ ಸತ್ಯಮಯ ವೀ
ರ್ಯಂತಳರ್ದಂತಸಘ ಮೋಕ್ಷಂ ಸಿದ್ಧಿಯಹುದರಿಯೆ ‖ ೮೮ ‖

ಈ ಮಹಾ ಮೋಕ್ಷಕ್ಕೆ ಕಂಟಕ
ವಾ ಮಹಾ ನಿಜವಲ್ಲ ನಾನೆಂ
ಬಾ ಮರವೆ ನಿಜವಹುದೊ ಅಲ್ಲವೊ ಎಂಬ ಸಂಶಯವು ‖
ಆ ಮಹಿತ ಮಹ ವಾದೊಡಂ ನಾ
ನೀ ಮೊದಲಮಲ ಜೀವ ಭಾವದ
ತಾಮಸ ವಿದೇಕಿರ್ಪುದೆಂಬ ಕನಿಷ್ಠ ವಿಪರೀತಂ ‖ ೮೯ ‖

ಭಾಸುರ ಶ್ರವಣ ಮನನ ನಿಧಿ
ಧ್ಯಾಸನಂಗಳೆ ವಿಘ್ನರಿಪುಗಳ
ಪಾಶ ಸೂತಕಗಳೊಳು ದೃಢಮತಿಯಪ್ಪುದೆಂತಂತೆ ‖
ಆ ಸು ಸೂಕ್ಷ್ಮ ವಿಚಾರದೊಳು ಜೀ
ವೇಶ-ರುಭಯೈಕ್ಯವನು ಪೇಳ್ವ ವಿ-
ಶೇಷದುಪನಿಷದರ್ಥ ತಾತ್ಪರ್ಯ ಸ್ವರೂಪವನು ‖ ೯೦ ‖

ಅವಧರಿಸಿ ಕೇಳುವುದೆ ನಿಹಿತ
ಶ್ರವಣ ಮೀ ತತ್ವಾತ್ಮ ಶ್ರುತ್ಯನು
ಭವವನತಿ ಯುಕ್ತಿಯೊಳು ಚಿಂತನೆಗೆಯ್ವುದೇ ಮನನಂ ||
ಶ್ರವಣ ಮನನ ಯುಗಂಗಳಿಂದನು
ಭವದೊಳಾ ಚಿತ್ತಮೆ ವಿ ನಿಶ್ಚಲ
ವಿವರಮಾಗಿರ್ಪುದೆ ನಿಧಿ ಧ್ಯಾಸನ ಮಹಾತ್ಮೆಯದು || ೯೧ ||

ಶ್ರವಣ ಜನಿತ ಜ್ಞಾನದಿಂ ನಿಜ
ವಿವರ ಸಾಕ್ಷಾತ್ಕಾರ ಮಹುದರಿ
ನವಿಕಲ ಶ್ರವಣಮೇ ಪ್ರಮುಖಮಾ ಗಂಗಿಯೆನಿಸುವುದು ||
ಅವಿರಳಿತ ಮನನಾದಿಗಳೆ ತಾಂ
ಶ್ರವಣಕನು ಸಹಕಾರಿಯಹುದರಿ
ನವಿರತಂ ಮುಖ್ಯಂಗಳಲ್ಲಂಗಾಂಗ ಮೆನಿಸುವವು || ೯೨ ||

ಘನ ಮಹಾರ್ಥ ಪ್ರಭೆಯ ದೀಸದ
ಮಿನುಗಿನಾ ಚಂಚಲದವಸ್ಥೆಯೊ-
ಳನಘ ಕಾರ್ಯ ಸಮರ್ಥತೆಗಳಿಲ್ಲಾಗಿ ಸಂಚಲಕೆ ||
ಮನನಮೇ ಮತಿಗಟ್ಟಿವಾ ತೆರೆ-
ಯನು ನಿಧಿ ಧ್ಯಾಸನಮೆ ವರ್ತಿಯ
ನನುವಿನೇರಲ್ ನೂಂಕಿ ಪಟುವಂ ಮಾಡುವಂದದೊಳು || ೯೩ ||

ಪೂರಿತೋಪ ಕ್ರಮಮು ಮುಪಸಂ-
ಹಾರ ಮಭ್ಯಾಸಮುಮ ಪೂರ್ವತೆ
ಚಾರು ಸುಫಲ ಮುಮರ್ಥವಾದಂ ವಿಲಸದುಪಪತ್ತಿ ||
ಸಾರ ಷಡ್ವಿಧ ಲಿಂಗ ತಾತ್ಪ
ರ್ಯಾರತಂ ಶ್ರವಣಕ್ಕೆ ಬಳಿಕಿವ
ಕಾರಮಾಕರ ಸೃಷ್ಟಿಗಿಂ ಮೊದಲೀ ಜಗನ್ನಿಕರಂ || ೯೪ ||

ಅಗಣಿತ ಬ್ರಹ್ಮೈಕ್ಯ ಮೆಂದಾ
ಸ್ವಗತ ಮುಖ್ಯಮ ನುಳಿದು ಬ್ರಹ್ಮಕೆ
ಮಿಗೆ ಯಖಂಡೈಕ್ಯತೆಯ ಪೇಳ್ವುದುಪಕ್ರಮಂ ಬಳಿಕ ||
ಜಗವ ನಿಜದೊಳುಲಯಿಸಿ ಕೂಟ-
ಸ್ಥಗೆ ಸನಿಜದೊಡನೆ ಕಡೆಯೂ ಪೊ-
ರ್ದ್ದಗೆಯನೊಲಿದುಂ ನಿರವಿಪುದು ಸಂಹಾರಮೆನಿಸುವುದಃ || ೯೫ ||

ಪೂತ ಪರಮಾತ್ಮಕ ನಖಂಡೈ
ಕಾತಿಶಯ ಸಬ್ರಹ್ಮ ಮಯನೆಂ
ದೋತು ಬಿಡದಡಿಗಡಿಗುಸಿರಲಭ್ಯಾಸವನುಪಮಿತ ||
ಆತುಮಂಗಪ್ಪ ಪ್ರಮಾಣಾ-
ತೀತ ಸಂವಿನ್ಮಾತ್ರ ಸುಗುಣ ಸ-
ಮೇತ ತನವನು ನಿರವಿಸಲಪೂರ್ವತೆ ವಿಚಾರಿಸಲು || ೯೬ ||

ವಿಳಸದಲಘುತರಾತ್ಮ ನೊರ್ವ್ವಂ
ತಿಳಿಯಪಡಲಾ ಗಖಿಳನೆಲ್ಲಂ
ತಿಳಿಯ ಪಟ್ಟಹುವೆಂದು ಬೋಧಿಸುವುದೆ ಮಹಾಫಲವು ||
ಬಳಿಕ ವಸ್ತುಗೆ ಪಂಚ ಕೃತ್ಯ
ಜ್ವಲಿತ ಕರ್ತೃತ್ವವನು ಪೇಳ್ವುದ-
ಮಳ ಮಹಿತ ಭೂತಾರ್ಥವಾದಂ ಮತ್ತರಿಯಲಾಗಿ || ೯೭ ||

ಘಟಕೆ ಮೃತ್ತಿಕೆ ತಂತುವಿಗೆ ಮ-
ರ್ಕಟಕನೇ ಬಿತ್ತೆಂಬೊಲು ಜಗ-
ನ್ನಟನಕಾ ಬ್ರಹ್ಮವೆ ಸುಕಾರಣ ಮೆಂಬುದುಪ ಪತ್ತಿ ||
ಚಟುಲಯುಕ್ತ್ಯನು ಮಾನತರ್ಕೋ-
ತ್ಕಟವೆ ಮನನ ಸಹಾಯುಗಳು ತಿಳಿ
ಪಟುತರಾತ್ಮರನೇಕರೆನೆ ಸಾಂಖ್ಯಾದಿ ಮತಗಳೊಳು || ೯೮ ||

ಸಾಕು ಸಕಲಾತ್ಮರ್ಗೆ ತಾಂ ಪ್ರ-
ತ್ಯೇಕ ದೇಹಂಗಳೊಳು ಸಂಗಂ
ಬೇಕಹುದರಿಂ ದೀತ ಗೀತಸು ಭೋಗ ಸಾಧನವು ॥
ಏಕಿದನ್ಯರ್ಗಾಗದೆಂದು ವಿ-
ವೇಕ ಭೋಗ ಸ್ಥಿತಿಯ ಪೇಳ್ವುದು
ನೂಕದೆತ್ತಾ *ಸೀತನಾ ಸುಕೃತಂಗಳಿಂ ಬಳಿಕ ॥ ೯೯ ॥

ಗಳಿಸ ಪಟ್ಟ ಶರೀರ ವೀತಂ
ಗುಳಿದವರ್ಗಲ್ಲೆನೆಸಸುಕೃತಂ
ಗಳು ಸಮಸ್ತಗಿಲ್ಲವೆ ಎನಿತ ನಾಂ ಪೂರ್ವ ॥
ಬೆಳಿತವಪುರಭಿಮಾನದಿಂ ಮಾ-
ರ್ದಳಿದ ಸುಕೃತ ಮದಿವಸ ದೇಹಂ
ಉಳಿದ ಪೂರ್ವತನುವಿನೊಳಿರ್ಪಾತ್ಮರ್ಗದೇ ನಿಲ್ಲಂ ॥ ೧೦೦ ॥

ವಿವರಿಸುವೊಡಿಂತಖಿಳ ಸಾಂಕ-
ರ್ಯವ ನವ ಸ್ಥಾ ದೂಷಣೆಯ ನಳಿ
ಸುವೊಡ ಶಕ್ಯಂ ಸಕಲ ಜೀವರನಾದಿಯುಹರಾಗಿ ॥
ಪ್ರವಿಮಲ ತತ್‌ತ್ರಿಕಾತ್ಮ ಪಕ್ಷದೊ-
ಳವಿಚಲಿತ ಭೋಗ ಸ್ಥಿತಿಯೆ ಸಂ
ಭವಿಸದೆಂದು ವಿಚಾರಿಸಿಯೆ ನಾನಾತ್ಮ ಪಕ್ಷವನು ॥ ೧೦೧ ॥

ಗೆಲ್ಲದಿಂದಾಶ್ರಯಿಸಿ ದೊಡಮು-
ಲ್ಲಲ್ಲಿ ಭೋಗಾವಸ್ಥೆ ಘಟಿಸಲು
ಮಿಲ್ಲವಾಗಿಂತುಭಯ ಮತದೊಳು ತಿಳಿಯಲೀ ಸಂಜೆ ॥
ಸಲ್ಲಲಿತ ಸಮವೆಂದೊಡಾಗಲಿ
ಯಲ್ಲದಿರಲೇಕಾತ್ಮ ಪಕ್ಷದೊ
ಳಿಲ್ಲಿ ಬಿಂಬ ಪ್ರತಿವಿಬಿಂಬ ನ್ಯಾಯ ಭಾವದೊಳು ॥ ೧೦೨ ॥

* ಸಾ= ನೇಕಕಾ

ಮತ್ತ-ಮಾನಿಗಮೋಕ್ತಿಯಲ್ಲಿ ನಿ-
ಮಿತ್ತ ಭಾವಾ ಭಾವ ಬುದ್ಧಿಯು
ದಾತ್ತ ಕರಣೋಪಾಧಿ ಬಹು ವಿಧಕಂಪ ಕಾಲುಷ್ಯ ||
ಮತ್ತ ನಾನಾತ್ವದ ದೆಸೆಯೊಳಮು-
ಲೋತ್ತರೋತ್ತರ ರೂಪಮಾದ ವಿ-
ಚಿತ್ರ ಭೋಗ ಸ್ಥಿತಿ ಸುಲಭಮೆಂಬುದೆ ಮಹಾಯುಕ್ತಿ || ೧೦೩ ||

ಇದು ಸುಖಾಸುಭವ ಪ್ರಕರಣೋ
ದ್ಗದಿತ ಮಾಗನುಮಾನ ತರ್ಕಮೆ
ಮುದವಿಮಿಶ್ರಾಚಾರ್ಯರಿಂ ಬಹುಖಂಡನಾದಿಯೊಳು ||
ವಿದಿತ ಮಪ್ಪುದರಿಂದಿವರೊಳಾಂ
ಪದವು ಘನವಹ ವೆಂಬ ಭೀತಿಗೆ
ಹುದುಗಿ ಪ್ರತಿಪಾದಿಸಲು *ಪಥವಿಲ್ಲಾಗಿ ತಿಳಿ ಬಳಿಕ || ೧೦೪ ||

ಅನಘ ಮಂತ್ರ ಸ್ಪರ್ಶನ ಮಹತ್ವ
ವಿನಯ ಭಾವಾ ಭಾವ ಪಂಚಕ
ವನು ನಿಧಿ ಧ್ಯಾಸನದ ಯೋಗ ಮಿವರೊಳು ಪ್ರಣವಾದಿ ||
ಮನುವಿನನುಸಂಧಾನದಿಂ ಪರ-
ಮನೊಳು ಸುಮನೋಲಯಮಹುದೆ ಮಂ
ತ್ರನುತ ಯೋಗಂ ಬಳಿಕ ತದ್ಯೋಗವೆ ಸಹಿತಮಾಗಿ || ೧೦೫ ||

ಸುತ ಮನಃ ಪವನಂಗಳೊಂದಾ
ಗಿತರ ಮೂಲಾಧಾರದಿಂ ನಿ-
ಶ್ಚಿತ ಸುಷುಮ್ನಾಧ್ವದೊಳು ಪೋಗಿ ಮಹಾಶಿರೋಮಧ್ಯ ||
ನತಪರಾತ್ಮಕ ತೇಜದೊಳು ಶಾ
ಶ್ವತ ಮನೋಲಯ ಮಹುದೆ ಸ್ಪರ್ಶನ
ವಿತತ ಯೋಗಂ ಸ್ವರ್ಗಮೆ ಶಿರಂ ದೆಸೆಗಳೇ ಶ್ರೋತ್ರಂ || ೧೦೬ ||

* ಪಾ— ಪಡಲಿಲ್ಲಾಗಿ

ಸ್ಫುರದನಲ ಮುಖ ಗಗನ ನಾಭಿ
ಸ್ಥಿರಸುಭೂಮಿಯೆ ಪಾದ ಮಾದೀ
ಶ್ವರ ವಿರಾಡ್ರೂಪವನು ನೆನೆಯಲದಪರಿಮಿತ ಭುಜ ॥
ಸುರುಚಿರಾಸ್ತ್ರಾಭರಣ ಸಹಿತೀ
ಶ್ವರನ ಮೂರ್ತಿಯ ನೆನೆದು ಬಳಿಕದ
ರುರುವಪುರವಯವ ದೊಳೊಂದೊಂದ ಕಳೆ ಬಳಿಕ ॥ ೧೦೭ ॥

ಕಳೆವಪುರವಯವ ಸುಮಂತ್ರೋ
ಜ್ವಳಿತ ಮಹದೊಳು ಮನವು ಲಯಿಪುದ
ಮಳಿನ-ಭಾವಂ ಕರಣ ಗೋಚರ ಮಲ್ಲದಾ ಪೂರ್ಣ ॥
ವಿಳಸ ದನುಪ ಮಿತಾ ಪ್ರಮಾಣಾ
ಚಳಿತ ಸಚ್ಚಿತ್ ಸೌಖ್ಯ ಮಯಕೇ-
ವಳದೊಳು ಮನೋಲಯಮು ನೈದಲಭಾಪಯೋಗವಲಾ ॥ ೧೦೮ ॥

ಬಳಿಕ ಜಗದುದಯ ಸ್ಥಿತಿ ಲಯಂ
ಗಳೊಳರಿ ವರಿದೆ ನರಿಯೆ ನೆಂಬಾ
ಗಳು ಮೊಲಿದು ತನಗಾವ ಕೊರತೆ ಗಳಿಲ್ಲದನವರತ ॥
ತಿಳಿಯಲೊಂದೇ ಪ್ರಕಾರಮಾಗಿ
ರ್ಪ್ಪಳುಮೆಯ ನಿಜಾನಂದಮಯ ಮಹ-
ದೊಳು ಮನೋಲಯ ಮಪ್ಪದೆ ಮಹಾ ಯೋಗವೆಲೆಮನವೆ ॥ ೧೦೯ ॥

ಅಕ್ಷಯಾ ಖಂಡೈಕ ಬೋಧಾ
ಅಕ್ಷರಾತ್ಮಕನಾದಮಯ ನಿ
ರ್ಲಕ್ಷ್ಯ ಚಿನ್ಮಾತ್ರಾನು ಸಂಧಾನ ಕ್ಷಮಾ ಭರಿತ ॥
ಲಕ್ಷಣಾಂಕಿತ ಭಾವ ತತ್ವ ವಿ-
ಚಕ್ಷಣಾಮಲ ಮೂರ್ತಿ ವಿಷಯ ವಿ-
ಪಕ್ಷ ಪಾವನ ಚರಿತ ದೇವಾಧ್ಯಕ್ಷ ಜಯ ಜಯತು ॥ ೧೧೦ ॥

ಇದು ಸಮಸ್ತ ಶಿವಾನು ಭಾವರ
ಪದ ಪಯೋರುಹ ಗಂಧ ಮದ ಷಟ್
ಪದನು ಷಟ್‌ಸ್ಥಲ ಸಾರ್ವಭೌಮಂ ಚೆನ್ನವೃಷಭೇಂದ್ರಂ ||

ವಿದಿತವಾಗಿ ನಿರೂಪಿಸಿದ ಸ-
ಮ್ಮುದ ಮಹಾಕ್ಷೇತ್ರಜ್ಞ ಸುಮನೋ
ವಾದದೊಳು ಸತ್‌ಪಿಂಡ ಮತಿಗೆ ಚತುರ್ಥಕ ಸ್ಥಲವು ||

ಇತಿ ಕ್ಷೇತ್ರಜ್ಞ ಸುಮನೋವಾದೇ ಪಿಂಡಜ್ಞಾನ ವಿವರಣಂ
ಚತುರ್ಥ ಪ್ರಕರಣಂ ||

ಅಂತು ಸ್ಥಲ ನಾಲ್ಕಕ್ಕಂ ಪದ ೩೦೭ ಕ್ಕ·(೧೯೭+೧೧೦)
ಸಮಾಪ್ತಂ ಮಂಗಳ ಮಹಾ ಶ್ರೀ....ಶ್ರೀ....ಶ್ರೀ.

——

ಶ್ರೀ ಗುರು ಬಸವಲಿಂಗಾಯ ನಮಃ

# ಐದನೆಯ ಸಂಧಿ

## ಸಂಸಾರ ಸಂಬಂಧ ಸ್ಥಲ

ಅರಿವು ಮರವೆಗಳಲ್ಲಿ ವಾಸನೆ
ನಿರುಗೆಯದರಿಂ ಕುಟಿಲ ಸಂಸ್ಕೃತಿ
ಯೆರಕ ಮದರಿಂ ಜನನ ಮರಣಗಳೆಂದ ದೇಶಿಕನು ॥ ಪಲ್ಲವ ॥

ಕೇಳು ಶರಣ ಗಣಾನುಭವವಂ
ತೂಳ್ದು ಮರವರಿವುಗಳ ಹವಣಂ
ಸೀಳ್ದು ಸಂಸಾರಾದ್ರಿಯಂ ಸಲೆ ತಾಳ್ದು ನಿಜದರಿವಂ ॥
ಪೋಳ್ದು ತೆರೆಯಂ ನಾಮರೂಪಕ
ವಾಳ್ದು ಪರಮಾನಂದವಾರ್ಧಿಯೊ
ಳೇಳ್ದು ನಿತ್ಯಂ ಬಾಳ್ದು ಶರಣರು ಕೇಳ್ದು ಸುಖಿಸುವುದು ॥ ೧ ॥

ಸ್ಥೀತಸದಸದ್ವಸ್ತು ಸುವಿವೇ
ಕಾತಿಶಯಮಂ ತಿಳಿದೊಡೇನಾ
ಜ್ಯೋತಿಯಂ ತಮವಿಂಬುಗೊಂಡೊಲು ಪೂರ್ಣ ಗಣಿತಕ್ಕೆ ॥
ಓತು ಮತ್ತೊಂದೆಂಬವೊಲು ಕಪ-
ಟಾತುರ ಪ್ರಾರಬ್ಧವಳಿಯದೆ
ಭೌತಿಕಾನ್ವಿತ ದೇಹಿಯಾಗಿರಲೇಂ ಪ್ರಯೋಜನವು ॥ ೨ ॥

ಓಕರಿಸುತುಂ- ಬಾತನಂತ ವಿ
ವೇಕ ಸಂಸಾರಾದಿ ಮಾಯೆಯೆ
ಶೋಕ ಮೋಹೋತ್ಪತ್ತಿ ಕಾರಣ ಮಿಥ್ಯೆಯೆಂದರಿದು ॥
ನ್ನೂಕಿ ನಿಜವುಹ ದರಿವ ನರಿಯದ
ನೇಕ ಬೆರಗಿಂ ದನುಭವಿಸು ತು-
ದ್ರೇಕ ವೃತ್ತಿಯೊಳೊಲಿದಳಲು ತಿರಲೇಂ ಪ್ರಯೋಜನವು ॥ ೩ ॥

ಕೇಳು ರಿಪುವುಂದಿರದ ಚರುಗದ
ಕೂಳು ಸೊಗಸುವೆ ಕಿಸುಕುಳದ ಸ-
ಮ್ಮೇಳ ತನುವಿನ ಭೋಗವಿದು ನೆರೆದುಂಡೆಲೆಯೊಳುಳಿದ ॥
ಕೂಳನಾರಿಗೆ ಯೋಗ್ಯವೆನ ಬಹು
ದೋಳಿಯಿಂ ದೊಳಗೊಂದು ಪೊರಗೊಂ-
ದಾಳಿಯಾಗಿ ಚಲಿಸದೆ ನಿಜಪದವನುಭವಿಸು ಮನವೆ ॥ ೪ ॥

ಪರಮ ಪಾವನ ಚರಿತ ಸುಕಳೇ
ವರದೊಳರಿವಾಚಾರ ಮುಚ್ಚೊ-
ತ್ತಿರಲು ನಾನಾವಲ್ಲಿ ಚರಿಸಿದೊಡೇನು ಬೇಲಿಯನು ॥
ವಿರಚಿಪರೆ ಗುಲ್ಮಕ್ಕೆ ಸರೂಪ
ಕೆರಡಿದಕೆ ಶಿವನರ್ಧ ನಾರೀ
ಶ್ವರ ವಿಭೇದವನರಿದು ನೋಡಲ್ ಕೊರತೆ ಇಲ್ಲದರಿಂ ॥ ೫ ॥

ಅರ್ಧವಾಗಿ ಭವಾನಿಗವಯುವ
ವರ್ಧನ ಸ್ಥಿತ್ಯಾಚರಣೆ ಬೇ
ರಿರ್ದಪುದೆ ಮಾನಸವೆ ನಿಶ್ಚಲವಾಗಲದು ಮೋಕ್ಷಂ ॥
ಪೊರ್ದಿ ತನು ತಾನೇಸುದಿನತನ
ಕಿರ್ದೊಡೇಂ ಕಟ್ಟನೊಳು ಮನಮುಂ
ಸಾರ್ದ ಸಂಚಲದಿಂದೆ ಸಂಸಾರಾನುಬಂಧನವು ॥ ೬ ॥

ಬಂಧ ಮೋಕ್ಷೋಭಯವು ಮಾನಸ
ದಂಥ ಲಕ್ಷಣದೊಳಾಗುತಿಹವು
ಗಂಧರಸರೂಪಾದಿ ದುರ್ವಿಷಯಾಭಿ ಗಮನವನು ‖
ಬಂಧುರ ಜ್ಞಾನಾನುಭಾವ ಧು-
ರಂಧರ ದೊಳಾ ಮಹದ ನಿಜ ಸುಖ
ಸಿಂಧು ಮಧ್ಯದೊಳೊಲಿದು ಲಯಿಸಲು ನೀನೆ ನಿಜ ಮನವೆ ‖ ೭ ‖

ಮಂದ ಮತಿ ಕೇಳೆಲವೊ ನೀಂ ಸಲೆ
ಪಿಂದೆ ಸುಖಿಸಿದ ಸುಖದ ಸವಿಗಳು
ಬಂದು ಬಂದಳ್ಳಿರಿದು ಹೃದಯದ ವಾಸನಾ ಬಲದಿಂ ‖
ಬಂದಿಸುತ್ತಡಿಗಡಿಗೆ ಚಿಂತೆಯ
ನೊಂದು ನಿಜಮಂ ತಿಳಿಯಲೀಯದೆ
ದಂದುಗದ ಬರು ಹೇರು ಬೆನ್ನಂ ಬಿಡದೆ ತಾಳಿಹವು ‖ ೮ ‖

ಅರಿತಕಿಂ ಕಾರಣದ ಶ್ರವಣದಿ
*ನರಿದಹಂಕಾರೋತ್ತ ರೋಭಯ
ಬೆರಕೆಯಂ ಬೇರ್ಪಡಿಸಿ ರೂಪಕ ಮಾದ ಬಳಿಕಿಲ್ಲಾ ‖ 2
ನೆರೆಯಹಂಕೃತಿ ಯಳಿದು ಸಂಸೃತಿ
3 ಗಿರದೆ ಸಾಕ್ಷಿಕನಾದ ಕಾರ್ಯ ದೊ-
ಳರಿಯೆ ನಿಜವಾನೆಂಬ ಬುದ್ಧಿಯೊಳುಂಟೆ ಸುವಿಷಯವು ‖ ೯ ‖

ಪಿಂಗಿಸಿದೊಡೇ ನೀಗಳೀ ಜನ
ಸಂಗರತ್ಯಭಿಮಾನ ಚಪಲತೆ
ಭಂಗುರಾಶೆ ಕುತರ್ಕ ವಿಷಯಾಸಕ್ತಿ ಯುಂಟಾಗಿ ‖
ಪಿಂಗದೆನಿತಾ ಶ್ರವಣದಿಂ ತ-
ತ್ಪಂಗಳಾದಿ ವಿಚಾರಗೆಯ್ವುತ್ತಿ
ರಂಗ ವಿಕೃತಿಗಳಡಗ ವಿದರಿಂ ಸಂಸೃತಿಯದುಂಟೆ ‖ ೧೦ ‖

---

* ಪಾ— ೧ ನರಿದಹಂಕಾರಾತ್ಮರುಭಯದ ೨ ಲ್ಲಿ ೩ ಗು ೪ ಸ

ವಿರತಿಯಿಂ ವನಿತಾದಿ ವಿಷಯ ದೊ
ಳಿರದ ನಿತ್ಯತ್ವಾದಿ ದೋಷ ಮ
ನರರೆ ಕಂಡಾವ ಪ್ರಕಾರ ದೊಳಾದಂ ಬಿಟ್ಟು ॥
ಮರಳಿ ವಿಷಯಕ್ಕೆರಗದಿರ್ದ
ಸ್ಥಿರ ಮಖಿಳ ಸಂಪದಗಳೆಂಬು
ತ್ತರ ಶ್ರುತಿ ಶ್ರವಣಂಗಳಿಂ ಸಂಸೃತಿ ವಿನಾಶನವು ॥ ೧೧ ॥

ಇದನಳಿದೊಡೇನಾಯ್ತು ಕೇಳಿಂ
ದೊದಗಿ ಜನ್ಮಾಂತರವ ನಿತ್ತ
ಲ್ಲದೆ ಮಹಾ ಪ್ರಾರಬ್ಧ ಮಳಿಯದು ಬ್ರಹ್ಮಲೋಕೇಚ್ಛಾ ॥
ವಿದಿತ ದೋಷದ್ವಯ ದೊಳಿರ್ದಾ
ತುದಿಯ ಶ್ರುತ್ಯನುಭವವ ನರಿದಿರ-
ಲಿದಕೆ ನಿಜಮೇಂ ದೃಷ್ಟವಹುದೇ ಭ್ರಾಂತು ಮಾನಸನೆ ॥ ೧೨ ॥

ಯಮಮೆ ಮುಖ್ಯಾಷ್ಟಾಂಗ ಯೋಗ
ಕ್ರಮದೆ ಚಿತ್ತವನಂತ ರಂಗ ದೊ
ಳಮಿತ ಮೇಕಾಗ್ರದೊಳು ಮಡಗಿಯೆ ಬಾಹ್ಯ ಕರ್ಮಕ್ಕೆ ॥
ಮಮಕರಿಸದೆ ಸುಷುಪ್ತನೆಂತಂ
ತಮಮ ಬಹುವಿಧ ಕಾರ್ಯವಿಸ್ಮೃತಿ
ಸಮತೆಯುಪರತಿಯಲ್ಲಿ ವಾಸನೆನಾಶಮಾಗಿಹುದು ॥ ೧೩ ॥

ಏನನೋದಿದೊಡೇನ ಕೇಳಿದೊ
ಡೇನ ಹೇಳಿದೊಡೇನು ಮಾಯಾ
ಧೀನವಾಪ್ರಾರಬ್ಧ ವಾಸನೆ ಬೆನ್ನ ಬಿಡದನಕ ॥
ಹೀನ ಮತಿ ಕೇಳ್ಮನವೆ ಸಮ್ಯಕ್
ಜ್ಞಾನಿಯಪ್ಪಿನೆಗಂ ವಿಚಾರಿಸಿ
ನೂನದುಃ ಪ್ರಾರಬ್ಧ ವಾಸನೆ ಯಿಲ್ಲವೆಂದರಿಯಾ ॥ ೧೪ ॥

ಎಂತು ನಾನಿಲ್ಲೆಂಬೆನಿದನು ಮ-
ಹಂತ ಕೇಳಾ ಸುಪ್ತ ಬಾಲಕ
ನಂತೆ ಮೆಲ್ಲನೆ ಸಂಧಿಪುದರಿಂ ನಿರಭಿ ಮಾನತೆಯಿಂ ॥
ಸಂತತಂ ಘಟಮಾಗಿಯುಂ- ಚ
ಕ್ರಂ,ತಿರುಗು ವೋಲ್ ವಾಸನಾ ಬಲ
ದಿಂ ತನುವಿನೊಳ್ ಬಾಳುತಿರಲಿಲ್ಲೆಂಬು ದೆಂತಹುದು ॥ ೧೫ ॥

ಸರನಿಯಲ್ಲಿಯ ಸರ್ಪ ಭಾಸಂ
ಸರಿದೊಡಂ ತತ್ಕಾರ್ಯ ಭಯವೇ
ಸ್ಥಿರ ವಹಂತರಿವಿಂದೆ ಮರವೆಯೆ ಕೆಟ್ಟೊಡಂ ಮಾಯಾ ॥
ಕರಣ ದೇಹ ಸ್ಥಿತಿಗಳುಂಟಾ
ಗಿರಲಿಯದೆಂತು ಬಿಡದಲಾ ಕೇಳ್
ಮರುಳೆ ಕೇಡಿನ ಮೇಲೆ ಕೇಡುಂಟೆ ವಿಚಾರಿಸಲು ॥ ೧೬ ॥

ಸರ್ಪ ಭಾಸಂ ಸರವಿಯಲ್ಲಿಯೆ
ತೋರ್ಪುದಳಿ ದಾಕ್ಷಣದೊಳಿನಸಿಂ
ಕರ್ಪು ಕೆಡುವಂತರಿವಿನಿಂದಜ್ಞಾನಕಾರ್ಯಾಂಗ ॥
ದರ್ಪವಳಿಯದೆ ಮರವೆ ವಾಸನೆ
ಯರ್ಪಿತದಿ ನಳಿದಿಲ್ಲವೆಯದಾ-
ಗಿರ್ಪ ಮರವೆಯು ಕೂಡೆ ನಷ್ಟಮದಹುದು ನೋಡಯ್ಯಾ ॥ ೧೭ ॥

ಆ ಸುರದೊಳಂತಾ ದೊಡವಕೇಂ
ಲೇಸು ಜೀವನ್ಮುಕ್ತಿ ಸಿದ್ಧಿಸ-
ಲೋಸುಗಂ ಪ್ರಾರಬ್ಧ ಸದ್ಭಾವಗಳ ನಜ್ಞಾನ ॥
ಲೇಸನಂಗೀಕರಿಸುವುದರಿಂ-
ದೀ ಶರೀರ ಸ್ಥಿತಿಯು ಮತ್ಯುಪ
ದೇಶ ಮುಂಟಾಗುವುದು ಕಿಂಚಿದವಿದ್ಯೆಯಿಂದೇನು ॥ ೧೮ ॥

ನುತ ಮಹಾ ಜ್ಞಾನಾಗ್ನಿಯೊಳು ಸಂ
ಚಿತವಿದು ಸು ಬುಲ್ಸಂಕಿನೊಲು ಬೆಂ-
ದಿತು ಕರಂ ಪ್ರಾರಬ್ಧ ಕರ್ಮವು ದುಂಡು ತೀರಿತ್ತು ॥
ಪ್ರತಿ ತನು ಧರಾಗಾಮಿ ಕರ್ಮ
ಸ್ಥಿತಿಗನಧಿಕಾರಿತ್ವ ಮಹುದಾ
ಗಿತರಮತಿಯಿಂ ತಿಳಿಯೆ ಪಲಿಸುತ್ತಿರದ ದಂತಿರಲಿ ॥ ॥ ೧೯ ॥

ಮತ್ತೆ ದೀಪವ ನಂಡಿಸಿದ ಕಿಂ-
ಚಿತ್ತಮವೆ ಬೆಳದೈದಿ ಮನೆಯಂ
ಮುತ್ತಿ ಮುಸುಕಿತಲಾ ವಿಚಾರಿಸಿ ವಾಸನಾಬಲದಿ ॥
ಉತ್ತರ ಪ್ರಾರಬ್ಧ ಕರ್ಮೋ
ದಾತ್ತ ಮೆಂತನುಭವಿಸಿ ತೀರುವು
ದುತ್ತಮ ಶ್ರುತಿ ಕಲ್ಪ ಕೋಟಿ ಶತೈರಪಿ ಎನುತಿರೆ ॥ ॥ ೨೦ ॥

ಲೋಕ ಬುದ್ಧಿಯ ನಳಿದ ಸುಮತ
ರ್ಗೆಕ ದೇಹದೊಳಹುದು ಭಾಗ್ಯಂ
ಲೋಕ ಯಾತ್ರಾರ್ಥಿ ಕೃತರಹ ಮನು ಮುನಿ ಜನಂಗಳ್ಗೆ ॥
ಏಕ ನವ ತನುವಿಂದಮಲ್ಲದೆ
ನೂಕದೊಡೆ ಜ್ಞಾನಕೆತಿರೋಧಾ
ನಾಕಲಿತ ಮಿಲ್ಲೊಂದೆ ದೇಹಂ ನರಗದರಿನಿಲ್ಲ ॥ ೨೧ ॥

ಸಲೆ ಚಿದಗ್ನಿಯೊಳುರಿದ ಕರ್ಮವೆ
ನಲಿದು ತತ್ಪ್ರಾರಬ್ಧ ಭೋಗವ
ನೊಲವಿನೀವುದರಿಂದೆ ಪುಟ್ಟಿಸಲುಳ್ಳುದೆಂದರಿಯೈ ॥
ಎಲೆ ಹುರಿದ ಚಣಕಾದಿ ಬೀಜಂ
ಸಲುವುದಲ್ಲದೆ ಭೋಗ ಮಾತ್ರಕೆ
ನಿಲವಿನಂಕುರ ದುದಯಕೇಂ ಕಾರಣವು ವಿವರಿಸಲು ॥ ೨೨ ॥

ಪಾಪ ಪುಣ್ಯದ್ವಯ ದೊಳನೃತಾ
ಲಾಪ ಸತ್ಯಂಗಳಿನುದಯಿಸಿ ಮ
ಹಾಪುನರ್ ಜನ್ಮಾಂತರ ಪ್ರಾಪ್ತಿಗಳ ನೈದಿಸುವ ॥
ವ್ಯಾಪಕ ಪ್ರಾರಬ್ಧ ಕರ್ಮಾ
ರೋಪಿತಾಗಾಮಿ ದ್ವಯಂಗಳ
ನೇಪರಿಯೊಳಿಲ್ಲೆಂಬೆ ಶ್ರುತ್ಯನುಭಾವ ಮತದಲ್ಲಿ ॥ ೨೩ ॥

ಮೋದ ವಿಷಯಂಗಳಿಗೆ ಮಿಥ್ಯವ
ಸಾಧಿಸುವ ಸುಜ್ಞಾನಕಂ ಭೂ
ತಾದಿ ವಿಷಯಂಗಳೇ ಸತ್ಯವ ಸಾಧಿಸುತ್ತಿರ್ದ್ದ ॥
ಭೇದದಿಂ ಪ್ರಾರಬ್ಧಕಂ ಕರ
ಮಾದುದನ್ಯೋನ್ಯದ ವಿರುದ್ಧಮ
ದಾದು ದುಂಟಾಗಿರಲು ಭೋಗಮದೆಂತು ಫಲಿಸುವುದೂ ॥ ೨೪ ॥

ರಾಗದಿಂ ಸ್ವಪ್ನೇಂದ್ರ ಜಾಲದೊ
ಳಾಗವನಿತಾ ವಿಸ್ಮಯಾದಿಕ
ಭೋಗಮಪ್ಪೊಲ್ಪಿಷಯಕಂ ಪ್ರಾರಬ್ಧಕಂ ಸತ್ಯಂ ॥
ಆಗಬೇಕೆಂದೆಂಬ ಕಟ್ಟೆ
ಲ್ಲಾಗಿ ಭೋಗಜ್ಞಾನ ಮುಭಯ
ಕ್ಕೀಗ ಪಗೆತನಮಿಲ್ಲವವರಿಂದರಿವುದುಂಟಾಗಿ ॥ ೨೫ ॥

ಸೂನದ ಭ್ರಮೆ ಕೆಟ್ಟುದಾಗಳೆ
ತಾನೆ ಶುಕ್ತಿಯ ರಜತ ರೂಪಿಗೆ
ಹಾನಿಯಪ್ಪಂತರಿವಿನಿಂ ಮರವಳಿಯಲಾಕ್ಷಣವೆ ॥
ಸೂನ ವಿಷಯಾದಿಗಳ ತೋರ್ಕೆಗ
ಳೇನು ಮಿಲ್ಲಾಗೆನಗೆ ಪ್ರಾರ-
ಬ್ಧಾನುಭವಮೆಂತಪ್ಪುದೀ ಶಾಸ್ತ್ರಾನುಮತದಲ್ಲಿ ॥ ೨೬ ॥

ಬೋಧಕನೆ ಶುಕ್ತಿಯ ರಜತ ನಿರು-
ಪಾಧಿಕ ಭ್ರಮೆ ತಿಳಿಯಲಾಕ್ಷಣ
ಬೋಧೆಯಹುದಾ ರಜತ ರೂಪಿಗದಂತಿರುತಿರಲಿ ಸೋ- ॥
ಪಾಧಿಕ ಭ್ರಮೆಯಲ್ಲಿಯಂತ
ಲ್ಲೀ ಧರಿತ್ರಿಯ ಕೊಳನ ತಡಿಯೊಳು
ಬೋಧಿತಾನೆಂದಿರಲಧೋ ಮುಖ ರೂಪು ತೋರ್ಪಂತೆ ॥ ೨೭ ॥

ತಿಳಿದು ಪುಸಿಯೆಂದಿರ್ದೊಡಂ ತಲೆ
ಕೆಳಗ ರೂಪದೆ ತೋರ್ಪವೊಲು ಸವಿ
ಕಳೆದ ಹಂಸಂ ಬಂಧ ಜೀವನ ಭಾವನೇ ಮಿಥ್ಯಂ ॥
ಉಳುಮೆಯ ಬ್ರಹ್ಮಾಂಶು ವೆಂದರಿ
ದೊಳಗೆ ಜೀವಾದಿ ಪ್ರಪಂಚುಗ
ಳುಳಿದು ತೋರುತ್ತಿರಲು ವಾಸನೆ ಯಳಿದು ದೆಂತಯ್ಯ ॥ ೨೮ ॥

ಮನವೆ ನಿನ್ನ ಜ್ಞಾನವೋ ಜೀ
ವನಸು ಕೂಡಲ್ಕರಿವು ಮರವೆಗ
ಳಿನಿತು ನಿನ್ನೊಳು ಜ್ಞಾನವಿಲ್ಲಾಗರಿವುದೇ ನೀನು ॥
ಅನುಪಮಾತ್ಮಂ ನಿಜ ಪ್ರಕಾಶ-
ನೆನಲು ಮರವರಿವುಗಳು ಕೇಳಿ
ನ್ನನುವಿನರಿವಿಗೆ ಮರವೆಯಲ್ಲಿಂ ತರಿದು ನಿಶ್ಚಯಿಸು ॥ ೨೯ ॥

ಈ ವಿಚಾರ ಜ್ಞಾನದಿಂ ಮಿ-
ಥ್ಯಾ ವೃತಾಹಂಕಾರ ಮಮಕಾ
ರಾವ ಭಾಸಿತ ಹೀನ ವಿಷಯಾಸಕ್ತಿಯಂ ಕ್ಷಯಿಸಿ ॥
ಕೇವಲಂ ವಿಜ್ಞಪ್ತಿ ಪದದೊಳು
ತೀವಿಯಂತರ್ಬಾಹ್ಯ ಶೂನ್ಯದಿ
ನೋವಿ ರಾಜಿಸುವಲ್ಲಿ ವಾಸನೆ ನಾಶಮಾಗಿಹುದು ॥ ೩೦ ॥

ರಾಗದಿಂ ಸಂಸಾರ ದುಃಖಿತ
ನಾಗಿ ತತ್ತ್ರತ್ಕರ್ಮ ಫಲದಿಂ
ಭೋಗ ಸಾಧನ ವಾದ ಬಿಂದೂ ಪಾಧಿಯಿಂ ಕರ್ಮ ॥
ಯೋಗ ಮಾಯಾ ತತ್ವ ತಾತ್ವಿಕ
ಭಾಗ ಭುವನಾದಿಗಳೊಳಿರುತಿಹ
ಭೋಗಮಂ ತಂದುಣಿಸುವುದರಿಂ ಫಲಿತ ಮಾಗಿಹುದು ॥ ೩೧ ॥

ಕ್ರೂರ ಮಲಪರಿಪಾಕದಿಂ ಸಂ
ಸಾರ ಸಂಹೃತಿ ಕಾರ್ಯ ಗರ್ಭೀ
ಕಾರಕಭಿಮುಖಮಪ್ಪ ಬಿಂದೂಪಾಧಿಯಿಂ ಲಭ್ಯ ॥
ಪೂರ ಪರಿಣಾಮ ಸು ವಿಶೇಷಾ
ಪಾರಕುಪಯೋಗತ್ವಮಾದ ವಿ
ಚಾರದೊಳು ನಿಶ್ಶೇಷಮಾಗಿಯೆ ನಷ್ಟಮಾಗಿಹುದು ॥ ೩೨ ॥

ಕರ್ಮ ಫಲ ಭೋಗಾದಿಯಿಂ ದು-
ಷ್ಕರ್ಮ ನಾನಾ ಯೋನಿಯಂತಳೆ
ದೊರ್ಮೆ ಕಿಂಚಿಜ್ಞತ್ವ ಕಿಂಚಿತ್ಕರ್ತೃವಹ ತನದಿಂ ॥
ದುರ್ಮದಾದಿಕ ಶೋಕ ಮೋಹದಿ
ಮರ್ಮ ದುಷ್ಕಾತಾಪ ಯುತ ಮಲ
ಕರ್ಮ ಪಾಶ ವಿಬದ್ಧ ನಾಗಿಲ್ಲೆಂಬುದೇ ಪರಿಯು ॥ ೩೩ ॥

ಆದಿ ನಿರತಿಶಯಾತ್ಮ ಸಕಲಾ
ಮೋದ ಬಿಂದ್ವಾನಂದಮು ಮನಾ
ಸ್ವಾದನಂ ಗೆಯ್ವಲ್ಲಿ ದುಃಖ ವಿವೇಶ ಮಿಲ್ಲದೆಯೆ ॥
ಭೇದ ಮಾಗದು ನಿರ್ವಿಕಲ್ಪ ವಿ
ನೋದ ತತ್ವಾತೀತ ಸಂಸ್ಫುರ
ಣೋದಯದೊಳಾ ಕರ್ಮಮಲ ಪರಿಪಾಕ ಮಾಗಿಹುದು ॥ ೩೪ ॥

ಜೀವ ಚೈತನ್ಯ ಪ್ರಕಟತೆಯು
ನೋವಿ ಸುಸ್ತಂಭಿಸಿ ಸದಾ ಮಾ
ಯಾ ವಿಕೃತಿ ಬೀಜಾಂಕುರಕೆ ಸಾಧನಗಳಪ ತನದಿಂ ||
ಜೀವರಿಗೆ ಭೋಕ್ತೃತ್ವ-ಮುಮನು-
ದ್ಭಾವಿಸಿ ಪ್ರತ್ಯೇಕ ಜೀವರ-
ನಾವರಿಪ ಸಾಮರ್ಥ್ಯ ಮಲಕೆ ವಿನಾಶ ಮೆಂತಹುದು || ೩೫ ||

ಲೇಪ ದೇಹ ತ್ಯಾಗದಿಂ ಮೋ
ಲಾ ಪುನರ್ ಜನ್ಮಂಗಳಿಲ್ಲದೆ
ಕೂಪ ಗುರು ಶಾಸ್ತ್ರಂಗಳಿಂ ಸ್ವಮತಿಯೊಳು ಮಲಕರ್ಮ ||
ರೂಪ ಸಂಸಾರಾಸು ಸಾರಂ
ಲೋಪ ಮಾಗಿ ಸ್ವಪ್ನ ವಿಷಯಾ
ರೋಪ ವಂತಿಹುದಾಗಿ ಫಲಿಸುತ್ತಿರದು ವಿವರಿಸಲು || ೩೬ ||

ಸಕಲ ಕರ್ಮಾಶ್ರಯಮೆ ಮಾಯೆಯು
ಸಕಲ ಸಂಸ್ಕಾರಾದಿ ಕರ್ಮಂ
ಪ್ರಕಟ ಬುದ್ಧಿಯೊಳಿಹವು ಬುದ್ಧಿ ಪ್ರಳಯ ಕಾಲದೊಳು ||
ವಿಕಟ ಮಾಯೆಯ ಕೂಡೆಯಳಿಯಲು
ನಿಕಟ ತತ್ ಸಂಸ್ಕಾರ ಮಲ್ಲಿ-
ರ್ಪ್ರಕಟ ಕಾಲಾಂತರದ ಮೇಲುರೆ ಪಲ್ಲವಿತವಹುದು || ೩೭ ||

ಕರ್ಮಕಾಶ್ರಯ ಬುದ್ಧಿ ಬುದ್ಧಿ ಸ
ಕರ್ಮಕಾಶ್ರಯ ಮಾಯೆ ಮಾಯಾ
ಧರ್ಮಮಾಗಿಹ ನಾಮರೂಪಂ ಪಳಿವುತದರಲ್ಲಿ ||
ಕೂರ್ಮೆಯಿಂ ಬ್ರಹ್ಮಾಂಶಮುಂ ಬಲಿ
ದೊರ್ಮೆ ಬಾಹ್ಯದ ವಿಷಯ ಕೆರಗದ
ಪೆರ್ಮೆಯರಿವಿನೊಳುಂಟೆ ತತ್ಕರ್ಮಾನು ಸಂಸ್ಕಾರಂ || || ೩೮ ||

ವಾಕ್ಕರಣ ಮಾನಸಗಳಿಂದೊಗೆ
ದುಕ್ಕಿ ಸುಖದುಃಖಾದ್ಯನೇಕ ಗು
ಣಕ್ಕೆ ಬೀಜ ವಿಚಿತ್ರ ಧರ್ಮಾಧರ್ಮ ರೂಪಕದಿಂ ॥
ವೃಕ್ಷ ಬೀಜ ನ್ಯಾಯದಂತ
ಧ್ವಕ್ಕೆ ಮಾಯಾಕಾರ್ಯ ಜನಿಸುವು
ದಕ್ಕೆ ಸಲೆ ಸಹಕಾರಿ ಕರ್ಮಕೆ ನಾಶವೆಂತಹುದು ॥ ೩೯ ॥

ಪ್ರಕಟ ಬಾಹ್ಯೇಂದ್ರಿಯದ ವಿಷಯವೆ
ವಿಕಟ ಮಿಥ್ಯಾ ಮಿಥ್ಯ ಮಳಿದಾ-
ತ್ಮಕನ ಸನ್ಮಾತ್ರಾಸು ಸಂಧಾನದೊಳು ಮಾನಸವು ॥
ನಿಕಟ ನಿಸ್ಸಂಚಲನೆಯಿಂದಿರೆ
ಸಕಲಯೋನಿ ಪ್ರಾಪ್ತಿ ನಿಯಮಾ
ಧಿಕಕೆ ಕಾರಣಕರ್ಮ ಜನಿಸುವುದೇತರಿಂ ಮರುಳೆ ॥ ೪೦ ॥

ಚಕ್ಷುರಾದೀಂದ್ರಿಯವೆ ಬಾಹ್ಯದ
ಪಕ್ಷವನಿತಾದ್ಯಖಿಲ ವಿಷಯವ
ನಾಕ್ಷಣಂ ಪ್ರಭವಿಸಲು ಗುಣದೋಷಂಗಳಂ ಮನವೆ ॥
ಲಕ್ಷಿಸಿ ಪರಾಮರ್ಶನಂ ಗೆ
ಯ್ದೀಕ್ಷಿಸಲ್ಸುಖ ದುಃಖರೂಪಿಂ
ದಕ್ಷ ಬುದ್ಧಿಯೆಯವಧರಿಸುತವರಲ್ಲಿ ಪರಿಣಮಿಸಿ ॥ ೪೧ ॥

ಪಡೆದು ಸಾಕ್ಷಾದ್ಭೋಗ್ಯವೆನಿಸ-
*ಲ್ಕಪು ಕಲೋದ್ವಲಿತಾದಿ ಚೇತನ
§ಸದಮಲಾ ವಿದ್ಯೆಯಂ ತರ್ಕೀ ಕರಣದಿಂ ಕಂಡು ॥
ಮೊದಲಹಂಕೃತಿಯಿಂ ಸುಖಾಸುಖ
ದುದಯನೆಂದ ಧ್ಯಾಸರೂಪಿಂ
ದೊದಗಿ ಭೋಗ್ಯಾತ್ಮಕ ಸುಬುದ್ಧಿಯೆ ಕರ್ಮವೆನಿಸಿಹುದು ॥ ೪೨ ॥

*ಪಾ–ಲ್ಕದ ‡ಪಾ–ಸದಮಲಾತ್ಮಂ ವಿದ್ಯೆಯಂತಃಕರಣದಿಂಕಂಡೂ

ಪರಮ ಚೈತನ್ಯ ಸ್ವರೂಪಂ
ಗಿರದೆ ಮಾಯಾ ಕರ್ಮಮಲ ನಿ
ಷ್ಕರ ಗುಣದ ಸೋಂಕಿಲ್ಲದಿರ್ಪುದರಿಂ ನಿರಂತರಮುಂ ||
ನಿರತಿಶಯ ಸೌಖ್ಯಾನುಭವ ಸಂ
ಸ್ಫುರಣ ಲಕ್ಷಣ ಭೋಗ ಸಾಧನ
ಕರಣಜಾತಮುದುಂಟು ಪ್ರಾರಬ್ಧಾನುಭವಮಿಲ್ಲ || ೪೩ ||

ಭೌತಿಕೇಂದ್ರಿಯ ಪಂಚವಿಷಯ
ವ್ರಾತಮಾಯಾ ಕರ್ಮ ಪಾಶಂ
ನೇತಿ ಪದಗುಣ ಮಳಿದು ಪರಮಾನಂದ ಪದದಲ್ಲಿ ||
ಪಾತ ಕೈಕಮಲ ಸ್ಪರ್ಶಮಿರ್ಪು
ದೋತು ಮಲವಿಂ ಭೋಗಸಾಧನ
ಜಾತ ಮುಂಟಹ ವಿದುವೆ ಪ್ರಾರಬ್ಧಾನುಭವ ಮಯವು || ೪೪ ||

ಈ ನಿಜಾತ್ಮಜ್ಞಾನ ಸೌಖ್ಯಾ
ನೂನ ಪದದೊಳ್ನಿರ್ವಿಕಾರ
ಸ್ವಾನುಭೂತಿ ರಸಾವಗಾಹದಿ ನುಭಯ ಗುಣಮಳಿದು ||
ಆ ನಿವಾತಸ್ಥ ಪ್ರದೀಪದ
ಮಾನದಿಂ ನಿಸ್ಪಂದಮಾಗಿ ಮ
ನೋನು ರಾಗದೊಳಿರ್ಪವಗೆ ಸಂಸ್ಕಾರಮಿಲ್ಲರಿಯೆ || ೪೫ ||

ಭಾವನಾತೀತಾತ್ಮ ತತ್ವಾ
ಭಾವ ತತ್ವಾನಂತರದೊಳು
ಧ್ವನಿಸುವವಾ ಭೋಗ ಸಾಧನ ಜಾತವಾ ತಮ್ಮಿಂ ||
ತಾವೆ ಸಂಸ್ಕಾರಾನು ಬಲದಿಂ
ದಾವಿರುದ್ಧಾರ್ಥಂಗಳಿಲ್ಲದೆ
ಶೀವಿ ಮಾಡುವವಿವೆ ಸುಫಲ ಭೋಕ್ತೃತ್ವವನು ಮುದದಿಂ || ೪೬ ||

ತತ್ವ ತಾತ್ವಿಕ ಭುವನ ಫಲ ಭೊ
ಕ್ತೃತ್ವ ಕಿಂಚಿತ್ಕರ್ತ್ತ ಕಿಂಚಿ
ಜ್ಞತ್ವ ಪಶ್ವಾದಿಕ ಗುಣಂಗಳ ನಳಿದು ಚಿದ್ರೂಪ ||
ತತ್ವ ಶುದ್ಧಾ ಧ್ವಾನುವರ್ತ್ತಿಗೆ
ಸತ್ವ ಸಾಧನ ಭೋಗ ಮುಂಟು ಮ
ಹತ್ವದಿಂ ಪ್ರಾರಬ್ಧನಿಲ್ಲ ಪುರಾತನರ ಮತದಿಂ || ೪೭ ||

ಕ್ಷಣಿಕ ಭೋಕ್ತೃತ್ವವನು ಮಾಳ್ಪವು
ಋಣ ಕೃತಾಕೃತ ಚಿಂತನಾ ಕಾ
ರಣ ವಿಕಲ್ಪಾ ಹಂಕೃತೀಷತ್ ಸ್ವೀಕೃತ ತ್ಯಾಗ ||
ಗುಣ ಸುಖಾಸುಖ ಸಂಶಯಾತ್ಮ
ಕ್ಷಣ ವಿಭಂಗುರ ಕರ್ಮ ಮಲಿನಾ
ವ್ಯಣುಗಳಾ ವಿಚ್ಛಿನ್ನ ಶೇಷಾಮಾತ್ರಮೋ ಬಲಿದು || ೪೮ ||

ಅದು ಮನಸ್ಸಿನ ಕ್ರೂರ ಸಂಶಯ
ಪದ ಭಯಂಕರ ಮೂರ್ತ್ತಿವೆತ್ತ
ಭ್ಯುದಯ ಬಂಧಮೆ ಮೋಕ್ಷ ಕಾರಣಮುಪ್ಪ ಸಂಸಾರ ||
ವಿದಿತ ಸೃಷ್ಟಿಗೆ ತತ್ವತಾತ್ವಿಕ
ಪದ ಫಲಾದಿಗೆ ತಾನೆ ಮುಖ್ಯಾ
ಸ್ಪದ ಮೆನಿಸಿ ಪಿಡಿಕೆಯ್ದು ಸುಖದುಃಖಗಳ ನುಣಿಸುವುದು || ೪೯ ||

ಅಹುದೊ ಅಲ್ಲವೊ ಬೊಮ್ಮನಾನೆಂ
ಬಹಗೆ ಸಂಖ್ಯೆಯೊಳರಿವು ಮರವೆಗ
ಳಹಿತ ಮಾಗಿಯೆ ಬಂದು ಬಂದಡಿಗಡಿಗೆ ಸಂಶಯವ ||
ವಹಿಸಿ ನಿಜಮಂ ತಿಳಿಯಲೀಯದೆ
ಬಹಳ ವಿಪರೀತವನು ಪುಟ್ಟಿಸಿ
ಮಹಿತ ವಿಷಯಾಸಕ್ತನಂ ಮಾಡಿದುದಿದೇಂ ಪೇಳ ೫೦ ||

ಅಕಟ ನಾಂ ಘನ ವೇದ್ಯ ನೀನೇ
ಸಕಲ ವಿಷಯೋಪಾಧಿ ವರ್ತಿಸಿ
ವಿಕರಿಸೀ ಸ್ವಪ್ನಧೊಳು ತೋರುವ ತೋರ್ಕೆ ನೀನಾಗಿ ॥
ವಿಕಟ ರೂಪಿಂ ತೋರುವಾ ತೋ
ರಿಕೆಯ ಮಾಳ್ಪವ ನಾನೆ ಯೆನ್ನೊಳು
ಸಕುಟಲೇಂದ್ರಿಯ ಭೋಗಮುಂಟೆಂದೇಕೆ ಭಾವಿಸುವೆ ॥ ೫೧ ॥

ಬಂದಿವಿಡಿದತಿ ಕಳ್ಳ ನಾನ-
ಲ್ಲೆಂದೊಡಾರ್ಮೆಚ್ಚುವರು ದೇಹದೊ
ಳೊಂದಿ ದೇಹಿಕನಾಗಿ ಲೋಹದ ಸಂಗದಿಂದಗ್ನಿ ॥
ನೊಂದ ಪರಿಯಿಂ ತೋರಣಪ ತಳಿ
ರಂದದಿಂ ಬಳಲುತ್ತೆ ಬಹು ವಿಧ
ಥಿಂದಿಹಾಮುತ್ರೈಕ ಫಲಭೋಗಾನು ಭವವೇಕೆ ॥ ೫೨ ॥

ದೇಹ ವಿಷಯೇಂದ್ರಿಯ ವಿಕಾರಾ
ಮೋಹಕಾರಣ ಭೋಗ ಸಾಧನ
ಸಾಹಸಕೆ ಸಾಕ್ಷಿಕನದೆಂತೆನೆ ಭಾಸ್ಕರ ಪ್ರಭೆಯಿಂ ॥
ವ್ಯೂಹದಂತಾ ದುಃಖಸುಖ ಸಂ
ದೋಹದಿಂ ದುಃಖಿಸಲು ಜೀವ ಸ-
ಮೂಹವಾ ಬಳಲಿಕೆ ಇನಪ್ರಭೆಗೆಂತು ಸಮನಿಪುದು ॥ ೫೩ ॥

ಸತ್ತು ಚಿತ್ತಾನಂದವೇ ಸದ-
ಸತ್ತು ಚಿದ ಚಿತ್ತಧಿಕ ಸುಖದುಃ
ಖೋತ್ತರಾಧಮ ಮಾದುದಾ ಸಂಸ್ಕಾರ ಬಲದಿಂದೆ ॥
ಮತ್ತ ಮಾಯಾ ನಾಮ ರೂಪಿಂ
ತೆತ್ತಿಸಿಹುದಭಿಮಾನ ಮುದರಿಂ
ಪೆತ್ತನಾತಂದೇಹ ಸುಖದುಃಖಾದಿ ವೃತ್ತಿಗಳ ॥ ೫೪ ॥

ಕರ್ಮ ಸಂಸ್ಕಾರಾನುವರ್ತಿಯೆ
ಕರ್ಮ ಮಾಯಾ ರೂಪಮೆಂಬಿವ
ವರ್ಮ ಭೌತಿಕ ದೇಹಮೇಪ್ರಾರಬ್ಧಮೆಂದೆಂಬ ||
ವರ್ಮಹೀನಾ ದ್ವೈತ ಮತಿ ನಿ
ಷ್ಕರ್ಮ ದೈವಾಧೀನ ಮೆಂಬಂ-
ಕೂರ್ಮೆಯಿಂ ಚಿದ್ರೂಪಗೀ ತ್ರಿವಿಧಾನುಭವಮಿಲ್ಲ || || ೫೫ ||

ಕೃತ್ರಿಮನೆ ಪುಸಿಯೆಂದು ತಿಳಿದಿರೆ
ಕೃತ್ರಿಮದ ಪುಲಿಪಾವು ತೋರಲ್
ಮತ್ತಮಂ ಪುಸಿಗಾಣಲರಿಯದೆ ಭೀತಿಗೊಂಬವನ ||
ಚಿತ್ತದೋಲ್ ಪ್ರಾರಬ್ಧ ಕರ್ಮೋ
ದಾತ್ತ ಮಿಥ್ಯಮೆ ಸತ್ಯಮಾಗಿ ನಿ
ರುತ್ತರ ಸ್ವರ್ಶನ ವಿಮರ್ಶನ ಮಾತ್ರದಿಂದಿಹುದು || ೫೬ ||

ಅರ್ಕಗಂ ತಮಕಂ ನಿಜಕ್ಕಂ
ತರ್ಕಕಂ ಸಖಮಾದ ಕಾಲಕೆ
ತೋರ್ಕು ಮಿಥ್ಯಮೆ ಸತ್ಯಮಾಗಿ ಸ್ವಪ್ನದೊಳು ತೋರ್ಪ ||
ತೋರ್ಕೆಯಲ್ಲಿಯೆ ಮಿಥ್ಯಮಾಗಲಿ
ದರ್ಕೆ ಜಾಗ್ರದೊಳುಂಟೆ ನಿನ್ನಯ
ತೋರ್ಕೆಯೆಲ್ಲಂ ಸರ್ವಥಾ ಮಿಥ್ಯಂ ವಿಚಾರಿಸಲು || ೫೭ ||

ನಾಮನಷ್ಟಗೆ ನೀನೆ ನಿಜಮೆಂ
ದಾಮಹಾ ದೃಕ್ಕಿನೊಳು ತಿಳಿವಾ
ಗಾಮನಃ ಕರಣಂಗಳಿವು ಬಹು ಮಿಥ್ಯಮಿದು ತಥ್ಯಂ ||
ತಾಮಸ ಜ್ಞಾನಂಗಳಿವು ಮಾ
ಯಾಮಯಾಂಗಂ ಭಾವಮೆಂದುಂ
ಪ್ರೇಮದಿಂ ಮಿಥ್ಯವನೆ ಕಾಣ್ಬುದಿದೇನು ಕಾರಣವೊ || ೫೮ ||

ಅರಿವ ಬೆಳಗಿಂ ಮರವೆ ಮಾಯೆಯು
*ಕುರುಹಿವೆಂದಿಲ್ಲವೆಯನರಿವುದು
ಮರೆಯುದದು ನಿಜರೂಪಕವ ನರಿವರಿವೆ ತಾನಾಗಿ ॥
ಅರಿವು ಮರವೆಯು ಬೆರಕೆಯಿಲ್ಲೆನ
ಗರಿದುಕೋ ಮನಭಾವ ಕರಣಗ-
ಳರಿಕೆಯಿಂ ಮಹದರಿವಿಗೀ ಸದ್ಭಾವಮೇ ನಿಜವು ॥ ೫೯ ॥

ಕರಣ ಸಂಕುಳ ಜೀವ ಪರಮಾ
ತ್ಮರ ಶರೀರವ್ಯಾಪಿ ವಿಶ್ವೋ-
ತ್ಕರರರಿವು ಮರವೆಗಳ ಭಾವಾಭಾವ ಮಧ್ಯದೊಳು ॥
ಪರಮ ಲಕ್ಷ್ಯಾಲಕ್ಷ್ಯ ರೂಪಿಂ
ದಿರುವ ನಿಜ ಮಹದರಿವ ನಿದನೇ
ಪರಿಯೊಳರಿವುದು ಸಚ್ಚಿದಾನಂದಾತ್ಮ ನಿರವಿಪುದು ॥ ೬೦ ॥

ಪೊರಗಣೇಂದ್ರಿಯ ವಿಷಯ ನಿವಹವ
ನರಿವುದೇನೀಂ ಮನವೆ ನಿನ್ನುವ
ನರಿವುದೇ ಸುಜ್ಞಾನಮಿದ ಲಕ್ಷಿಪುದೆ ಸದ್ಭಾವಂ ॥
ಮರೆಯದೀ ನಿಜದರಿವ ನಿಪರಿಂ
ತೊರೆದು ಬಹಿರಿಂದ್ರಿಯದ ವಿಷಯವ
ನರಿಯೆ ವಾಸನೆಯುಳಿದು ನಿಜಮಾಗಿಹುದದೆಂತೆನಲು ॥ ೬೧ ॥

ಸದು ಘಟಾದಿಕ ವಿಷಯ ಜಾತದೊ
ಳವರೊಳೇ ನೆಂದಾದೊಡಂ ಕೂ
ರ್ತದರ ಮಾಯಾಂಶಂಗಳೆಂಬೀ ನಾಮರೂಪುಗಳ ॥
ಕೆದರಿಯುವರೊಳಗಸ್ತಿ ಭಾತ್ರಿಯ
ಮುದಯ ಸಚ್ಚಿತ್ಸುಖಮನಳವಡಿ
ಸಿಮೊಡೆ ಬಳಿಕಾ ಬ್ರಹ್ಮಮೇ ಪರಿಪೂರ್ಣ ಮಾಗಿಹುದು ॥ ೬೨ ॥

---
*ಪಾ—ಕುರೂಪಹು

ಘೋರಭವ ಸಂಹಾರ ಶಿವ ಸಂ
ಸ್ಕಾರ ಪುಣ್ಯಶರೀರ ನಿಗಮಾ
ಧಾರ ವಾಕ್ಯಾಪಾರ ಮಾಯಾ ಭೂರುಹ ಕುಠಾರ ॥ *
ಕ್ರೂರ ವಿಷಯ ವಿದೂರ ಪರಮಾ
ಚಾರ ಸಂಪದ ಸಾರ ಗುಣಮಣಿ
ಹಾರ ನಿಜ ಗಂಭೀರ ತತ್ವವಿಚಾರ ಜಯಜಯತು ॥ ೬೩ ॥

ಇದು ಸಮಸ್ತ ಶಿವಾನುಭಾವರ
ಪದ ಪಯೋರುಹ ಗಂಧ ಮದ ಷ-
ಟ್ಪದನು ಷಟ್‌ಸ್ಥಲ ಸಾರ್ವಭೌಮಂ ಚೆನ್ನವೃಷಭೇಂದ್ರಂ ॥
ವಿದಿತವಾಗಿ ನಿರೂಪಿಸಿದ ಸ-
ಮ್ಮದ ಮಹಾಕ್ಷೇತ್ರಜ್ಞ ಸುಮನೋ
ವಾದದೊಳು ಸಂಸಾರಯೋಗಕೆ ಪಂಚಮಸ್ಥಲವು ॥

ಇತಿ ಕ್ಷೇತ್ರಜ್ಞ ಸುಮನೋವಾದೇ ಸಂಸಾರ ಸಂಬಂಧ ವಿವರಣಂ ಪಂಚಮ ಪ್ರಕರಣಂ. ಅಂತು ಸ್ಥಲ ವೈದಕ್ಕಂ ಪದನು ೩೭೦ಕ್ಕಂ (೩೦೭+೬೩) ಸಮಾಪ್ತಂ ಮಂಗಳ ಮಹಾ ಶ್ರೀ. ಶ್ರೀ. ಶ್ರೀ.

*ಪಾ–ಕುಲಾಲ

ಶ್ರೀಗುರು ಬಸವಲಿಂಗಾಯನಮಃ

# ಆರನೆಯ ಸಂಧಿ

## ಸಂಸಾರ ಹೇಯಸ್ಥಲಂ

ಅರಿವಿನಿಂ ದುರ್ವಾಸನೆಯನಳಿ
ದರಿದು ದುಃಸಂಸಾರ ಮಾಯೆಯ
ತೊರೆದು ನಿಜಸುಖ ಮಿರ್ಪುದೆಂದನು ದೇಶಿಕೋತ್ತಮನು ॥ ಪಲ್ಲವಂ ॥

ಇಹ ಪರಂಪರ ವಿಹವ ಕಾಂಕ್ಷಾ
ರಹಿತರನುಭವ ಸಿದ್ಧರಾಗಮ
ಸುಹಿತ ಚರಿತರನಾದಿ ಮುಕ್ತರು ನಿತ್ಯತೃಪ್ತಿಯನೆ ॥
ವಹಿಸಿದನುಪಮ ಲಿಂಗಸಂಗಿಗ-
ಳಹಿತ ಸಂಸಾರಾದಿ ಮಾಯಾ
ಪ್ರಹರ ಕಾರಣ ಮಹಿಮರಾಲಿಪುದೀ ಸುಬೋಧೆಯನು ॥ ೧ ॥

ಚಿತ್ತಿನಂತಃ ಪುರದೊಳನಿಶಂ
ಸತ್ತು ಪೂರ್ಣ ಬ್ರಹ್ಮದೊಡನೆ ನಿ
ರುತ್ತರಾನಂದದೊಳು ರಮಿಸಿಯೆ ನಿತ್ಯ ಸುಖವೈದಿ ॥
ಇತ್ತ ಮಾಯಾ ನಾಮ ರೂಪಿನ
ಸತ್ತು ವಹ ಬಾಹ್ಯೇಂದ್ರಿಯೋತ್ಕರ
ಮತ್ತ ವಿಷಯಾನಂದದೊಳು ಮರೆದೊರಗದಿರು ಮನವೆ ॥ ೨ ॥

ಅಭ್ರದಚ್ಛಾಯಾಧ್ವ ವಿಡಿದು ಮ
ಹಾಭ್ರಮೊಳಗಿಪ ಪುರವ ಸಾಧಿಸಿ
ವಿಭ್ರಮಿಸಿತಪ್ರಾಜ ಸತಿಯುಂ ರಮಿಪುದೇಪರಿಯಿಂ ॥
ಶುಭ್ರಮತಿ ಕೇಳಿಹೆ ಪರಾದ್ಯಖಿ
ಳ ಭ್ರಮೆಯು ನಳಿಯದೆ ಮಹೋದಯ
ಬಿಭ್ರದಮಲ ಜ್ಞಾನಸಿಧಿಯೊಳು ಕೂಟವೆಂತಹುದು ॥ ೩ ॥

ಸ್ವಚ್ಛಮತಿ ಮಾನಸವೆ ಕೇಳಿಸ
ಗಿಚ್ಛೆಯಿಲ್ಲದೆ ಬರಿಯುರಿವಿನಿಂ
ತುಚ್ಛತನುವಾನಲ್ಲ ವೆಂಪತಿಗಳೆದಖಿಂಡೈಕ ॥
ಸಚ್ಛಮಿತ ವಿಷಯ ಪ್ರಪಂಚಾ
ದ್ಯಚ್ಛ ಮೋಕ್ಷಾಂಗನೆಯು ಕೂಟಕೆ
ಇಚ್ಛೆಯಿಚ್ಛಾಶಕ್ತಿಯೇ ಸಖಿಯುಹಳಲಾ ತಿಳಿಯೆ ॥ ೪ ॥

ತನುವೆ ನೀನಲ್ಲೆನಲು ನಿನಗಂ
ತನುಗೆ ಭೇದಮದೇನಿಹುದು ನಿ
ನ್ನನಿತು ಭೋಗಾಸಕ್ತಿ ಕೆಡದಿರ್ಪ ನೆಗಮೀತನುವೆ ॥
ನಿನಗೆ ನೇಮಿಸಿರಲ್ತಿಳಿದು ನಿ
ನ್ನನಘ ಮೋಕ್ಷಾದ್ಯಖಿಳ ಸೌಖ್ಯಮ
ನನುಭವಿಪುದೆಂತಂಗ ಮಿಲ್ಲದೆ ಕೇಳದಂತಿರಲಿ ॥ ೫ ॥

ಸ್ಥೂಲವಲ್ಲಿ ಕುರೂಪು ದುರ್ಗಂ
ಧಾಲಯ ವ್ಯಾಧಿಗಳು ಸೂಕ್ಷ್ಮದ
ಮೇಲೆ ಕಾಮಕ್ರೋಧಚಿಂತೆಗಳಧಿಕ ಕಾರಣದಿ ॥
ಕೀಲಿತಾಧಿವ್ಯಾಧಿಗಳಿಗಂ
ಮೂಲವಹ ಸಂಸಾರ ದುಃಖಗ
ಳಾಲಿಸಲು ತ್ರಿವಿಧಾಂಗದಿಂ ಸಂತಾಪ ಪಡಲೇಕೆ ॥ ೬ ॥

ಅಧ್ವ ಮಿಥ್ಯಾರೂಪ ಮಾಯೋ
ದ್ಯದ್ವಪುಗಳಿಂ ಬೇರ್ಪಡಿಸಿದ ಮ
ಹಾದ್ವಿತೀಯ ಪ್ರತ್ಯಗಾತ್ಮ ಜ್ಞಾನದಿಂ ಮೇಲೆ ॥
ಸದ್ವರಣ ಪರಮಾರ್ಥಮಪ್ಪ ಪ-
ದಾಧ್ವಭೋಗ್ಯಂ ಭೋಕ್ತೃವಿಲ್ಲಾ
ಗದ್ವಯಂಗೆನಗಿಲ್ಲದೇಹ ತ್ರಯದ ಸಂತಾಪ ॥ ೭ ॥

ಗಣ್ಯ ರಹಿತಾನಂದ ವಿನುತ ಶ-
ರಣ್ಯ ಮೋಕ್ಷ ಮಯಾನು ಭವವಹ
ಪುಣ್ಯಮೆಂತುಂ ಬರ್ಪುದೋ ಸಂಸಾರ ಬಂಧಮಯ ॥
ಗುಣ್ಯಮೆಂತುಂ ಪೋಪುದೆಂಬೆ ವ-
ರೇಣ್ಯ ಚಿಂತೆಗಳೇತಕೆಲೆ ಕಾ-
ರುಣ್ಯ ಪೂರ್ಣ ಕಟಾಕ್ಷ ನಿರವಿಸಬೇಹುದೆನ್ನಲ್ಲಿ ॥ ೮ ॥

ವಿಭವದಿಂ ಕಾಷ್ಠಾಗ್ನಿಯಂ ತಾ
ಸುಭಯಕರ್ಮ ವ್ಯವಹೃತಿಗಳೊಳು
ಶುಭಗನಿಹೆ ನಿಲ್ಲೆನ್ನೊಳುಭಯಂದಾವವಡಸಿರ್ದ ॥
ಕುಭ್ರುದುರಿಯೊಳು ಜೀವಿಪವೆ ತಾಂ
ಸಭಯ ಮೃಗಪಕ್ಷಿಗಳು ಸುಕೃತ ಗ-
ಳಭಿಮತವ ಸೋಂಕಿಲ್ಲವಾಗಿಯೆ ಚಿಂತೆಯಿಲ್ಲೆನಗೆ ॥ ೯ ॥

ಭೋಗ ಮೋಕ್ಷಾಪೇಕ್ಷಿತಾತ್ಮಕ
ನಾಗಿ ಯಜ್ಞೋಪಾಸನಾ ಶ್ರು
ತ್ಯಾಗಮ ಶ್ರವಣಾನುಭವ ಪರಿಚರಣತಾಸಕ್ತಿ ॥
ಯೋಗದಿನಿಹ ಪರೋಭಯದೊಳನು
ರಾಗದಿಂ ಸಂಚಾರಿಸುತೆ ಬಳಿ-
ಕೀಗಳಿಲ್ಲೆಂದೊಡೆ ವಿವೇಕಿಗಳೆಂತು ಮೆಚ್ಚುವರು ॥ ೧೦ ॥

ಗುಣಿತಗೇಹ ಗವಾಕ್ಷಿಯಲ್ಲಿನ
ಫೃಣಿಯೊಳಿಹ ಪರಮಾಣುಗಳ ಸಂ
ದಣಿ ಮಹಾತೇಜದೊಳು ಕಾಣಿಸದಂತೆ ನಿಜದರಿವಿಂ ॥
ತೃಣಮುಖಾದಿಯ ವಾಂಛೆಯಳಿದಾ
ಕ್ಷಣಮಖಂಡಾನಂದ ಸಿದ್ಧಿಸಿ
ತಣಿಯುತಾಗಿ ಶ್ರವಣಮೇ ಕೃತಪ್ರಾಯಮೆನಿಸಿತ್ತು. ॥ ೧೧ ॥

ವಾಟಯಳಿಯದೆ ಕಾಯನೊಲಬಹು
ದೇಟವಾಳದ ತಸು ಗುಣಂಗಳ
ಕೋಟಲೆಯ ಸಂಸಾರದೊಳು ಬೀಗಿರ್ದ್ದ ಬ್ರಹ್ಮದೊಳು ॥
ಕೂಟವೆಂತಹುದಯ್ಯ ನಿಸಗಿದ
ರಾಟವಡಗದೆ ಬರಿಯ ಮಾತಂ
ಕೋಟಿ ಪರಿಯಿಂ ನುಡಿಯಲದರಿಂ ದೇಂ ಪ್ರಯೋಜನವು ॥ ೧೨ ॥

ಅಮುಮದಂತಿರಲೋರ್ವ್ವ ಪಥಿಕಂ
ಗಮಿಸುತಿರೆ ಕಾರ್ಮುಗಿಲ ಸಿರಿಯೊಳು
ಚಿಮಿಚಿಮಿಸಿ ವಿದ್ಯುಲ್ಲತಾಳಿಗಳುದಿಸಿ ಕಣ್ಗವಿಯೆ ॥
ಕ್ಷಮಿಸಿ ಕಾಣದೆ ಮೋಹದಿಂದಿ
ಗ್ಭ್ರಮಣದಿಂ ಭ್ರಮೆ ಮಿಂಚನೊಳಕೊಂ-
ಡಮಿತ ರಾತ್ರಿಯನರಿದು ಮೆಲ್ಲನೆ ನಡೆವ ನರನಂತೆ ॥ ೧೩ ॥

ಇದು ಮನೋವ್ಯಾಪಾರ ಸಂಶಯ
ದುಪಯಮೀ ಸಂಸೃತಿಯ ಮೋಹರ
ಮಿದಕೆ ಚಂಚಲದರಿವು ಶುಕ್ತಿಯ ರಜತವೆಂದಂತೆ ॥
* 'ಪದವಕಾ'ಣದೆ ಮುಂದ ಗತಿಯಿಂ
ಪದವಿಡಲ್ಕಿಳಿದಾಗ ಮೋಕ್ಷಾ
ಧ್ವದೊಳು ಚರಿಸುವನಿದನು ತಿಳಿಶಿವನೀತಿ ಪದದಲ್ಲಿ ॥ ೧೪ ॥

* ಟಿಪ್ಪಣಿ—ಇದು ಸ್ವಂತಪಾಠ, ಓಲೆಮುರಿದಿದೆ.

ಇದು ನಿಮಿತ್ತಂ ಸಕಲ ಸಂಸೃತಿ
ಪದವಿಯುಳಿದಾನಂದ ಮೋಕ್ಷಾ
ಭ್ಯುದಯ ಕಾರಣನಾಗಿ ಚರಿಪ ಮುಮುಕ್ಷುವೇ ಕೇಳ ॥
ವಿದಿತ ಸಮ್ಯಗ್ ಜ್ಞಾನಮಾರ್ಗಾ
ಸ್ಪದಕೆ ಚಂಚಲದರಿವ ಸಂಗಡ
ದೊದವ ಮಾಡಲು ನಿಜವ ನೆಯ್ದುವ ಭಾವವೆಂತಯ್ಯ ॥ ೧೫ ॥

ಅರಿದು ನೋಡೇನಿಲ್ಲ ನಿಜದಿಂ
ದರಿಯೆ ವಿಶ್ವವಿ ಮಿಥ್ಯಮಾಗಿಹು
ದರಿವಿನಿನ ಸುದಯದೊಳು ಮರವೆಯ ಸಂಸೃತಿಯ ಮಂಜು ॥
ಬರಿದೆ ಮುಸುಕಿರೆ ಸೂರ್ಯಗೇನದು
ಕೊರತೆಯೇನಾ ನನುಪಮನು ಮಹ
ದರಿವು ನಿನ್ನಿಂ ತೋರ್ಪುದೆಲ್ಲವು ಮಿಥ್ಯಮಾಗಿಹುದು ॥ ೧೬ ॥

ಮಾತಿನೊಳು ಬ್ರೊಮ್ಮವನು ಕೊಚ್ಚುತೆ
ನೀತಿಯೊಳಗಥಮತ್ತವಹ ಬರಿ
ಮಾತು ಬಡಿಕಾಪೋಗುತೂತಜ್ಞಾನಿ ಕೆಲಕಾಗು
* ಬೇತು ಪೊಲೆಯರ ಮನೆಯ ಬೋದುಗ
ನೋತು ವಾಲ್ತುಪ್ಪವನು ಬೇಳ್ಪಂ
ತೀ ತನುವಿಕಾರಂಗಳಳಿಯದೆ ತುದಿಯ ಪದ ಮಹುದೇ § ॥ ೧೭ ॥

ಶಿಷ್ಟ ಪುಣ್ಯವಿಪಕ್ಷ ಮೋಕ್ಷಾ-
ಭೀಷ್ಟ ವಿಗತಾ ಜ್ಞಾನಿ ನಿಜಪರಿ-
ತುಷ್ಟಿಯಾತ್ಮ ಬ್ರಹ್ಮರೈಕ್ಯ ವಿಚಾರ ಸಂಸಾರ ॥
ನಷ್ಟ ಸುಸುರೂಪಾಸ್ತಿ ವಸ್ತು
ಶ್ರೇಷ್ಠ ಸಾಕ್ಷಾತ್ಕಾರ ಸರ್ವೋ
ತ್ಕೃಷ್ಟದಿಂ ಬ್ರಹ್ಮಸ್ವರೂಪಾಗಿರ್ಪೆ ನಾನೊಲಿದು ॥ ೧೮ ॥

* ಪಾ—ಬೀತು § ಪಾ—ದು

ಬೊಮ್ಮ ಗಡ ನೀಂ ಬರಿಯ ಮಾತಿನ
ಹೆಮ್ಮೆ ಗಡ ದೇಹಾಕ್ಷವಿಷಯದ
ಸೊಮ್ಮು ಗಡನೀಂ ನಿತ್ಯಗಡ ಜನನಾದಿ ಗಡ ಮಾಯಾ ।
ಹೆಮ್ಮುಗಡ ಸರ್ವಜ್ಞಗಡ ಶು–
ದ್ಧಂಮುದಂ ಗಡ ವಿಕೃತಿಗಡ ತನು
ಸಮ್ಮಗಾರರ ತಿತ್ತಿಗಡ ಬಹು ಚೋದ್ಯಗಡ ಅರಿಯೇ ॥ ೧೯ ॥

ದೃಕ್ಕನಿಡೆ ಸಂಕಲ್ಪ ಭಾವದೊ
ಳಕ್ಕರಿಂದೆಂ*ತೋರ್ಪು ವದನಂ
ತಕ್ಕುಮೆಂದುರೆ ಭಾವಿಸದೆ ಸಂಸಾರದ ವಿಷಯದ ।
ಸೊಕ್ಕು ತಲೆಗೇರಿಯೆ ವಿಕಾರಿಸು
ತುಕ್ಕಿ ತನ್ನಿಜಮಂ ವಿಚಾರಿಸ
ದಕ್ಕಟಕಟಾ ನುಡಿವುದಿದು ತಾಂ ಪಾಪ ಫಲವ್ಮೈಸೆ ॥ ೨೦ ॥

ನಾಶವಾಗುವ ಸಂಸ್ಕೃತಿಯ ಭವ
ಪಾಶಮಯ ಗೃಹಶಾಖೆಯೊಳು ಮನ
ದಾಸೆಯಿಂ ಕಟ್ಟಿರಲು ಸತಿ ಸುತರೆಂಬನಾಯಿಗಳು ।
ಈ ಶರೀರಾಮಿಷವ ವಿಷಯಾ
ವೇಶದಿಂ ಹಸಿಹಸಿದು ಭೋಗಾ
ವೇಶ ಸೌಖ್ಯಾವಧಿಯ ತನಕಿಹವೆಲ್ಲಿಯದು ಸುಖವು ॥ ೨೧ ॥

ಪಾಳಿಯಿಂ ತಾನಿಟ್ಟ ದುರ್ವೇ
ತಾಳ ತನ್ನನೆ ನುಂಗಿದಂತಾ
ಯ್ತೋಳಿಯಿಂ ಮನವೆಂಬ ನೊಣಗಿನ ಬೋಧಿಸಿಯೆ ತಂದು ।
ಕೇಳದಂದಳವೇರಿಸಿದೆ ನೀ
ಜಾಳು ಹಡಿಕೆಯ ಕಂಡು ಪರಿವುದು
ಕಾಳು ಮುನ್ನಿನಗುಣವ ಬಿಡದೆಯೆ ಸಂಚಲಿಪುದದರಿಂ ॥ ೨೨ ॥

---

ಟಿಪ್ಪಣಿ । ಕೆಳಗೆ ಗೆರೆ ಹಾಕಿದ್ದು ಸ್ವಂತ ಪಾಠ, ಓಲೆ ಮುರಿದಿದೆ.
* ತೊಪ್ಪು

ಹೇಸದಿಂದ್ರಿಯವೆಂಬ ಪಾಪಿಯು
ಕೂಸದೇಂ ಮಾಡಿದೊಡೆಯುಂ ಸಂ
ತೈಸದಿದೆ ನಾನೇಸ ಮಾಡಲಿ ಮುದ್ದನೇ ತೋರಿ ।
ಲೇಸುಬುದ್ಧಿಯ ಸುಂಗಿತಮಲವಿ
ಲಾಸಮಿನ್ನೆಲ್ಲಿಯದು ನೋಳ್ಪಡೆ
ಮೀಸಲಂ ಪೊರಗಿರಿಸಿದೊಡೆ ನಾಯ್ಮೂಸಿದಂ ತಾಯ್ತು ॥ ೨೩ ॥

ಕಣ್ಣೊಳಿಹ ಮತ್ಸ್ಯಕ್ಕೆ ಬಲೆಯಂ
ಹಣ್ಣಿಗರುಡನ ಜಿಹ್ವೆಯುರಗಗೆ
ಬಣ್ಣವೇಳಿಗೆ ಇಕ್ಕಿದೊಲು ಮಿಥ್ಯಾತ್ಮಮಾಯಿಕದ ।
ತಿಣ್ಣದೊಡಲೊಳು ಮೃತ್ಯುವಿನ ಬಾಯ್
ಪಣ್ಣೆನಿಸಿ ಕಾಪಟ್ಯ ವಿಷಯಮ
ನಣ್ಣಿಗೊಂಡೇ ಪರಿಯೊಳೈದುವೆ ಮೋಕ್ಷಮಾರ್ಗವನು ॥ ೨೪ ॥

ಪ್ರಣುತ ಪರಮಾನಂದ ಮೂಲಂ
ಗುಣಮೆ ಪಲ್ಲವ ಶ್ರುತಿಯೆಕುಸುಮವ
ಗಣಿತ ತತ್ವಮೆ ಶಾಖೆ ವೇದಾಂತ ಫಳ ನಿಜರಸದಿಂ ।
ತಣಿವ ಮೋಕ್ಷಾಮರಕುಜವ ಸುಳಿ
ಧೊಣಗುಭವತರುವಂ ಕದುರ್ಂಕುವ
ಬಣಗು ಕುಮನೋಧರ್ಮವಿಡಿದಗೆ ಮೋಕ್ಷಮಾದಪುದೆ ॥ ೨೫ ॥

ಪಡೆದು ದಿನಕೊಂದಂದವಹ ದೇ
ಹದೊಳು ಪತ್ತಿಂಗೊಂದು ಪರಿಯಹ
ಮದಡ ಜಡ ಸಂಕಲ್ಪ ಮಾರ್ಗವಿಹಾರಿ ಮನವೆಂದು ।
ಇದು ನಿಮಿತ್ತ ಮನೋವಿಕಾರಾ
ಭ್ಯುದಯ ತನುಧರ್ಮವನು ಪಳಿದಾ
ನೊದಗಿದನುಪಮ ಮುಕ್ತಿಕಾಂತಾ ಯೋಗದಲ್ಲಿಹೆನು ॥ ೨೬ ॥

ಲೋಲ ಸುರಚಾಪಕೆ ತಟಿಲ್ಲತೆ
ಮೇಲು ಸಿಂಜಿನಿ ಕರಕ ವಿಶಿಖವ
ಕೀಲಿಸುತ್ತಾ ಸ್ವಪ್ನ ಪೂರುಷ ಧನುವ ಜೇವಡಿಸಿ ।
ಲೀಲೆಯಿಂದದಪಿಡಿದು ವಿಷಯದ
ಜಾಲವೀಕ್ಷಿಸಿ ಸರಿಯಲೆಚ್ಚು ವಿ
ಶಾಲರಿಪುಗಳ ಜಯಿಸಿ ಸುಖದಿಂದಿರ್ಪನಂತೊಲಿದು ॥ ೨೭ ॥

ದೇಹ ಧರ್ಮಂ ಕೆಡದೆ ಮೋಕ್ಷವ
ನಾಹ ಪಡೆದವರುಂಟೆ ಜಗದೊಳು
ದೇಹದೊಳು ಸಂದೇಹಿಯಾಗಿರುತನ್ನಪಾನಾದಿ ।
ಆಹುತಿಯೆ ಚೈತನ್ಯ ಮಾಗಿ ನಿ
ರೀಹ ಮೋಕ್ಷಾಂಗನೆಯ ನೆಂತು ವಿ
ವಾಹ ವಾಗುವೆ ನೀನೆ ಪೇಳಾಯತ ಮಿವಂ ತಿಳಿಯೆ ॥ ೨೮ ॥

ಮೇಘ ಮಾಚ್ಛಾದಿಸಿದ ರವಿಗಾ
ಮೋಘ ಸಂಗಮದುಂಟೆ ದೇಹದೊ
ಳಾ ಘನಾಗಮ ವೇದ್ಯ ನಿರಲೇಂ ಜ್ಞಾನ ಯೋಗಗಳಿಂ ।
ಈ ಘಟಿತ ಘಟನಾ ಸಮರ್ಥ ಭ
ವೌಘ ಕಾರಣ ಮಾಯೆಯುಂ ಸದೆ
ದೀಘಟಾತ್ಮ ವಿವೇಕದಿಂ ನಿಜ ತೃಪ್ತಿವಡೆದಿಹನು ॥ ೨೯ ॥

ಕಡು ದುರುಳ ಕೇಳ್ಬಂಜೆ ಯಾತ್ಮಜ
ನೊಡೆದಚಾಂಡವ ಕೂರ್ಮ ಕುಂತಳ
ನಿಡಿದೆಳೆದು ಗಗನದೊಳು ಕುಸುಮವ ಕೊಯ್ದುನವ ಶಿರದಿ ।
ಪಡೆದುಕೋಡಂ ಬಿಸಿಲು ದೊರೆಯುಂ
ಕುಡಿದು ಪೂಜ್ಯಂ ಬೆತ್ತನಂತೆಲೆ
ನುಡಿದು ಬಾರದ ಮಾಯೆಯುಂ ಕಳೆದೆಂತು ಸುಖಿಯಪ್ಪೆ ॥ ೩೦ ॥

---

ಟಿಪ್ಪಣಿ—ಕೆಳಗೆ ಗೆರೆ ಹಾಕಿದ್ದು ಸ್ವಂತ ಪಾಠ ಓಲೆ ಮುರಿದಿದೆ

ಶೋಕ ಮೋಹವು ನಿಂಬುಗೊಂಡು
ಪ್ರೇಂಕ ದೇಹೇಂದ್ರಿಯುದ ವಿಷಯು
ಸ್ವೀಕೃತಮೆ ಪರವಾಗಿ ನಿಜಮಂ ಕಾಣದುಳಿದಪ್ಪೆ ।
ಕಾಕುಮತಿಯಜ್ಞಾನ ನಷ್ಟಮೆ
ಭೀಕರಾ ಸಜ್ಜಡಮಯಾ ಸ
ತ್ಯಂಕಲಿತ ಬಹು ಮೂಢ ಮಾಯೆಯ ನಷ್ಟಮೆಂದರಿಯೈ ॥ ೩೧ ॥

ಸನ್ನುತ ಜ್ಞಾನಾತ್ಮಕನೆ ಕೇಳ್
ನಿನ್ನ ಕಿಂಚಿಜ್ಞಾನ ಬಲದಿಂ
ದುನ್ನತಾ ಖಂಡಿತ ಸಮಸ್ತ ನಿರಂಕುಶಮುದಾದ ।
ಚನ್ನೆಯಹ ಸಂಸಾರ ಮಾಯಾ
ಭಿನ್ನ ವಿಕೃತಿಗಳಳಿದು ನಿರುಪಮ
ಸನ್ನಹಿತ ಮಹದೈಕ್ಯ ಸಂಪದವೆಂತು ಸಮನಿಪುದು ॥ ೩೨

ಪೇಳ್ವೆನಾಲಿಸಿ ಕೇಳು ಗಿರಿಯಂ
ಪೋಳ್ವ ಕುಲಿಶಂಕಿರಿಪೆ ಕಾಷ್ಠದೊ
ಳಾಳ್ವನಲನಣು ಮಾತ್ರ ಮಾದೊಡಧಿಕತರೇಂ ಧನಮಂ ।
ಬೇಳ್ವವೊಲು ಸಿದ್ಧಿಗಳ ಸಾರಂ
ತಾಳ್ವುದಲ್ಪಮದಾಗಿ ಲೋಹದ
ಬಾಳ್ವೆ ಘನತರಮಾಗಿ ವೇದಿಸುವಂತೆ ತಿಳಿದಿಹುದು ॥ ೩೩ ॥

ಕಾರ್ಯ ಕಾರಣ ಪುರುಷಕೇಳ್ವುದು
ಕಾರ್ಯಮಲ್ಲವೆ ಕರ್ತೃವಿನಖಿಲ
ಶೌರ್ಯದಿಂದಹುದಲ್ಲದದಕಿಲ್ಲ ಸ್ವತಂತ್ರಗುಣ ।
ಪೂರ್ಯಮಾಯಾ ಕಾರ್ಯನಿಂ ತ
ತ್ಕಾರ್ಯ ಕಾರಣಮಾದ ನಿಸ್ನಯು
ಧೈರ್ಯಮೇ ಸಂಸಾರ ಕಾರಣಮೆಂಬುದೇ ನಿಜವು ॥ ೩೪ ॥

ಕರ್ತೃ ಕರ್ಮಂ ಕರಣ-ಮಯಮಹ
ಕರ್ತೃ ನಿರುಪಮ ಮುಕ್ತಿ ಕಾಂತಾ
ಭರ್ತೃವಾನೇ ಜೀತನಾಥಿಷ್ಯಾತ್ಮ ಸಂಸಾರ ।
ಹರ್ತೃ ಮಾಯಾದ್ಯಖಿಳ ವರಿಯೆ ಕ
ಳರ್ತೃಣೀಕೃತಮಾದ ಕಾರ್ಯಂ
*ಸ್ವತೃಷಾಪಹ ಧೈರ್ಯಮೇ ತತ್ಕಾರ್ಯ ಕಾರಣವು ॥ ೩೫ ॥

ಮೌಲ್ಯ ಮಾಯಾ ಕಾರ್ಯ ತನುವಿಂ
ಬಾಲ್ಯ ಕೌಮಾರ್ಯಾದಿ ಯೌವನ
ತಾಲ್ಯ ವಾರ್ಧಿಕ ವೃತಿಗಳಿಂ ಬಹು ರೂಪುಗಳನಾಂತು ।
ಶಲ್ಯನಾಗಾಚರಿಸುತುಂ ಕಾ-
ಶಲ್ಯದಿಂದಿಲ್ಲೆನಲದಕೆ ಶೈ-
ಥಿಲ್ಯ ದೋಷಂ ಪಿಡಿಯೆ ಕೈಮುಸಿಯಲ್ಲವೇ ಮರುಳೆ ॥ ೩೬ ॥

ಪ್ರಕೃತಿ ಕಾಯಮೆ ಕರ್ಮವಶದಿಂ
ವಿಕೃತಮಾಗಿಹುದಲ್ಲದೇ ನಿಜ
ಸುಕೃತಿ ಮಣಿಗಣ ಸೂತ್ರದಂತೆಯನೇಕ ರೂಪಕನು ।
ವಿಕೃತ ಸತಿ ಘಟದಲ್ಲಿ ನೋಡಿ ಹಿ-
ಮಕೃತು ಸಿಲ್ಕಿದ ನೆನಲು ಸತ್ಯಮೆ
ಸಕೃತು ಶಿವ ಚಿಂತಾತ್ಮ ನೆನಗುಂಟೆಂದೊಡೇ ನಹುದು ॥ ೩೭ ॥

ಕರ್ಮ ವಶದಿಂ ತನುವಿನೊಳು ಭವ
ಕರ್ಮವಿಡಿದಾ ಚರಿಸಿ ತತ್ತತ್
ಕರ್ಮ ಸಂಭವ ಫಲವ ನಿಹಪರದಲ್ಲಿ ಭೋಗಿಸುತೆ ।
ಕರ್ಮಿಯಲ್ಲೆನೆ ಬಾಲ್ಯದೊಳು ನಿಃ
ಕರ್ಮರಿರವೇ ಕಿಂಬುಗೊಳದೀ
ಕರ್ಮಕಾಶ್ರಯ ಮಾಯೆಯಂ ಜಯಿಸಿದೆನೆನಲು ಚೋದ್ಯಂ ॥ ೩೮ ॥

* ಪಾ—ಸ

ಮೂಢ ಮನವೇ ಕೇಳು ಚಂದ್ರಂ
ಗಾಢದಿಂ ಗವಿಸುವ ನೆನಲ್ಕದು
ರೂಢಮೇ ಮುಗಿಲೊಡನೆ ಮಾಯಾ ಕಾರ್ಯ ತನುಗುಣದಿಂ ।
ಪ್ರೌಢನೇಂ ಚರಿಸುವನೆ ಸು ಮಹತ್
ಗೂಢ ಸಂಪದವಲ್ಲಿ ಸತತಾ
ಲೀಢನಾಗೆಳಸುವನೆ ಸಂಸೃತಿ ಶುಷ್ಕ ಪನ್ನವನು ॥ ೩೯ ॥

ಹಮ್ಮಿನಿಂ ದೊಡಹುಟ್ಟಿ ದಕ್ಷಗ
ಳಿಂ ಮದೇಂದ್ರಿಯ ವಿಷಯ ವಾರ್ಧಿಯೊ
ಳಂ ಮುಳುಂಗುತಳುತ್ತೆ ಸುಖದುಃಖಾದಿ-ಗೊಡಲಾಂತು ।
ಸುಮ್ಮನೊಳ ವಾಲ್ಗೊಂಡು ಸಂಸೃತಿ
ಸಮ್ಮುದಕ್ಕರಿವರತು ಬರಿದೇ
ಬೊಮ್ಮ ವಾರ್ತೆಯು ನಾತಲಿದು ಸಂಬಳವೆ ಪೇಳ್ವಿನಗೆ ॥ ೪೦ ॥

ಕರ್ಮ ಕಲ್ಪಿತ ಭಾವದಿಂ ತನು
ಧರ್ಮ ವಿಡಿದದರೊಳು ದಶೇಂದ್ರಿಯ
ಮರ್ಮ ಗುಣದಿಂ ಸಂಚರಿಪ ಸಂಕಲ್ಪ ಭಾವದೊಳು ।
ವರ್ಮದಿಂ ನಿಜದರಿವ ನರಿಯದ
ಕರ್ಮದಿಂ ಸುಖದುಃಖಕುಮನೋ
ಧರ್ಮದಿಂದವೆ ತೋರ್ಪುವಲ್ಲದೆ ತಿಳಿಯಲಿಲ್ಲೆನಗೆ ॥ ೪೧ ॥

ಆಜ್ಞೆಯಿಂದ ಮುನೀಶ್ವರಂ ಕಿಂ
ಚಿಜ್ಞ ಕಿಂಚಿತ್ಕರ್ತೃ ವಿಷಯಾ
ಭಿಜ್ಞ ಪಶ್ಚಾದ್ಯ ಸ್ವತಂತ್ರವಿನಾಶಿ ವಿಶ್ವಾದಿ ।
ಪ್ರಾಜ್ಞ ನಾಮದೊಳಾ ಪುರತ್ರಯ
ಸಂಜ್ಞೆಯೆನಿಸುವವಸ್ಥೆಗಳೊಳು ಮ-
ನೋಜ್ಞ ನೀನಜ್ಞಾನದಿಂದಿರೆ ಸೌಖ್ಯಮೆಲ್ಲಿಯದು ॥ ೪೨ ॥

ನಿಯತ ತನುವಿಗೆ ನಾಶ ಬುದ್ಧೀಂ
ದ್ರಿಯಕೆ ಕಿಂಚಿಜ್ಞತ್ವ ಕರ್ಮೇಂ
ದ್ರಿಯಕೆ ಪರತಂತ್ರತ್ವ ಕಿಂಚಿತ್ಕರ್ತೃವಹ ತನವೆ ।
ಕಾಯ ಕರಣಂಗಳಿಗೆ ವಿಷಯಾ
ದಿಯೊಳನೀಶ್ವರ ತನುವೆ ಬಹು ಸಂ
ಶಯ ಪದಾನ್ವಿತ ನಿನಗೆ ಮೋಕ್ಷದೊಳರಿಯಲಿಲ್ಲೆನಗೆ ॥ ೪೩ ॥

ಪಶುವೆನಲ್ಪರಮಾತ್ಮನೆಂದ ಸ-
ದೃಶನವಸ್ಥಾ ತ್ರಯಗಳೊಳು ಪರ
ವಶದೊಳಾಚರಿಪಾತ್ಮನಲ್ಲ ನಿಜಾನುಭಾವದೊಳು ।
ಕುಶಲ ಸಮ್ಯಕ್-ಜ್ಞಾನಿ ಜೈತ
ನ್ಯಶಮಿತೇಂದ್ರಿಯ ಸಾಕ್ಷಿ ನೀನೇ
ದಶಮುರುದ್ಗತಿ ಈ ವಿಕಾರೀ ಪಾಪಿಯಜ್ಞಾನಿ ॥ ೪೪ ॥

ಸನ್ನುತೇಂದ್ರಿಯ ವಿಜಯ ನಹುದಹು
ದೆನ್ನ ಜನನ ಸ್ಥಾನಮರುತ ಜ-
ಗನ್ನಿಕಾಯ ಪ್ರಾಣಮಹುದೀ ಪ್ರಾಣ ಮಾರುತನಂ ।
ನಿನ್ನ ಸಮ್ಯಕ್ ಜ್ಞಾನ ದೀಪಂ
ಭಿನ್ನಮಾಗಿ ಮನೋಗುಣಾವಳಿ
ಯಿಂ ನಡೆವ ಜೀವನೆ ಮಹೋದಯ ಮಾವುದೇನೆಂದೆ ॥ ೪೫ ॥

ತಿಳಿಯೆ ಸುಪರಂಜ್ಯೋತಿಯದು ಸಂ
ಚಳನ ಮಾತ್ರದೊಳಳಿವುದಲ್ತು
ಜ್ವಲಿತ ಮಚ್ಚೈತನ್ಯ ನಿನ್ನೊಳು ಬಿಂಬಿಸಿಹ ದೀಪಂ ।
ಚಳನ ಮಾತ್ರದ ಪವನ ಭೇದದಿ
ನಳಿದು ಮರವೆಯ ನೊಂದಿದಪೆ ನಿ-
ರ್ಮಳ ಮುಮುಕ್ಷುಗಳರಿಯರೀ ಕುಮನಃ ಪ್ರಚಾರವನು ॥ ೪೬ ॥

ಭಾವಿಸಲು ಚಂದ್ರಮನೆ ನಿನಗಧಿ
ದೈವಮಾ ಪರಶಿವನೆ ನನಗಧಿ
ದೈವ ವಿನ್ನರಿ ಮುಖ್ಯವೈರಂಭ* ಪ್ರಭಂಜನರು ।
ಕೇವಲಾಂತರ್ಯಾಮಿ ಸಂಜ್ಞಾ
ಜೀವ ಸಂಬಂಧದ ಚತುಃ ಪವ
ನಾವಳಿಗಳಿಂ ನೀವು ನಾಲ್ವರು ಚೇಷ್ಟಿಸುವಿರೊಲಿದು ॥ ೪೭ ॥

ಕರಣಗಳೆ ಮದ್ರೂಪು ವಿಷಯಮೆ
ಕರದೊಳಿವೆ ಕೋಶಗಳೆ ಕಣಜಂ
ಮರುತಗಳೇ ಹಯಂಗಳು ಮಹಾಕ್ಲೇಶ ಭಂಡಾರಂ ।
ಪುರಮೆ ತನುಗಳವಸ್ಥೆಗಳೆ ಮನೆ
ಕರಿಯೆ ಮದಗಳು ವರ್ಗ ಸಾರಥಿ
ಯರು ಗುಣಮೆ ಮಂತ್ರಿಗಳ್ ವ್ಯಸನಮೆ ರಥಗಳಿಂದ್ರಿಯಮೆ ॥ ೪೮ ॥

ಜಾಯಿಲಗಳವರೊಳಗೆರಡೆ ಮುಖ
ನಾಯಕರು ಪಾಷಷ್ಠಿಕಮೆ ಪಾ
ಶಾಯತಂ ತಾಮಸಮೆ ಬೊಕ್ಕಸ ಕುಟಿಲಗಳೆ ನೀತಿ ।
ನ್ಯಾಯ ಸಂಸಾರೋಪ ಕರಣ ನಿ-
ಕಾಯಮೆ ಪದಾತಿಗಳಿವಿಕ್ಕಾಂ
ರಾಯ ದಶದಿಗ್ವಿಜಯನಾಗಿ ವಿಹಾರಿಸುತ್ತಿಹೆನು ॥ ೪೯ ॥

ಹರಿ ವಿರಿಂಚೀಂದ್ರಾದಿ ದೇವಾ
ಸುರರು ಮನುಮುನಿ ಸಿದ್ಧ ಸಾಧ್ಯಾ
ಪ್ಸರರು ಭಾಳಾಂಬಕರು ಒಳಿಕೆನ್ನಾಜ್ಞೆಯಂ ಮೀರಿ ।
ಚರಿಸಲಮ್ಮದೆ ಸಕಲಭೋಗದ
ಸಿರಿಗಳಿಂ ಮನವಾರ್ತ್ತೆಯೆಂದೆ-
ನ್ನಿರವನನಿಶಂ ಪೊಗಳುತಿರ್ಪರು ಮತ್ತದಂತಿರಲಿ ॥ ೫೦ ॥

---

* ಟಿ—ವೈರಿಂಚಿ

ರಾಗದಿಂ ಶಿವನೊಳು ಮನೋ ಲಯ
ವಾಗಿ ಮಾಡುವ ಯೋಗಿಗಳನು ವಿ
ಯೋಗಿಗಳನುರೆ ಮಾಡುತಿಹೆನು ಸಮಾಧಿಯಿಂ ಬಳಿಕ ॥
ಭೋಗಮೋಕ್ಷಮನೆಳಸಿ ಸುತಪೋ
ಯಾಗ ಮುಖ್ಯಶ್ರವಣಪನು ಮಾ
ಳ್ಪಾಗವಿಕರಿಗೆ ಮರವೆಕಂಪೊಳಲಾಗಿ ಕಾಡುವೆನು ॥ ೫೧ ॥

ಭಾವಿಕರು ಬಲ್ಲಿದರು ಶಾಸ್ತ್ರಕ
ಳಾವಿಶಾರದರಮಲ ಸನ್ಮಾ
ರ್ಗಾವಲಂಬಿಗಳಖಿಳ ಸಂಪದ್ಬ್ರಹ್ಮವಿತ್ತುಗಳು ॥
ಕೋವಿದರ್ಗಂತಂತೆ ಸಂಸೃತಿ
ಭಾವದಿಂ ಮಹದಿರವ ಮರಸಿಯೆ
ಟೀವಕಪನಾಡಿಸುವೆ ಮರುಳಂ ಮಾಡಿ ಸರ್ವರನು ॥ ೫೨

ನೀಚಮನವೇ ಕೇಳವಿಕಲಮ
ರೀಚಿಕಾ ಸ್ರೋತಸ್ವಿನೀ ಘನ
ವೀಚಿಯೊಳು ಪೊಳೆದಮಳ ಜಂತು ವ್ಯಾಧನಾ ಬಲೆಗೆ ॥
ಯೋಚಿಸಲು ಸಿಲ್ಕುವದೆ ಸನ್ಮಯ
ಗಾಚಿದಾತ್ಮಗೆ ಮಿಥ್ಯವಹತನು
ಗೋಚರಾದಿಗಳಿಲ್ಲರಿಯೆ ಶ್ರುತ್ಯನುಭವಾಂತರದಿ ॥ ೫೩ ॥

ಕೊಳನ ತಡಿಯೊಳು ನಿಂದವಂ ತಲೆ
ಗೆಳಗನಾಗಿರುವಂದದಿಂ ಪ್ರ
ಮಿಳಿತ ವಿಪರೀತಾತ್ಮಕ ಜ್ಞಾನವನುಳಿದು ನಿಜದಿ ॥
ತಿಳಿಯಲಾಗನು ಸಾರದಿಂ ಸಂ
ಚಳಿಪುದಲ್ಲದೆ ಸೂಚಿಯು ದಯೋ
ಪಳದೊಳಾವ ವಿಕಾರವನು ಕಲ್ಪಿಸಬಹುದು ಹೇಳ ॥ ೫೪ ॥

ನೇತಿ ಸುಪದಕ್ರಮುವಳಿದು ಶಿವ
ನೀತಿ ಪದದೊಳು ನಿಂದು ಪರಿಕಿಸಿ
ಭೂತಮಯ ದೇಹಾಭಿಮಾನವನುಳಿದು ಶಿವತತ್ವ ॥
ಜ್ಯೋತಿಯಂ ಸಂತೈಸಲಾಕ್ಷಣ
ವೀತ ಸಂಸೃತಿ ನಿಶಿಗಳಾಗಿ ಪು
ನೀತವಹ ನಿಜಮೋಕ್ಷ ಮಂದಿರದಲ್ಲಿ ಸುಖವಿಹವು* ॥ ೫೫ ॥

ಬಳಿಕ ತತ್ವಮನರಿವುತಿರಲಾ
ಗಳಿವುದೇ ಸಂಸಾರಮೇನದ
ರೊಳಗನರಿಯದೆ ದೂರದಲ್ಲಿಹ ವೈರಿಯಂ ಕಂಡು ॥
ಮುಳಿದು ಬೈದೊಡೆ ಸಾಯಬಲ್ಲನೆ
ತಿಳಿದ ಮಾತ್ರದೊಳಳಿದು ಸಂಸೃತಿ
ಯುಳುಮೆಯ ನಿಜಾನಂದಮಯವೆಂತಹೆವು ಚಿದ್ರೂಪ ॥ ೫೬ ॥

ಜಾವ ನಾಲ್ಕುಂ ತೀವಿಕೊಂಡಿರ
ಲಾ ವಿಭಾಕರನುದಿಸಿ ಕಳ್ತಲೆ
ಜೀವಿಸಲ್ಕಿಂಬಿಲ್ಲದೊಡದೇಯಸ್ತಗಿರಿಗಾಗಿ ॥
ಭಾವದಿಂ ನಿಜದರಿವಿನರ್ಕೋ
ದ್ಭಾವವೀ ದೇಹೋದಯಾದ್ರಿಯೋ-
ಳಾವ ಸಿರಿ ಸಂಸಾರ ತಮುವಳಿದೈಕ್ಯ ಪದವಹುದು ॥ ೫೭ ॥

ವ್ಯಸನ ಘಟದೊಳು ತುಂಬಿ ತನುಸುಖ
ರಸವನಾಮದ ಮುಖದಿನಿಂದ್ರಿಯ
ರಸನೆಯಿಂ ದುಣಲೀವೆ ನಾನೆಂತಾ§ ದೊಡಮನಲಗಂ ॥
ಮುಸೆದಪಂ ಗತಿಯೆಲ್ಲಿಯುದು ಜೀ
ವಿಸಲಿಕಕಟೇನೆಂಬ ಪ್ರಶ್ನೆಯು
ವಿಸರ ಕುತ್ತರಗಾಣೆ ನೇಗೆಯ್ವಂ ಬಳಿಕ ನಾವು ॥ ೫೮ ॥

* ಹೆವು. § ಗೆಯುಮನಲಗಂ

ಎಮ್ಮುಮೈವರು ಕೂಡಿ ಪುಟ್ಟಿವ
ನೆಮ್ಮ ಬಾಳ್ವಿಗೆ ನಿಳ್ತುವಾದಂ
ಸಮ್ಮುದದೊಳಿಹೆವೆಂದೊಡಿರ ಬಿಡನೇನ ಮಾಡುವೆವು ॥
ಹಮ್ಮನಿವನೊಳು ಬಿಂಬಿಸುತ್ತದ-
ರಿಂ ಮುರಿವೆವಾಗದೊಡೆ ನಾವೆ-
ಲ್ಲಿಂ ಮರೆಯು ಪೊಕ್ಕಾದೊಡಿವಗಂ ಬಡ್ಡುಕುವೆಂ ಬಳಿಕ ॥ ೪೯ ॥

ಏನ ಮಾಡುವೆವೆಮ್ಮ ಪುಣ್ಯ ಫ
ಲಾನುಭವ ಸಂಸ್ಕಾರದಿಂ ಸಂ
ಧಾನಮಾದುದು ಶಾಂತಿಯಂ ಮಾಡಲ್ಕೆ ಬೇತಾಳಂ ॥
ಏನ ಮಾಡಿದೊಡೇನು ಬಳಿಕೆಮ
ಗೇನು ವಿಧಿಯೋ ಕಾಣಬಾರದು
ಮಾನನಿಧಿಗಾವೆಲ್ಲರುಂ ಮರೆವೊಗುವುದೇ ದಿಟವು ॥ ೬೦ ॥

ವಿಮಲ ಬಾಹ್ಯಾಭ್ಯಂತರಂಗದೊ
ಳಮಿತ ಸೂಕ್ಷ್ಮಾತ್ರಸೂಕ್ಷ್ಮ ರೂಪಿಂ
ಭ್ರಮಿಪ ಹಂಕರಿಪವಧರಿಪ ನಿಶ್ಚಯಿಪ ಭಾವ॥
ಪ್ರಮುಖ ವಿಷಯಜ್ಞಾನದಿಂದಂ
ಗ ಮಹಿತ ರಥೋತ್ಸಾಹವನು ತ
ತ್ಕ್ರಮದೆ ನಡೆಸುವರಖಿಳ ರೋರ್ಷಂ ಕಾರಣನೆ ನೀನು ॥ ೬೧ ॥

ಪರಿಕಿಸಿರೆ ಮದ್ವಂಶಜಾಂತಃ
ಕರಣಗಳೆ ಕಡೆಗೀಲಿನಂತಿಹೆ
ನರರೆ ತನುರಥವಳಿವುದಾಕ್ಷಣವಿಲ್ಲದಿರೆ ನಾನು ॥
ನಿರುತಮೀ ಸಂಸಾರ ಭೋಗೋ
ತ್ಕರಮೆ ಶೂಲಾಗ್ರಸ್ಥನಹ ತ-
ಸ್ಕರನ ಸುಖಮೆಂದರಿದು ನಿಜಪದವಡೆಯಿರೇ ಬಳಿಕ ॥ ೬೨ ॥

ಭ್ರಾಂತಿ ಮಾಯಾ ಕಾರ್ಯ ದೃಶ್ಯ
ನಂತ ಮಿಥ್ಯಾಮಯ ಜರಾದಿ ಕೃ-
ತಾಂತನಗರೋಚ್ಛಿಷ್ಟಪರ್ಣಾದ್ಯವ್ಯಥಾ ಶುದ್ಧ ||
ಸ್ವಾಂತ ದುಃಖಾಗಾರ ಬಿಂದು ನಿ-
ಶಾಂತ ಶೋಣಿತಮಯ ತನುವಿನೊಳು
ಸಂತತಂ ಸಿಲ್ಕಿರ್ದು ಸಂಸೃತಿ ವಿಜಯರೆಂತಹೆವು || ೬೩ ||

ದೃಶ್ಯ ಜಡ ಭೂತಂಗಳಿಂ ದೃ
ಗ್ಸ್ಪೃಶ್ಯ ಸಂಯುತಮಾದ ಪಕ್ಷಕೆ
ನಶ್ಯತೆಯ ಗುಣದೋಷಮುಂಟಾಗಂಗಮಲ್ತೆನಗೆ ||
ದೃಶ್ಯದುರ್ಗ್ಗುಣ ರಹಿತ ವಿಗತಾ
ಸ್ಪೃಶ್ಯ ಪರಿಪೂರ್ಣ್ಣಾದಿ ಶಿವನಾ
ಪೃಶ್ಯ ಚಿತ್ತುವೆ ಪಿಂಡಮಾದುದು ತಿಳಿದು ನಿಶ್ಚಯಿಸಿ || ೬೪ ||

ರುಚಿಯರುಚಿ ಸುಖದುಃಖ ಸಂಚಲ
ಮಚಲ ನಿತ್ಯಮನಿತ್ಯ ಮಿಥ್ಯಂ
ಪ್ರಚುರಸತ್ಯಂ ಸತ್ತಸತ್ತಜ್ಞಾನಸುಜ್ಞಾನ ||
ಉಚಿತ ಪೂರ್ಣ್ಣಮಪೂರ್ಣ್ಣ ದೃಗ್ ದೃ-
ಶ್ಯ ಚಲನಾತ್ಮಕ ಮಾಗಿಯೊಗೆದುವು
ಸುಚಿದಖಂಡ ಬ್ರಹ್ಮವೇ ತನುವಿಡಿದ ಕಾಲದೊಳು || ೬೫ ||

ಆ ಪರಂಜ್ಯೋತಿ ಸ್ವರೂಪ ನಿ-
ರೂಪ ನಿರ್ಮಲ ನಿರ್ವಿಕಾರ ಪ
ದಾಪರಾಖಂಡೈಕ್ಯ ಬೋಧಾದ್ವಯ ನಿಜಾನುಭವ ||
ದೀಪ ಮಪದೊಳು ಪುಷ್ಪಗಂಧಾ
ಲೇಪದಂತಿರೆ ಸಚ್ಚಿದಾನಂ
ದೋಪರಿಸ್ಥಿತ ಲಕ್ಷಣಾಂಕಿತ ಮೆನಿಸಿತವರೊಳಗೆ || ೬೬ ||

ಸತ್ತುವೆನಿಸಿಯೆ ಶಬ್ದ ನಿಶ್ಶ
ಬ್ದೋತ್ತರಕೆ ಬಾರದುದೆ ಪ್ರಾಣಂ
ಚಿತ್ತುವೆನಿಸಿಯೆ ನಾಮ ರೂಪುಗಳಿಲ್ಲದುದೆ ದೇಹಂ ॥
ಮತ್ತೆ ಯೋಗವೆ ಸುಖವಿವರೊಳನಿ-
ಮಿತ್ತ ಶಕ್ತಿಯ ಭೇದದಿಂ ತನು
ವೆತ್ತಿದೆವು ಭೋಗಾರ್ಥವಾಗಿ ಸದಾ ವಿಚಾರಿಸಲು ॥ ೬೭ ॥

ಚಿದ್ರಸ ಬ್ರಹ್ಮದ ಕರಂಡದ
ಮುದ್ರೆಯೊಡೆದುಚ್ಚಳಿಸಿ ರಸವೋ
ಛಿದ್ರವಾಗಖಿಳ ಪ್ರಕಾರ ಶರೀರ ವಾಂತಿಹುದು ॥
ಭದ್ರ ಸಂಸ್ಫಟಿಕಾಂಗದೊಳು ಸಂ
ವಿದ್ರುಚಿರ ಮಣಿದೀಪದಿಂ ನಿಲ-
ಸದ್ರುಮಾಕರ ವಸ್ತುವಂ ಪರಿಭಾವಿಸುವುದೊಲಿದು ॥ ೬೮ ॥

ಪೃಥುಲ ಭವ ಭೀಕರ ಸದೋದಿತ
ಶಿಥಿಲ ಕರಣಾನಂದಮಯ ಮ-
ನ್ಮಥ ಮದಾಪಹ ವಿಷಯ ಸಂಸೃತಿ ಮಥನ ನಿಜಮುಕ್ತಿ ॥
ಪಥವಿಹಾರವರೇಣ್ಯ ಸುಮನೋ
ರಥ ಮಹಾಸಾರಥಿ ನಿರೂಪ
ಪ್ರಥಮ ಶಿವತತ್ವಾಗಮ ಸ್ಮೃತಿ ಕಥನ ಜಯಜಯತು ॥ ೬೯ ॥

ಇದು ಸಮಸ್ತ ಶಿವಾನುಭಾವರ
ಪದಪಯೋರುಹ ಗಂಧಮದ ಷ
ಟ್ಪದನು ಷಟ್ಸ್ಥಲ ಸಾರ್ವಭೌಮಂ ಚೆನ್ನವೃಷಭೇಂದ್ರಂ ॥
ವಿದಿತವಾಗಿ ನಿರೂಪಿಸಿದ ಸ-
ಮ್ಮದ ಮಹಾ ಕ್ಷೇತ್ರಜ್ಞ ಸುಮನೋ
ವಾದದೊಳು ಸಂಸಾರ ಹೇಯಕೆ ಷಷ್ಠ ಮಹಾಸ್ಥಲವು ॥

ಇತಿ ಕ್ಷೇತ್ರಜ್ಞ ಸುಮನೋವಾದೇ ಸಂಸಾರ ಹೇಯ ವಿವರಣಂ ಷಷ್ಠಂ ಪ್ರಕರಣಂ ಅಂತುಸ್ಥಲವಾರಕ್ಕಂ ಪದ ೪೩೩ಕ್ಕಂ ಸಮಾಪ್ತಂ ॥
ಮಂಗಳ ಮಹಾ ಶ್ರೀ ಶ್ರೀ ಶ್ರೀ.

ಶ್ರೀಗುರು ಬಸವಲಿಂಗಾಯ ನಮಃ

# ಏಳನೆಯ ಸಂಧಿ

## ಲಿಂಗನಿಜಸ್ಥಾಪನ ಸ್ಥಲ

ಜ್ಞಾನದಿಂ ಭವದಳಿವ ನರಿದಿರ
ಲೇನುತತ್ಪ್ರತ್ಯಕ್ಷ ವಸ್ತುವ
ನಾನದಿರೆ ತನುವಳಿಯದಿಹುದೆಂದನು ಗುರೂತ್ತಮನು ॥ ಪಲ್ಲವ ॥

ಅಬ್ಧಿಯಿಲ್ಲದ ನಿಮ್ನಮಂ ಕ
ಲ್ಪಾಬ್ದಮಿಲ್ಲದ ಮಹಿಮೆಯಂ ಮಹ
ದಬ್ಧಿಮೇಖಲೆ ಮರವೆಯುಳಿದುಪಲಬ್ಧಿಮಯ ಬೆಳೆಯ ॥
ಶಬ್ದಮಿಲ್ಲದ ನಾದಮಂ ಪ್ರಾ
ರಬ್ಧಮಿಲ್ಲದ ಭೋಗಮಂ ನಿ-
ರ್ಲಬ್ಧಲಿಂಗದೊಳರಿದ ಶರಣಗಣಂಗಳಾಲಿಪುದು ॥ ೧ ॥

ಜ್ಞಾನ ವೈರಾಗ್ಯೋಪರತಿಯೊಳು
ಜ್ಞಾನವೊಂದೇ ಸರ್ವಕಾರಣ
ವೀ ನವೀನಾನಂದ ಚಿಜ್ಜ್ಯೋತಿಯನು ಸಂಚಲಕೆ ॥
ಆನದತ್ಯಂತಾನುಪಮ ಸುಯಿ
ಧಾನದಿಂ ಸ್ಥೈತೀಕ್ಷಿಸಲು ಸಂ-
ಧಾನಮಾಗಿಹುದಾ ಪರಬ್ರಹ್ಮಂ ಮನೋಬ್ಜದೊಳು ॥ ೨ ॥

ಮೇಣು ನವನಾಳದ ಕವಾಟಂ
ಜಾಣಿನಿಂ ಕೀಲಿಸದೆ ಹೃದಯದ
ಶೋಣಪದ್ಮಾಸನದೊಳಿಲ್ಲದೆ ಲಿಂಗ ಸನ್ಮೂರ್ತಿ ॥
ಪ್ರಾಣಮಾರುತ ಸಂಚಲತೆಯಿಂ
ಮಾಣದಳಿವಾಜ್ಞಾನ ದೀಪಮೆ
ಕೇಣ ಶೂನ್ಯಾಲಯದ ದೀಪಮದೇಂ ಪ್ರಯೋಜನವು ॥ ೩ ॥

ಅಮಿತ ಚಿದ್ಘನಲಿಂಗ ಪರಮಾ-
ಶ್ರಮಗತೋಭಯಭಾವನಾಯುತ
ವಿಮಲ ಸಮ್ಯಗ್ಜ್ಞಾನಮೇ ನಿಜವಸ್ತುಮಯಮಾಗಿ ॥
ಸುಮಹದಾದಿ ಮನೋಂಬುರುಹ ಮ-
ಧ್ಯಮ ನಿವಾಸದೊಳಿರ್ಪುದೊಲವಿಂ
ಶಮಿತವಿಷಯಾನಂದಮದವಿದ್ರಾವಣನೆ ನೋಡಾ ॥ ೪ ॥

ಸ್ವಾಯತಜ್ಞಾನಕ್ಕನುಪಮ
ಜ್ಞೇಯ ರೂಪಾಗಿಹ ಪರಬ್ರ-
ಹ್ಮಾಯತವನರಿಯದೆ ವಿವರಿಸೊಂದು ಪ್ರಮಾಣವನು ॥
ಸ್ವೇಯ ಮೆಂದನುಮಾನಿಸೆ ಮಹ-
ಜ್ಞೇಯಮೊಂದೊಂದಿಲ್ಲವೆಂಬ
ನ್ಯಾಯ ಸಂಶಯಗತಮತಿಯೆ ನಿಜವಸ್ತುಮಯವಲ್ಲ ॥ ೫ ॥

ಸತ್ತು ಚಿತ್ತೆಂಬುಭಯದೊಳು ಭೇ-
ದೋತ್ತರಂಗಾಣದೆ ನಿಜಾನಂ
ದೋತ್ತಮ ಬ್ರಹ್ಮವನು ಸಮ್ಯಗ್ಜ್ಞಾನದಿಂದರಿದು ॥
ಮತ್ತ ಮಾಯಾ ದೇಹ ಧರ್ಮವ
ನುತ್ತರಿಸಿ ಪರಿಪೂರ್ಣಮಹಮಂ
ಚಿತ್ತಪದ್ಮದೊಳಿರಿಸಿ ಜಾನಿಸಿ ನಿತ್ಯಸುಖಮಿಹೆನು ॥ ೬ ॥

ಕೇವಲಜ್ಞಾನಾತಿಶಯ ಲಿಂ
ಗಾವಸರವುಂ ಬಾಹ್ಯದೊಳು ಸಂ-
ಭಾವಿಸಲ್ಲದೆನಪುರಹಂಕೃತಿಯಳಿಯದೀ ದೇಹ ॥
ಭಾವಮೇ ಮೊದಲಳಿಯೆ ಕಡೆಯೊಳು
ಜೀವ ಭಾವಂ ಕೆಡುವುದೀ ತನು
ಭಾವಮಿರೆ ಕೆಡದಿರ್ಪುವಖಿಲಂ ಮೋಕ್ಷಮಿಲ್ಲವಗೆ ॥ ೭ ॥

ತನುವ ಧರ್ಮ್ಮಂ ಕಾಣೆನೆಂದೆ
ಲ್ಲನಘ ಜೀವನ ದುಷ್ಕೃತಂಗಳೆ
ಕನಲಿ ದೂರಮೆನಲ್ಪಲಾಯನ ಮಾಡುವೀದೇಹ ॥
ವಿನುತ ಜೀವರ ಸೂತಕಂಗಳೆ
ಮನವೆ ನಿರ್ಮಲವಾಗಲಳಿದುವು
ಮನವೆ ನಿರ್ಮಲಮಾಗೆ ಬ್ರಹ್ಮಂ ಪೂರ್ಣಮಾಗಿಹುದು ॥ ೮ ॥

ಅವಿಕಲ ಬ್ರಹ್ಮಾತ್ಮಕನೆ ವಾ
ಕ್ಯವೆ ಶರೀರವನಿರಿದೊಡಖಿಳಾ
ಸ್ರವನು ಪಿಡಿದಿರಲೇಕೆ ಸಕಲೇಂದ್ರಿಯ ಮುಖಂಗಳೊಳು ॥
ಪವನ ಯೋಗದೆ ಸಂಚರಿಪ ದು-
ರ್ಭವಿ ಮನಂ ನಿರ್ಮಳಿನಮೆಂತಹು
ದವಿರಳ ಪ್ರಾಣೇಶನಿದರೊಳಗೆಂತು ನೆಲಸಿಹನು ॥ ೯ ॥

ಅರಿವು ಮರವೆಯು ಮನದ ರಜಮೆಂ-
ಬರಿಕೆ ಮಣ್ಣಂ ಕಳೆದು ಶಾಂತಿಯು
ತೊರೆಯೊಳಾಗಳು ತೊಳೆದು ಯೋಗ ಪರಾಗಮುಂ ಕೂಡಿ ॥
ಅರಿವಿನನುವಪ ಯಂತ್ರದಿಂ ಹಿಳಿ
ದುರದೆ ಜಡತನುವೆಂಬ ಹಿಪ್ಪೆಯು
ಜರಿದು ತಚ್ಛಿದ್ರಜ ರಸಮನಾ ಲೇಪಿಸಿಹೆನೊಲಿದು ॥ ೧೦ ॥

ಮನವನವಮಳಿಸವೆನಿಸಿ ಬೆರಸುವೆ-
ನೆನಿಪಯೋಗಿಗಳಾರು ಮನ ಮಾ
ಜಿನೆರೆತಡೆದೆಹೆನೆಂಬರ ಕರಕರಿಸುವದದು ಮನವೆ ॥
ಘನವಿಕಲ್ಪಜ್ಞಾನದಿಂದರಿ
ದನುವ ಮಾಡಿಹೆನೆಂಬುದದು ಮನ
ಮನಘಲಿಂಗವನರಿವೊಡಾ ಮನವಿಲ್ಲದಿರಬೇಕು ॥ ೧೧ ॥

ಈ ವಿಕಲ್ಪಜ್ಞಾನಿಮನ ವೆಂ
ಬಾವಿಸಂಕಲ್ಪವನರಿಯೆ ಮಹ
ದಾವರಣನಾಗಿಯೇ ಮನಸಂಕಲ್ಪಗಳನರಿಯೆ ॥
ಆ ವಿಚಾರಣ ಮಾದುದಾಗಿಮ
ಹಾ ವಿಚಾರವೆ ಮನಕೆವೇಧಿಸ
ಲೋವಿಮನದೊಳು ಬ್ರಹ್ಮವೇ ಪರಿಪೂರ್ಣವಾಗಿಹುದು ॥ ೧೨ ॥

ಈ ವಿಚಾರವೆ ಸಂಶಯಕ್ಕೊಳ
ಗೈ ವಿಚಾರಿಸುವನಕ ಮಹದನು-
ಭಾವವಮಂ ನೀನೆತ್ತ ಬಲ್ಲೈ ವಾಙ್ಮನೋತೀತಂ ॥
ಈ ವಿಚಾರಕೆ ಸಿಲ್ಕುವುದೆ ನಿಜ
ಭಾವವರಿದೆಹೆನೆಂಬವರ ನೆಲ
ವೋ ವಿಚಾರದಬಲೆಗೆ-ತೊಡರಿಸಿ ಬೇರಿಹುದ ನರಿಯಾ ॥ ೧೩ ॥

ಕೇಳನನ್ಯ ವಿಚಾರವಿದು ನವ
ನಾಳ ಸಂಚಲತೆಯನು-ನಿಲಿಸಿ ಸು
ನಾಳ ಶುದ್ಧಂಗೆಯ್ದು ಕಮಲವನೂರ್ಧ್ವಮುಖವೆನಿಸಿ ॥
ಮೇಳವಾಗಿಸಿ ನಿಜದೊಳಾ ವ
ರ್ಣಾಳಿಯಂ ಪ್ರಣವದೊಳು ನಿಲಿಸಿ ನಿ
ರಾಳವುಯಮಾದೀ ವಿಚಾರ ಸಮಗ್ರತೆಯನರಿಯಾ ॥ ೧೪ ॥

ಸುನವನಾಳದ ಸುಳುಹ ನರಿದೆನು-
ವಿನುತ ಬಾವನ್ನಕ್ಷರದ ಶಾ
ಸನವ ನೋಡಿ ಹೃದಂಬುರುಹಕರ್ಣಿಕೆಯೊಳಡಗಿವೆನು ॥
ಎನಲು ಯೋಗವಿಮಿದಲ್ಲುತ್ತು ಪೊರಗೆನ
ಲನಘನೀಕ್ರಿಯೆಯೊಳಗೆನಲ್ವಾ
ಜ್ಞಾನಕತೀತಂ ವಸ್ತು ಷಟ್ಚಕ್ರಗಳ ಮೇಲಿಲ್ಲ ॥ ೧೫ ॥

ಪಾವನಾಭ್ಯಂತರದೊಳರಿವಿಂ
ದಾವಳೋಕಿಪನಲ್ಲ ಬಾಹ್ಯದೊ
ಳೋವಿಕರ್ಮದ ಬಳಕೆಯಿಲ್ಲ ಸುಷುಮ್ನ ಮಾರ್ಗದೊಳು ॥
ತೀವಿನಡೆದನುಪಮ ಚಿದಭ್ರನಿ
ರಾವಲಂಬಸ್ಥಾನ ಮಂಟಪ
ಭಾವಮಧ್ಯ ಚಿದಾಸನಸ್ಥ ಬ್ರಹ್ಮದಲ್ಲಿಹೆನು ॥ ೧೬ ॥

ಸ್ವಸ್ಥಪದ್ಮಾಸನವ ಬಲಿದಪ
ರಸ್ಥಿತಾಸ್ತಿಯ ಭಿದ್ರಿಸಿ ಸುಷು
ಮ್ನಸ್ಥಲಾಧ್ವಮನಡರಿ ಪರಮ ಶಿರೋಗತಾಮೃತವ ॥
ಸ್ವಸ್ಥಿರದೆ ಸೇವಿಸಿದೆನೆಂಬರ
ನಸ್ಥಿರವ ಮಾಡಿತ್ತು ಶಿವಯೋ
ಗ ಸ್ಥಿತಿಯ ತಿಳಿಯತ್ಯತಿಷ್ಠತ್ತೆಂದು ಪೊಗಳುತಿಹ ॥ ೧೭ ॥

ಶ್ರುತಿಯು ನೋಡಲು ಮುಟ್ಟೆ ನೆಲೆಗೊಳ್ಳಿ
ಪಿತರಸುಸ್ಥಲ ಮುಂಟೆ ಸತತೋ
ದಿತಗನಾದಿ ಸ್ಥಾನಮಾನವಿಕಲ್ಪಿತಗಳೆಂಬ ॥
ಮತಿಯು ಮಥನವ ಮೀರಿದಭವನ
ಮತಿಯೊಳರಿದೀ ಬ್ರಹ್ಮರಂಧ್ರ ದೊ
ಳತಿಶಯದೊಳಾಂ ಕಂಡೆನೆಂದೊಡೆ ಕಾಣಲೆಂತಹುದು ॥ ೧೮ ॥

ಪ್ರಣವಪುಯನಂ ವಿವರಿಸುವನ
ಲ್ಲಣಿಯರಂ ಧ್ಯಾನಿಸುವನೆಲ್ಲೊಲಿ
ದೆಣಿಸಲಾಬ್ರಹ್ಮವನುತುರ್ಯಾತೀತದಲ್ಲಿರಿಸಿ ॥
ಮಣಿದು ಬೇರಿಹನಲ್ಲವಾನೇ
ಪ್ರಣವ ಪೀಠವುದಾಗಿ ನಿಗಮಾ
ಗಣಿತ ನಿಶ್ಶಬ್ದಾತ್ಮಲಿಂಗವನೆನೆಲೆಗೊಳಿಸಿಹೆನು ॥ ೧೯ ॥

ಬಿಂದು ಪೀಠಂ ನಾದಲಿಂಗಂ
ಬಂಧುರ ಕಳಾರ್ಚನೆಯೆ ಭಿನ್ನಂ
ಬಿಂದುನಾದಕಳಾತಿಶಯ ಲಿಂಗೈಕ್ಯಮಲ್ಲಿಲ್ಲ ॥
ಬಂದು ಸಿಲ್ಕದಚಳದ ಬಯಲಂ
ತಂದು ಪೆಸರಿಡಬಹುದೆ ಪ್ರಣವವಿ
ದೆಂದು ನಿಶ್ಶಬ್ದ ಸ್ವರೂಪ ಬ್ರಹ್ಮಮೆನುತಿರಲು ॥ ೨೦ ॥

ನಾದ ಬಿಂದು ಕಳಾಂಗ ಲಿಂಗವೆ
ಮೋದಿತೈಕ್ಯಂದೇಹ ಸೋಹಂ
ನಾದಮಾತ್ಮಕನಾದ ಕಾರಣಬಿಂದು ತನುವಲ್ತು ॥
ನಾದರೂಪಕ ಮಲ್ತಿವೆರಡರ
ಭೇದ ಸೂತಕ ವಿಲ್ಲ ನೋಡಲು
ನಾದ ಬಿಂದುಗಳೊಡ್ಡತೋರೆ–ಬ್ರಹ್ಮವಾಗಿಹನು ॥ ೨೧ ॥

ನಾದಬಿಂದುಗಳೊಡ್ಡವಣೆಯೊಳು
ಮೋದಿಸುತ್ತನು ರಾಗದಿಂ ತ
ನ್ನಾದ ಬಿಂದು ಕಳಾವಿರಹಿತ ಬ್ರಹ್ಮವಾಗುವಡೆ– ॥
ಶೋಧಿತ ತ್ವಂ ಪದನೆ–ನೂತನ
ವಾದ ರತ್ನಮನುಳಿದು ಬೆಳಗಂ
ಸಾಧಿಸಿದೆನೆಂಬಂತೆ ಕುಹಕ ಪ್ರಶ್ನೆಯುಂ ಮರೆಯಾ ॥ ೨೨ ॥

ಪಟುತರ ಶರೀರ ಪ್ರಮಾಣ
ಸ್ಫಟಿಕ ಮಂಟಪ ಮಧ್ಯದೊಳು ಸಂ
ಸ್ಫುಟಪರಂಜ್ಯೋತಿರ್ಮಯಾ ಮಲಲಿಂಗ ಮೊಪ್ಪಿರಲು ॥
ಚಟುಲ ತಲ್ಲಿಂಗ ಪ್ರಣಾಶೋ
ತ್ಕಟವೆ ಬಾಹ್ಯಾಭ್ಯಂತರಂಗಾ
ಘಟಿತ ಮಹಿತಾಂತಃಕರಣದೊಳು ಪೂರ್ಣ್ಣಮಾಗಿಹುದು ॥ ೨೩ ॥

ದರ್ಪಣ ಪ್ರತಿಬಿಂಬದಂತೊಳ
ಗಿರ್ಪ ಬಿಂಬಮೆ ಬಾಹ್ಯದಿರವಾ
ಗಿರ್ಪ ಪರಿಯಂತನುಪಮೆಷ್ಟ ಪ್ರಭೆಯೆ ನೆಲೆಗೊಂಡು ॥
ಕೂರ್ಪ ಹೃದಯಾಂಬುಜ ದೊಳೊಲವಿಂ
ಮಾರ್ಪೊಳೆದು ಸತ್ಪ್ರಾಣ ಮಾಗಿಯೆ
ತೋರ್ಪುದನಿಶಂ ಸಂವಿದನುಭವಲೋಚನಾಗ್ರದೊಳು– ॥ ೨೪ ॥

ತಲೆಯ ನೊಂದೆಡೆಯಲ್ಲಿರಿಸಿ ಸಂ
ಚಲಿಪ ಮುಂಡಮದುಂಟೆ ಮಹದು
ಜ್ವಲಿತ ಚೈತನ್ಯಾತ್ಮಲಿಂಗಮೆ ಪೂರ್ಣದಿಂ ಸರ್ವ ॥
ಕಲೆಗಳೊಳ್ಪುರಂತರಂಗದೊ
ಳಲಘು ಹೃದಯಾಂಭೋಜ ಪೀಠದೊ
ಳೊಲಿದಜಸ್ರಂ ಮೂರ್ತಿಗೊಂಡಿರ್ಪುದು ವಿಚಾರಿಸಲು ॥ ೨೫ ॥

ಕ್ರೂರ ಮಾಯಾ ಕಾರ್ಯ ಮಲಿನ ಶ
ರೀರದಂತಃಕರಣದಿಂ ಸಂ
ಚಾರಿಪಾತ್ಮನೆ ಲಿಂಗಮೆಂಬುದಸತ್ಯಮಿಷ್ಟದೊಳು ॥
ಕಾರಣಾತ್ಮನ ನಿರಿಸಿ ಪ್ರಾಣದೊ
ಳೆ ರಮಿಸಲಿದು ಪ್ರಾಣಲಿಂಗಾ
ಚಾರ ಮಹುದರಿ ಸಕಲ ನಿಷ್ಕಲಮಾದ ನಿರ್ಣಯವ ॥ ೨೬ ॥

ತನುಮನಂ ಪ್ರಾಣೇಂದ್ರಿಯಂಗಳ
ಕನಲಿಕೆಯ ನಳಿದಾತ್ಮಪೀಠದೊ
ಳನುಪಮ ಪ್ರಾಣೇಶಲಿಂಗಂ ನೆಲಸಿರಲ್ಬೇರೆ ॥
ಅನುವೆಬಾಗಿನ ದುಂಡೆಗಳಿಗಾ
ಮನೆಯ ತೊಗೆಯಂ ಮಾಡಿದೊಲ್ಪಿಸಿ
ತನುವಿನೊಳು ನಷ್ಟವನು ತಾಳ್ದೊಡೆ ದೃಷ್ಟವೆಂತಹುದು ॥ ೨೭ ॥

ಗುರುವಿನಿಂ ಪ್ರತ್ಯಕ್ಷನಾದುರು
ತರನಿಜೇಷ್ಟಾಚಾರ ವಿಲ್ಲದ
ವಿರಹಿತ ಜ್ಞಾನಿಗಳಿಗಭ್ಯಂತರ ಮಹಾಲಿಂಗಂ ॥
ಸ್ಫುರಿಸದ ಗಣಿತ ಮಪ್ಪುದದು ಬಂ
ಧುರ ಸದಾ ನಂದೇಷ್ಟ ಮಯಪರಿ
ಚರಣತಾ ಸಕ್ತರ್ಗೆ ಪ್ರಾಣಂದೃಷ್ಟಮಾಗಿಹುದು ॥ ೨೮ ॥

ಸಿಡಿಲೊಡನೆ ಕಾದುವ ಮನುಷ್ಯಗೆ–
ಕೊಡೆಯದೊಂದೇ ಮರೆಯೆ? ಗಿರಿಯಂ
ಬಿಡದೆ ಪೊರುವಗೆ ಸಿಂಬಿಯೊಂದು ಸಹಾಯಮೇ ಹೇಳ ॥
ಒಡಲ ಧರ್ಮವನಳಿದವಗೆ ಬಾ
ಯ್ಬಿಡುವುದೇಂ ಸಂಜೀವನಕೆ ನಿಜ
ವಿಡಿದರಿವಿನಿಂ ಬ್ರಹ್ಮವಾದಗೆ–ಲಿಂಗಮೆಂದೇನು ॥ ೨೯ ॥

ಕಲಿಮಲಾಪಹ ಮಂತ್ರಮಂತವೆ
ಕಲಿತೊಡೇನು ಪುನಶ್ಚರಣಮಂ
ನಲಿದು ಮಾಡದೆ ಸಿದ್ಧಿಯಹುದೇ ಸಮಸ್ತವೈದ್ಯವನು ॥
ಕಲಿತೊಡೇನಾಮಯವು ತನುವಿಗೆ–
ಸಲೆಪ್ರಯೋಗಿಸಿಕೊಂಡೊಡಲ್ಲದೆ–
ತೊಲಗದಿಷ್ಟಮನುಳಿದು ನಿಜವರಿದೇಂ ಪ್ರಯೋಜನವು ॥ ೩೦ ॥

ಅರಿದು ನಿತ್ಯಾನಿತ್ಯ ವಸ್ತುವಿ
ನರಿವನದರಿಂದರಿವು ಮರವೆಯ
ಪರಿದು ಕೇವಲ ದರಿವಿನಿಂದಾಂ ಬ್ರಹ್ಮವೆಂದೆಂಬ ||
ನಿರುಗೆ-ನಿಶ್ಚಯವಾದ ಮೇಲೀ
ಕುರುಹು ಕಾರಣವಲ್ಲವೆನ್ನೊಳ್ಕುರುಹ
ನರಿಯದೆ ಮಾತನಾಡುವೆ ಹೋಗಲಾಮಾತು || ೩೧ ||

ಮೋದಫಳ ವಿಲ್ಲದೆ-ರಸಮನಾ
ಸ್ವಾದಿಸಲ್ಪಹುದೇ ವಿಚಾರಿಸ
ಲ್ಪೆದೆ-ವಾಲುಕ ಲಾಕ್ಷ ಮೊಂದಾಗು*ರ್ತುಗೆಲುವಂತೆ- ||
ನಾದಬಿಂದು ಕಳಾತಿಶಯ ಪೂ
ರ್ಣೋದಯ ಪ್ರಾಣೇಶನಿರವಂ
ಭೇದಿಪೊಡೆ-ಗುರುಕರುಣ ಲಬ್ಧೇಷ್ಟದೊಳರಿಯಬೇಕು || ೩೨ ||

ತನುಮನೋಭಿಜ್ಞಾನಭಾವದ
ಕನಲಿಕೆಯ ನಳಿದೇಕ ಮಾದೆನ
ಗನುಪಮ ಶ್ರೀಗುರುವೆ ದೇಹಂ ಪ್ರಾಣಮೇಲಿಂಗಂ ||
ಎನಿಸಿ ಬಾಹ್ಯಾಭ್ಯಂತರಂಗಮೊ-
ಳನುವಿನಿಂ ತೆರಪಿಲ್ಲದಿರುತಿರ
ಲನಘಲಿಂಗದ ನಾವತನುವಿನ ಮೇಲೆ-ಧರಿಸುವೆನು || ೩೩ ||

ಅಂಗಲಿಂಗಜ್ಞಾನ ಭಾವನಿ
ರಂಗ ಸಂಗಪ್ರಾಣ ಗುಣಕರ
ಣಂಗಳುಂ ಟೆಲ್ಲೆಂದರಿವ ನಿದಿಟ್ಟರಿವತನಕ ||
ಸಂಗತಜ್ಞಾನಾನುಭಾವಕೆ
ಭಂಗವುಂಟದ ನಿಷ್ಟದರಿವಿಂ
ಪಿಂಗಿದಲ್ಲದೆ ಪ್ರಾಣಲಿಂಗದ ನಿಜವು ಕಾಣಿಸದು || ೩೪ ||

---

* ಪಾ-ಗುರ್ಕು

ವಿಹಿತ ವೈಖರ್ಯಾದಿಕಂಗಳೊ
ಳಹಿತ ಸಂಚಲ ಮಳಿದ ಲಘು ಚಿ
ನ್ಮಹಿತ ಸಮ್ಯಕ್ಪ್ರಾಣಲಿಂಗನಿಜಾನುಭವಿ ನಿನಗೆ ॥
ನಿಹಿತ ಬೀಜಾಂಕುರದ ಪೊಲು ಸ
ನ್ನಹಿತ ಮಾಗಿಹುದುಭಯ ಲಿಂಗದ
ಸುಹಿತ ಸುಚಿದಾಚಾರ ಮಿದನೆನಗೊಲಿದು ನಿರವಿಪುದು ॥ ೩೫ ॥

ಮೂಲದೊಳು ಪರ್ಬಿರ್ದ ವಲ್ಲರಿ
ಮೇಲೆತರುಶಾಖೋಪ ಶಾಖೆಯು
ಕೀಲಸೆಡೆದೆರ ಹಿಲ್ಲದಿರ್ಪಂತಿಷ್ಟಮಿದುತಾನೆ ॥
ಸ್ಥೂಲ ತನುವಿನೊಳಿರ್ದು ಸೂಕ್ಷ್ಮಾ
ಲೋಲಕಾರಣ ಹೃದಯ ಮುಖ್ಯವಿ
ಶಾಲಕರಣಂಗಳೊಳು ತುಂಬಿ ವಿಜೃಂಭಿಸುತ್ತಿಹುದು ॥ ೩೬ ॥

ಭಲಭಲರೆ ಮಾನಸವೆ ಸಂಶಯ
ಕುಲವ ನಳಿದು ನಿಜೋದಯದೊಳ
ವಿಕಲ ಮಹಾ ಬ್ರಹ್ಮಾತ್ಮನೀನೆಂಬನುಭವಾಗಮದ ॥
ನೆಲೆಯ ನರುಹಿಸಿ ಕೊಟ್ಟೆ ನಿನ್ನಂ
ತಲಘು ಹಿತರಾರುಂಟೆನಗೆ ನಿ
ಶ್ಚಲ ನಿಜಾನಂದೈಕ ಬೋಧಾ ಮಾತ್ರವಹೆನೀನು ॥ ೩೭ ॥

ಪರುಷ ಲೋಹದ ಸಂಗದಂತಾ
ದರಣೆಯಿಂದುಭಯೈಕ್ಯಮಂ ವಿ
ಸ್ತರಿಪ ವೇದಾಂತಾದಿ ಬಹುಮತ ಬೋಧೆ ಗೀದೆಗಳಿಂ ॥
ಬೆರಸಿ ತನ್ನಿಜವಾಗಬಾರದು
ನಿರುತವತಿಶಯ ವೀರಮಾಹೇ
ಶ್ವರ ವಿಚಾರಾಚಾರ ಸಿದ್ಧಾಂತೈಕ್ಯ ನಿರ್ಣಯವು ॥ ೩೮ ॥

ಸ್ವಮಹಿತ ಜ್ಯೋತಿಯೊಳು ಜ್ಯೋತಿ
ಪ್ರಮುದದಿಂದೊಗೆ ದಂತಮಳಿನಾ
ರ್ಯ ಮನಸಂಗಮನೀತಮಸ್ಪತಿ ಮಾಡಿದಂದದೊಳು ॥
ಭ್ರಮರ ಕೀಟನ್ಯಾಯದಂತರಿ
ಯಮಮ ಪರತಂತ್ರ ಸ್ವತಂತ್ರ
ಕ್ರಮವನುಗ್ರಹ ಶಕ್ತಿಯೇ ಸನ್ಮುಕ್ತಿ ಕಾರಣವು ॥ ೩೯ ॥

ಅಸ್ತಿ ಭಾತಿ ಪ್ರೀತಿಯೆಂಬ ಸು
ವಸ್ತುಭಿತ್ತಿಗೆ ನಾಮರೂಪ ಸ
ಮಸ್ತಮಾಯಾ ಚಿತ್ರ ಮದಲಿಖಿಸಿರ್ಪುದಿಲ್ಲೆಂಬ ॥
ಶಸ್ತ ಭಿತ್ತಿಯ ಮೇಲೆಯುಂಟೆಂ
ಬಾಸ್ತಿಕದ ಚಿತ್ರಂಸಕಲರಿಂ
ಧ್ವಸ್ತಮಾಗದನಾದಿ ಸಂಸೃತಿಯಾಗಿ ಕಾಡುತಿದೆ ॥ ೪೦ ॥

ಕಾಳು ತುರ್ಕರ ಸೋಂಕಿದಾಪಾ
ಯಾಳು ವಂಜನಕೇನು ಸಲ್ವನೆ
ಕೇಳಹಂ ಬ್ರಹ್ಮಾಸ್ಮಿ ಎಂಬೀಜ್ಞಾನದಿಂಕೂರ್ತು ॥
ಮೇಳವಹ ಸಂಸಾರ ಮಾಯೆಯು
ಬಾಳಿಕೆಯು ನಳಿವೊಡೆ ಸದಾಕರು
ಣಾಳುನೀನೊ ನಿಮಿತ್ತಕಾರಣನಾವನುಸಿರೆಮಗೆ ॥ ೪೧ ॥

ಅಂಜಿ ಪಲವಂಗಣಿಸದಿರಿ ಮೃ
ತ್ಯುಂಜಯಾ ನಂದೈಕ ತತ್ವನಿ
ರಂಜನ ಮನೋಜ್ಞಾಧಿಕ ಪರಂಜ್ಯೋತಿರಾಕಾಲ ॥
ಮಂಜುಳಾಮಳ ಗುರು ಕೃಪಾಮಯ
ಪೊಂಜುರಿಗೆಯಿಂಕುಭವ ಮಾಯೆಯ
ಭಂಜಿಸುತೆ ಕೂಡುವೆನು ನಿಮ್ಮಂ ಮೋಕ್ಷಮಂದಿರಮಂ ॥ ೪೨ ॥

ಆದೊಡೆಲೆ ದಿವ್ಯಾನುಭವ ಗುರು
ಪಾದಮಂ ಪಿಡಿದಲ್ಲದೀ ಘನ
ಮಾದ ಸಂಸಾರಾನುಬಂಧಂ ತೊಲಗದಲ ಘುಮಯ ||
ಆ ದಯಾರ್ಣವ ಕರುಣಿಸುವನಾ
ಸ್ಪೈದಿ ಶರಣಂ ಜೊಕ್ಕಡನು ಪಮ
ಸಾಧನ ಚತುಷ್ಟಯುವನಂಗಂಗೊಂಡು ನುತಿಸುವುದು || ೪೩ ||

ಪಾಳಿಯಿಂ ನಾಭೋಕ್ತಮೆಂಬೀ
ಭಾಳ ದಕ್ಷರಗಳನು ತೊಡೆದು ನಿ
ರಾಳಮಂ ಕರದಲ್ಲಿರೂಹಿಸಿಯುಸುಮನಂಗಳನು ||
ಮೇಳಮುಹದರಿವಂತದೀಯನಿ
ರಾಳದೊಳು ಕೀಲಿಸುವ ಸತ್ಕರು
ಣಾಳು ಗುರುವಂ ಕಾಣ್ಬೆನೆಂದೋ ಶಿವಮಹಾದೇವ || ೪೪ ||

ಹೊಂದೊಡವ ತೊಟ್ಟರಸಿನವ ನುರೆ
ಮಿಂದು ಪುರುಷಸ್ನೇಹವಿಲ್ಲದ
ಸೌಂದರಿಯ ಸುವಿಲಾಸವೇತಕೆ ಸಂಸ್ಕೃತಿಯ ರುಜೆಯಿಂ ||
ನೊಂದು ಸಂತಾಪಾಗ್ನಿಯೊಳ್ನೆರೆ
ಬೆಂದು ನಿಂದುರಿದಳಲುವಗೆ ಗುರು
ವೆಂದು ಕರುಣಾಮೃತವ ನೆರೆವನೋ ಶಿವಮಹಾದೇವ || ೪೫ ||

ಒಲಿದು ಮದ್ಗುರುವೆನ್ನುವಾಸ್ತಿಗೆ
ನಲಿದು ಬಹು ಸಂಸಾರ ಮಾಯೆಯು
ನಲೆದು ಸಂಹರಿಸಭಿಮತಂಗಳ ನೀವೆನೆಂದೆಂಬ ||
ಬಲಿದ ಕರುಣಾಪಾಂಗ ವಾರಿಧಿ
ಯುಲಿದು ತೆರೆ ಮಸಗುತ್ತೆ ಮೇಲ್ಪಿರಿ
ದೊಲಿದು ಬಂದಂ ಗುರುವರೇಣ್ಯಂ ನತಜನ ಶರಣ್ಯಂ || ೪೬ ||

ಸೇವ್ಯ ಶಿವ ತತ್ವಾಗಮಾರ್ಥ
ಜ್ಞಾವ್ಯಯಾಖಂಡೈಕ ಬೋಧಾ
ನವ್ಯಪರಮಾನಂದ ರೂಪಗತ ವ್ಯಥಾಸ್ವಾಂತ ॥
ದಿವ್ಯದೇಹ ಭವೋಗ್ರಕಾನನ
ಹವ್ಯಭುಕ್ಸ್ವಭಂದ ಚರಿತ ಜಿ
ತವ್ಯಸನ ಷಡ್ವರ್ಗ ವಿರಹಿತ ಭವ್ಯಗುಣ ಜಯತು ॥ ೪೭ ॥

ಇದು ಸಮಸ್ತ ಶಿವಾನುಭಾವರ
ಪದ ಪಯೋರುಹಗಂಧ
ಮದಷಟ್ಪದನು ಷಟ್‌ಸ್ಥಲ ಸಾರ್ವಭೌಮಂ ಚೆನ್ನವೃಷಭೇಂದ್ರಂ ॥
ವಿದಿತವಾಗಿ ನಿರೂಪಿಸಿದ ಸ
ಮ್ಮುದ ಮಹಾಕ್ಷೇತ್ರಜ್ಞಸುಮನೋ
ವಾದದೊಳು ಶಿವಲಿಂಗನಿಜಕಂ ಸಪ್ತಮ ಸ್ಥಲವು ॥ ೪೮ ॥

ಇದು ಕ್ಷೇತ್ರಜ್ಞ ಸುಮನೋವಾದಂ ಲಿಂಗ ನಿಜಸ್ಥಾಪನ
ವಿವರಣಂ ಸಪ್ತಮ ಪ್ರಕರಣಂ
ಅಂತುಸ್ಥಲ ವೇಳಕ್ಕಂ ಪದಂ
೪೮೬ ಕ್ಕೆ ಸಮಾಪ್ತಂ (೪೩೯+೪೭)

ಶ್ರೀ ಗುರು ಬಸವಲಿಂಗಾಯನಮಃ

# ಎಂಟನೆಯ ಸಂಧಿ

## ಗುರು ಕರುಣಸ್ಥಲಂ

ಶಿಷ್ಯನಾ ಸಂಸಾರ ಮಾಯೆಯು
ದೂಷ್ಯಮೆನಿಸಿ ಮಹಾನುಭಾವ ಸಂ
ಭಾಷ್ಯಮಂ ಪೇಳ್ದಪುದೊಲವಿಂ ಸದ್ಗುರು ಕೃಪಾರ್ಣವನು ॥ ಪಲ್ಲವ ॥

ಜೀರ್ಣ ಕಲ್ಮಷ ತೂರ್ಣಗಾಪ್ತ ದೃ
ಗರ್ಣವಜ ಸುಶಿರೋರ್ಣಭವ ಸಂ
ಕೀರ್ಣಭಾವ ಸುಪರ್ಣಗನುತವಿಕೀರ್ಣವ ಪದ್ಮನು ।
ಕರ್ಣಿಕಾಸ್ಥಿತ ವರ್ಣ ಪೀತ
ಸ್ವರ್ಣ ಕುಧರೋದೀರ್ಣ ಧೃತ ಫಣಿ
ಕರ್ಣಯುಗಳ ವಿಶೀರ್ಣ ಗುಣಪರಿಪೂರ್ಣಮಾಂ ಪಾಹಿ ॥ ೧ ॥

ಘಸ್ಮರಸ್ಮರ ಭಸ್ಮತನುವಿಂ
ಸಸ್ಮಿತಾನನದಿಂ ಮಹಾಮಂ
ತ್ರಸ್ಮರಣದಿಂ ಲೋಚನದ್ವಯ ಹಸ್ತಯುಗ್ಮಗಳಿಂ ।
ವಿಸ್ಮಯಾಂಘ್ರಿ-ದ್ವಿತಯದಿಂ ಗತ
ಭೀಷ್ಮರೂಪಿಂ ಬಂದು ನಿಂದೆದೆ
ಯಸ್ಮಕದೊಳಿಂ-ತಪ್ಪ ಮೂರ್ತಿಯೊಳಸ್ಮದೀಯಾರ್ಥಂ ॥ ೨ ॥

ಮುಕ್ತಿ ಕಾಲ ಯುಗಾಂಗ ಜೀವನ
ಸೂಕ್ತಿ ಪುಣ್ಯ ಪ್ರಾಣ ಪರಶಿವ
ಶಕ್ತಿಯೊಂದರೊಳಾದ ಮೂರ್ತಿಯಿದಲ್ತು ನಿಷ್ನಾಯ ।
ವ್ಯಕ್ತ ರೂಪಾ ಮದ್ಧಿತಾರ್ಥಂ ।
ಭಕ್ತಿ ದೃಗ್ಗೋಚರ ಮದಾಗಿಯೆ
ಯುಕ್ತಿಗಳವಡದೆಂತು ಸಲಿಸುವೆ ನಾಹ ಮತ್ಸುಖವೆ ॥ ೩ ॥

ಪುಣ್ಯವಹ ಕಾಲಕ್ಕೆ ಮಣ್ಣೆ ಹಿ
ರಣ್ಯಮಪ್ಪೊಲ್ಮುನ್ನ ಮುನ್ನವೆ
ಗಣ್ಯಮಾಗಚ್ಯೊತ್ತಿದೀ ಸದ್ಭಾಗ್ಯವೆನ್ನ ನಿಜ ।
ಪುಣ್ಯದಿಂ ಪ್ರತ್ಯಕ್ಷಮಾದುದು
ಗುಣ್ಯಪರಮಾಪ್ತಾಮಲಗುರುವ
ರೇಣ್ಯನಿರವಂ ಕಂಡು ಬಳಿಕಂ ಮುನ್ನಿನಂತಿಹುದೆ ॥ ೪ ॥

ಅರಸುತಿಹ ಲತೆ ಕಾಲ್ಗೆ ತೊಡರಿದೊ
ಲರಿದಿದೆನ್ನಯ ಭಾಗ್ಯವರರೇ
ಪರಮ ಸಕಲಮೆ ನಿಃಕಲಂ ತನ್ನಿಃಕಲಮೆ ಸಕಲಂ ।
ಎರಡು ರೂಪಂ ತಾಳ್ದ ಗುರುವಿನ
ದರುಶನದಿ ನುರು ನಿತ್ಯ ತೃಪ್ತಿಯೆ
ದೊರಕಿತೊರ್ಮೆಗೆ ಬೆರಸಿ ನೋಡುವೆ ನೀ ಮಹಾ ಘನಮಂ ॥ ೫ ॥

ಶ್ರೀ ಗುರು ಕೃಪಾರ್ಣವ ಸದೋದಿತ
ರಾಗರಹಿತಾನಂದಮಯ ಶಿವ
ಯೋಗಿ ಹೃನ್ಮಧ್ಯಸ್ಥಿತಾಖಂಡೈಕರಸ ಪೂರ್ಣ ।
ಭೋಗ ಮೋಕ್ಷದ ವೇದ ವೇದಾಂ
ತಾಗಣಿತಸಂಸ್ಕೃತಿ ನಿರಂಕುಶ
ರೋಗಿಯಾಂ ನಿಮ್ಮಡಿಯ ಸಾರ್ದೆನು ರಕ್ಷಿಸಿಸೆನ್ನುವನು ॥ ೬ ॥

ನಿಮ್ಮಡಿಯ ನಿಜ ವರಿಯದಾನೀ
ದಿವ್ಮಿತಹ ದೇಹೋಹಮೆಂಬೀ
ಹವ್ಮಿನಿಂಭವಭವದೊಳಳಲಿದೆ ಬಳಲಿದೆನು ತಂದೆ ।
ನಿಮ್ಮ ನಿಜಮಂ ಪೇಳ್ದು ದೇಹದ
ದಿವ್ಮಿತಾಗಿಹ ಪೊರೆಯ ನಿಳುಹಿಸಿ
ಸಮ್ಮುದದೊಳಿರ್ಪಂತೆ ಮಾಡಿದೊಡುಳಿವೆ ನೆನ್ನಯ್ಯ ॥ ೭ ॥

ಆದಿಯೊಳು ಗುರುಪಿಂಡವಾದಗ
ನಾದಿಯೆಂಬುದ ನರುಹಲುಂಟೆ ಸ-
ದಾದಿಕಾಯಮನಾದಿಜೀವನನಮುಪ್ಪ ಯೋಗವನು ।
ಭೇದಿಸರಿಯಲು ಸೋಹಮೆಂಬುದೆ
ಮೋದ ಸತ್ಯಂ ಬ್ರಹ್ಮಮದು ತಾ
ನೈದೆ ಹೇಳಿತ ಕೇಳಿ ಕಂಡೆಹ ನೆಂದೊಡಸದಳವು ॥ ೮ ॥

ಗುರುವೆ ಭವದಂಘ್ರಿ ಪ್ರಕಾಶಮ
ನರಿದ ನಾನಾರೆಂದು ನೋಡಾ
ನರಿದ ಬೆಳಗಂ ಕಾಣ್ಬುದೆಹಗಾಂ ಕಂಡುಕಂಡರಿದು ।
ಶರಿರದೊಳು ಸ್ಥಿತಿಟ್ಟು ಜಾನಿಪ
ಪರಿ ಎಹಗೆ ನೀವೆನ್ನ ಮನಮಂ
ಕರಮೆ ತಿಳುಹಲಸಾಧ್ಯ ಮುಂಟೇ ದೇವ ಮಜ್ಜೀವ ॥ ೯ ॥

ಅರಿಯೆ ನೆಂಬುದೆ ಮರವೆ ಮರಹಳಿ
ದರಿವರಿಸದೆಂಬುದೆ ವಿಕಾರಮ
ದರಸುವರಿ ವೆಲ್ಲಿಯು ಮರಸದಿಹು ವರಿಸದಿಹ ನಿಜಮಂ ।
ಅರುಹ ಬಾರದು ಬಾರದಿಹ ಮಹ
ವರಿಯ ಬಹುದೇ ಬಯಕೆಯುಳ್ಳವ
ಗುರಿ ತವಕಮಿಹ ಕಾರಣಂ ತಿಳಿಯರುಹಲಿಲ್ಲೆಂದು ॥ ೧೦ ॥

ಕಂಡ ಕನಸಂ ಸತ್ಯಮಾಗಲು
ಕಂಡೆನೆಂಬುದೆ ಬೆಂಬಿಡದ ವೊಲು
ಕಂಡುದಂ ಸಲೆ ಕಾಣೆ ನೆಂಬಿಂತುಭಯಮಂ ಮರೆದು ।
ಕಂಡು ತವಕದ ತಲ್ಲಣವ ನೆಡೆ
ಗೊಂಡೆ ನಾತುರದೈಕ್ಯ ನಿಮ್ಮೊಳ
ಖಂಡಮಾಯ್ತು ಭವತ್ಫಲಿತ ಕಾರುಣ್ಯವೆನಗಾಯ್ತು ॥ ೧೧ ॥

ಬಯಕೆ ಎಂಬುದೆ ದೂರದೈಕ್ಯಂ
ಬಯಸೆನೆಂಬುದು ಕೂಟದೆರವದು
ಭಯ ಕಪಟ ಕನ್ನಡವಿದಲ್ಲದೆ ಸಹಜಮಲ್ಲಾಗಿ ।
ಸ್ವಯದೆ ಕೂಡಿಯೆ ಕಂಡ ಪರಿಯೆಂ
ತಯ ಸವಿನಯದ ಠಾವಿನೊಳು ನೀಂ
ನಯದೆ ಪರವಶವಾದೆನೆಂದೊಡೆ ಮೆಚ್ಚುವರೆ ಹೇಳಾ ॥ ೧೨ ॥

ಕೂರ್ಪನಾದೊಡೆ ನೀನು ನಾನುಂ
ಕೂರ್ಪ ನೊಲ್ಲದೊಡೊಲ್ಲೆ ನೆಂದಾ
ನಿರ್ಪಿ ನರಿವುಂ ಮರಹು ಮಿರ್ಪರ್ಗೆ ಸಮವೇನಲ್ಲಿ ।
ತೋರ್ಪ ಬಯಕೆಯೊಳಗಣ ಬಯಕೆಗೆ
ಕೂರ್ಪ ವಸ್ತುವೆ ನೀನೆ ಎಂದರಿ
ದಿರ್ಪ ಬಳಿಕಂ ಬಯಸುವಾತನು ನೀನೆ ಮುದ್ದುರುವೆ ॥ ೧೩ ॥

ಅವಿಕಲ ಬ್ರಹ್ಮೈಕ್ಯ ಭಾವದೊ
ಳವಿರಳಾತ್ಮಕನೆಂದಖಿಳ ವ
ಸ್ತುವಿನೊಳಿಚ್ಛಾ ಜ್ಞಾನವುಭಯದೆ ಬಯಸಿ ಭಾವಿಸುವ ।
ತವಕದೊಡಗೂಟಕ್ಕೆ ಸಂದರಿ
ಸುವ ಮಹಾ ಜ್ಞಾನಂ ಬಿಡದೆ ಬಯ
ಸುವ ಬಯಕೆ ಎಂಬೆರಡು ನೀನೆಂತಹೆ ಮರುಳುಮಗನೆ ॥ ೧೪ ॥

ವಿಶ್ವದೊಳು ಪರಿಪೂರ್ಣನಾಗ
ಲ್ವಿಶ್ವವಾಲಯು ವಾಗಲವರೊ-
ಲ್ವಿಶ್ವಮಯನೆಂದರಿದು ದೇಹಮೆ ಪೀಠವಾನಂದ ।
ವಿಶ್ವಜೀವನೆ ಲಿಂಗವೆಂದರಿ
ವಿಶ್ವಭಾವದೊಳಿರ್ದ್ದೆನಲ್ಲದೆ
ವಿಶ್ವರಕ್ಷಾಮಣಿಯೆ ಬೇರೆ ಸ್ವ (ಸು) ತಂತ್ರವಿಲ್ಲೆನಗೆ ॥ ೧೫ ॥

ಭಕ್ತದೇಹಿಕ ದೇವನಾಗಿಯೆ
ಭಕ್ತರಲ್ಲಿಹನಲ್ಲ ದಮಲಾ
ವ್ಯಕ್ತಲಿಂಗಕೆ ವಿಶ್ವವಾಲಯುವಾದಗಾಸ್ವೇಚ್ಛಾ ।
ಶಕ್ತಿಯಿಂ ವಿಶ್ವಾತ್ಮನೆಂದೊಡೆ
ಯುಕ್ತಿ ಹೃದಯದೊಳರಿಯ ಬಹುದೇ
ಭಕ್ತಿಹೀನನೆ ಎಮ್ಮ ಲಿಂಗವು ಹೋದಸೆವು ಸಾಕು ॥ ೧೬ ॥

ಮಾಣದರಿವುದೆ ಸಹಜ ಮೆಂದಿಹೆ
ಕೇಣವೆಂದೊಡೆ ಮಾಣಲದು ನಿ
ಮ್ಮಾಣತಿಯ ಘನವರಿಯಬಾರದು ನಿಜವ ಕೆಲರಲ್ಲಿ ।
ಕಾಣಿಸಿಯೆ ಮನದಲ್ಲಿ ಹೇಳದ
ಜಾಣನಿರಿಸಿ ವಿವೇಕದೊಳು ಸ
ತ್ಪ್ರಾಣಮಂ ನೆಲೆಗೊಳಿಸಿ ನಿಮ್ಮ (ಮ್ಮು?) ವನರುಹಿಸಾ ತಂದೆ ॥ ೧೭ ॥

ತೋರಬಾರದ ಘನವ ಪೇಳಲಿ
ಕಾರೆ ಪೇಳಲು ಬಾರದನುವಂ
ತೋರಲೆಂದೇನಯ್ಯ ಸ (ಶ?) ರ ಸಂಧಾನದಿರವಲ್ತು ॥
ಬೇರೆ ಕಂಡೆಹೆ ನೆಂದೊಡರಿವಂ
ಮೀರಿಹುದು ಕಲ್ಪಿತದೊಳಲ್ತಿದು
ಜಾರಿದವು ವೇದಾಂತ ಕೋಟಿಗಳರಿವ ಪರಿಯೆಂತು ॥ ೧೮ ॥

ಬೆರಸಿ ಬೆಚ್ಚನ ಕಂಡೆ ಮತ್ತವ
ನಿರವ ಕಾಣೆನು ದೇಹವಿಡಿದಾ
ಚರಿಪ ವಿಶ್ವನನರಿಯೆ ನಿಮ್ಮಿಂ ಬಲ್ಲೆನೇ ನೀವು ||
ವಿರಚಿಸಿದ ಬೆಂಬಳಿಯೊಳನ್ಯವ
ನರಸಿ ಕಾಣದೆ ನಡೆವೆನಲ್ಲದೆ
ಪಿರಿದು ಬೇರಾನರಿವುದೇ ಪುಸಿ ಕರುಣಿಸಾ ದೇವಾ || ೧೯ ||

ಶಸ್ತ್ರದಭ್ಯಾಸಂಗಳಲ್ತಿದು
ಶಾಸ್ತ್ರ ಮಥನದೊಳಿಲ್ಲ ಕರ್ನ*೧ ಮ-
ನ ಸ್ತ್ರಿಪುಟ ಬ್ಯಾಹ್ಯಾಂತರ ಪ್ರಶ್ನೆಗೆ ಶಿವಾನುಭವ ||
ಸ್ವ*೨ ಸ್ತ್ರಿ*೩ಯಂಗವ ನರಿಯದುಸುರುವ
ಶಾಸ್ತ್ರದಿಂ ಫಲವೇನು ನಿಜವೀ
ಶಾಸ್ತ್ರದುಪಮೆಗೆ ಸಿಲ್ಕದಾಗಿ ನಿರೂಪಿಸುವೊಡರಿದು || ೨೦ ||

ಉಪಮೆಯನುಪಮೆ ನಿಮ್ಮಧೀನಂ
ಚಪಲದಿಂ ಪೇಳುವುದು ಕೇಳ್ವುದು
ಸ್ವ*೪ ಪರ ನಿಮ್ಮಾಜ್ಞೆಗಳು ಬಾಹ್ಯಾಭ್ಯಂತರಕೆ ನೀವೆ ||
ಅಪರಿಮಿತ ನಿಜ ಕರ್ತುವಾಗಿ
ರ್ದ್ದ ಪರಿಯನುವಂ ಪೇಳ್ವೆನೆಂದೊಡೆ
ಕಪಟನೆನಗಿನ್ನಾವಗತಿ ಗುರುನಾಥ ನಿರವಿಪುದು || ೨೧ ||

ಚಕ್ಷುರಾದೀಂದ್ರಿಯವು ಗ್ರಹಿಸುವ
ಲಕ್ಷ್ಯ ಬಾಹ್ಯದ ಬಳಕೆಯಂ ಮರೆ
ದಾಕ್ಷಣಂ ಬಿಡದಾ ಮನೋನಿಲ ಬಿಂದುಗಳ ಬಹಳ ||
ಪಕ್ಷವಂ ಮುರಿದಾ ಸುಷುಮ್ನ ಗ-
ವಾಕ್ಷಿಯಿಂದೊಳಪೋಗಿ ದುರ್ಗಮ
ಸೂಕ್ಷ್ಮಮಾರ್ಗ್ಗದೊಳೈದಿದಲ್ಲದೆ ನಿಜವು ಕಾಣಿಸದು || ೨೨ ||

---

* ೧ ಪಾ—ರ್ಣ. * ೨ ಸು. * ೩ ತ್ರಿಯಂಗ. ೪ * ಸು

ಕಾಯ ಜೀವವ ಸರಿದು ಮಾನಸ
ವಾಯು ಬಿಂದು ಪ್ರಣವ ಶಕ್ತಿ ಸ-
ಹಾಯದಿಂ ಬ್ರಹ್ಮಾದಿಕ ಗ್ರಂಥಿಗಳ ನೋಡಗೊಂಡು ॥
ಸ್ಥೀಯ ದುರ್ಗ್ಗಮ ಪಶ್ಚಿಮಾ ಸಂ
ದಾಯನಡೊಳ್ಗೈದಿಯೆ ಮನೋಮ
ಗ್ನಾಯತದ ನಿಜವರಿಯದ ಬಳಿಕಿನ್ನೇನು ಕರುಣಿಪುದು ॥ ೩೩ ॥

ಅರಿದೆನೆನಲರಿವಿಂಗೆ ದೂರಂ
ಮರೆದೆನೆಂದೊಡೆ ಮನಕೆ ದೂರವು
ದರಿದು ಮರೆದಿಹೆನೆಂದೊಡುಪಮೆಗೆ ದೂರ ವಿಂತೆರಡಂ ॥
ಪರಿದ ನಿರ್ಭಾವದೊಳು ಭಾವದ
ಬರಿಯ ಸಂಕಲ್ಪಗಳೆ ಕೆಡದಿರೆ
ನೆರೆ ಮನೋಮಗ್ನ ಪ್ರಯೋಗಮದೆಂತಹುದು ನಿನಗೆ ॥ ೩೪ ॥

ನಿಮ್ಮ ನೆನವೆನದೆನ್ನ ನೆನಹೇ
ನಿಮ್ಮೊಳಿರ್ಪ್ಪುದೆ ದೋಷವೆಂಬೀ
ಹಮ್ಮನಳಿದೀರ್ವ್ವರಿಗೆ ಮಾನಸ ಮೊಂದೆಯಹುದಾಗಿ ॥
ನೀಂ ಮನೋಮುಕ್ತನಹ ಕಾರಣ
ನಿಮ್ಮೊಡನೆ ಮನ್ಮನವು ಮುಕ್ತಂ
ಸಮ್ಮದದೊಳಿಂತಾಗೆ ಸುಮನೋ ಮಗ್ನವೆನಗಭವ ॥ ೩೫ ॥

ಮನಮದುಂಟೆ ಮನೋನು ಮಗ್ನತೆ
ನಿನಗದೊರ್ಮೆಗೆ ಯುಂಟೆ ಇಲ್ಲದ
ಮನವನುಂಟೆಂದುಸುರಿಯಡಗಿದೆನೆಂಬ ಮಾತಿನೊಳು ॥
ಮನವನೇ ನೆಲೆಮಾಡಿ ತೋರಿ
ತ್ತನಘ ಲಿಂಗವ ನರಿದ ಶರಣಗೆ
ಮನವು ತೋರಲು ಮಿಲ್ಲ ವಡಗಲು ಮಿಲ್ಲ ತಿಳಿ ಮಗನೆ ॥ ೩೬ ॥

ನೆರೆ ಮನೋ ಮುಗ್ನತೆಯದೆಂದೊಡೆ
ಕೊರತೆಯೇನಾ ಬಚ್ಚ ಬರಿಯರಿ
ವರತ ಬೊಮ್ಮಮು ದೆಂದೊಡೇನತಿಶಯವೊ ಬಳಿಕಾನು ॥
ಅರಿದು ನುಡಿವೀ ಮಾತಿನಲ್ಲಿದು
ಕೊರತೆಯೆನಲೆನ್ನಂತರಂಗದ
ಕುರುಡಿನೊಳು ತಾತ್ಪರ್ಯವಂತಿರ್ಪುದೆ ಮಹಾಗುರುವೆ ॥ ೨೭ ॥

ಉರೆ ಮನೋ ಮಗ್ನ ತೆಯದೆಂತಿಹು
ದರಿಯುದಂತಿರಬೇಕದಲ್ಲದೆ
ಯರಿದು ಮರೆದರಿದುಸುರಿಯಡಗಿಹೆ ನೆಂಬರಿವದುಂಟೇ ॥
ನೆರೆಯುರಿದೆ ನೆಂಬಲ್ಲಿಯಲ್ಲದೆ
ಮರೆಯನೊಡ್ಡಿಯೆ ಕಾಣನಭವಂ
ಮರೆಯದಿರು ನೀನೇ ಪರಬ್ರಹ್ಮ ಸ್ವರೂಪಕನು ॥ ೨೮ ॥

ಕರ್ಮ ಶತಕೋಟಿಗಳ ನಳಿದಾಂ
ಕೂರ್ಮೆಯಿಂದೈವಾನುಕೂಲದ
ಧರ್ಮವೇ ಗತಿಯೆಂದು ಬರಲೀ ಕರ್ಮ ಬಂಧವನು ॥
ನೂರ್ಮಡಿಸಿ ಕಟ್ಟುವರೆ ಮದ್ಗುರು
ಧರ್ಮಿ ನಿಮ್ಮಂ ದೇವನೆಂದಿ
ನ್ನೊರ್ಮೆ ಭಾವಿಸಲುಂಟೆ ಎಲವೋ ದೇವ ಸುಖಭಾವ ॥ ೨೯ ॥

ಭ್ರಮರ ಚಿಂತಾಭ್ರಮಣ ಕೀಟಂ
ಭ್ರಮರನಾದಂತಬ್ಧಿಯೊಳ್ವಿ
ಶ್ರಮಿಸಿದಾತಂಗರಿಯೆ ತೃಷ್ಣಾತುರತೆ ಇಲ್ಲದೊಲು ॥
ಸ್ವಮಹಿತ ಬ್ರಹ್ಮೈಕ್ಯ ಚಿಂತಾ
ಶ್ರಮವನೈದಿ ಬ್ರಹ್ಮನಾದನು
ಷಮನೆ ನಿನಗಿನ್ನರಿದು ಪರಿಭಾವಿಸು ವೊಡೇನುಂಟು ॥ ೩೦ ॥

ನಿನ್ನ ದೇವರನೆಂದು ಭಾವಿಸಿ
ಯೆನ್ನ ಮನಮಂಗ್ರಹಿಸಿದಾಂ
ಮುನ್ನ ಬಿನ್ನವಿಸಿರ್ದ ಕಾರಣದೊಳ ಹೊರಗೆ ನೀನೆ ॥
ನಿನ್ನೊಳಡಗಿದ ನುಡಿಯನೊಳ ಕೊಂ
ಡುನ್ನತದ ಮಹದರಿವು ನಿಮ್ಮಂ
ತನ್ನ ನರಿದುಂ ಮರೆಯದೇ ನಿಜವಾದೆ ನಾನಭವ ॥ ೩೧ ॥

ಎರಗ ಮಗನೇ ಹೋಗು ಏನುವ
ನರಿಯೆ ನಾವಾಡಿದ ವೊಲಾಡುವೆ
ಅರಿಯೆನೆಂಬುದು ಮಿಥ್ಯವರಿವೆಹೆನೆಂಬುದದು ಮಿಥ್ಯಂ ॥
ಅರಿದು ಮರೆದಿಹೆ ನೆನಲು ಮಿಥ್ಯಮ
ದರಿವ ಪರವಶದಲ್ಲಿ ಲಕ್ಷಿಸಿ
ಬರಿದಹಂ ಬ್ರಹ್ಮಾಸ್ಮಿ ಎಂಬುದು ಸರ್ವಥಾ ಮಿಥ್ಯಂ ॥ ೩೨ ॥

ಶಿವಶಿವಾ ನಾನೇ ಸ್ವತಂತ್ರ
ಪ್ರವಿಮಲ ಜ್ಞಾನಾನು ಭಾವಾ
ದ್ಯನಿಕಲ ಬ್ರಹ್ಮಸ್ವರೂಪಕ ನಾದೊಡಂ ನಿಮ್ಮ ॥
ಅವಿರಳಾಂಘ್ರಿ ಸರೋಜ ಸೌರಭ
ನವಮಧು ವ್ರತನಂತಿರಗಿ ಶರ
ಣುವನು ಬೇಳ್ಪೆನೆ ಕಾಡದೆನ್ನಂ ರಕ್ಷಿಪುದು ದೇವಾ ॥ ೩೩ ॥

ನಾಹ ಮೆನ್ನಂ ಕೋಹ ಮೆನ್ನಂ
ಸೋಹ ಮೆನ್ನನನಾದಿ ಶರಣಂ
ದೇಹ ಮೋಹ ಭ್ರಾಂತಿ ಸಂಶಯ ಮಿದ ಮಹಂಭಾವಂ ॥
ಸ್ನೇಹ ಮಾಯಾ ತ್ರಿವಿಧ ಜಡ ಸಂ
ದೇಹ ಮಳಿದಾನಂದಮಯ ದಾ-
ಸೋಹ ಮೆನ್ನಂ ತಾನೆ ಸೇವಿತನಾಗಿ ನಿರುಪಮನು ॥ ೩೪ ॥

ದೇವ ನಿರವಿಸಿದೀ ಚತುರ್ವಿಧ
ಭಾವ ಬಂಧವ ಬಿಡಿಸಿ ನಿಮ್ಮ ಕೃ-
ಪಾವಲೋಕನ ಮಾತ್ರದಿಂ ಸದ್ಬ್ರಹ್ಮದಲ್ಲಿನ್ನ ‖
ಜೀವನುಂ ಸ್ಥೈತಿರಿಸಿ ಯೆನ್ನಂ
ಪಾವನಾತ್ಮನ ಮಾಡು ದೇಶಿಕ
ದೇವ ಕರುಣಾಭಾವ ಭವವನದಾವ ಮಜ್ಜೀವ ‖ ೩೫ ‖

ಘುಕ್ತಿ ವನಿತಾಸ್ತ್ರಾಂಬುಜದೊಳ
ವ್ಯಕ್ತಲೋಚನಭೃಂಗ ಸಿಲ್ಕಿ
ವ್ಯಕ್ತಮಾದೆನ್ನತ್ತ ನೋಡದೆ ಸುಮ್ಮನಿರ್ದಪನು ‖
ಯುಕ್ತಿಹೀನನ ನಿಂದು ಸದ್ಗುರು
ಸೂಕ್ತಿಯಿಂ ದಯುಗೈಯ್ಯಲೊಲ್ಲನೊ
ಭಕ್ತಿಭಾವನ ಶಸ್ತ್ರದಿಂದಭಿಮುಖವ ಮಾಡುವೆನು ‖ ೩೬ ‖

ನಿಮ್ಮ ಕಾರುಣ್ಯಾವಲೋಕನ
ಸಮ್ಮುದವೆ ಯೆನಗಾಗಬಹುದೇ
ನಿಮ್ಮ ನಿಜಮುಂ ತೋರೆನೆನಲೆಂತು ಬರ್ದುಂಕುವೆನು ‖
ನಿಮ್ಮ ಪದದಲ್ಲಿನ್ನ ಜೀವವ
ನೆಮ್ಮಿಸುವೆ ನಲ್ಲದೆ ಬಳಿಕ್ಕಾಂ
ಸುಮ್ಮನೆಯೆ ಪೋಗುವವನಲ್ತು ಮದೀಯ ಜೀವೇಶ ‖ ೩೭ ‖

ಪಾಪಿ ನಾನೊಂದಧಿಕ ಪಾಪವ
ರೂಪಿಸಿದೆ ನೀ ಪಾಪಮೋ ತನು
ರೂಪಮಾದುದು ಬೆಂದ ತನುವಿದು ಲೋಪವಹತನಕ ‖
ಓಪ ತೋರಣದೆಲೆಯ ಮೆಲಿದಜ
ನಾ ಪರಿಯೊಳಳಿವರಿಯದೇ ವಿಷ
ಯೋಪಚಾರವ* ಮಾಡಿ ದುರ್ಗುಣಿಯೆನ್ನ ರಕ್ಷಿಪುದು ‖ ೩೮ ‖

---

* ಪಾ—ಭೋಗ ಮಾಡಿದ ದುರ್ಗುಣಿ

ಕಾಕುಮತಿ ಕೇಳಲವೊ ನಿನ್ನಂ
ನೂಂಕಿ ಹೋಗೆನೆ ಹೋಗಲೊಲ್ಲದೆ
ಮಾಕದಿಲಿವೆ ಮೂಕುತಿಯ ಮುತ್ತಂ ಮೂಕೊರತಿ ಬಲಿಯ ॥

..................................
ಆ ಕುಟಿಲಗಾಚಾರ ಹೀನಂ
ಗೇಕೆ ತಾನಳವಡುವುದೀ ಗುರುಮತವು ಕೇಳ್ಮರುಳೆ ॥ ೩೯ ॥

ಗುರುವೆ ನೀಂ ಕೃಪೆಮಾಡಲಾಗಳೆ
ಕೊರಡು ಕೊನರ್ವುದು ಬರಡು ಹಯನ*
ಕರೆಯಲದೆ ಪೀಯೂಷನುಹುದೆಂದರಿದು ನಿಮ್ಮಡಿಗೆ ॥
ಶರಣುಹೊಕ್ಕೆನು ಮರಳಿ ಸಂಸೃತಿ
ಶರಧಿಯೊಳು ನೂಂಕಿಯೆ ನಿರರ್ಥಕೆ
ದುರುಳನೆನಿಸದೆ ದೀಕ್ಷೆಯಿಂ ಪರಿರಕ್ಷಿಪುದು ದೇವ ॥ ೪೦ ॥

ಭೃತ್ಯ ಸೋಹಂ ಎಂಬ ವಾಕ್ಯಮೆ
ಸತ್ಯ ವೇದಾಂತಾನುಭವ ದೊ
ಳ್ಪ್ರತ್ಯಗಾತ್ಮ ಬ್ರಹ್ಮದೈಕ್ಯವ ನರಿದು ಮೋಕ್ಷವನು ॥
ಕೃತ್ಯರಹಿತನೆ ಪಡೆದು ಸುಖಿಸಿದು
ನಿತ್ಯಮೇ ನಿನಗೇನು ಬಿಡ ಸಾ
ಹಿತ್ಯಮಂ ಮಾಡೆಂದು ಕಾಡದಿರೆಮ್ಮುಮಂ ಮರುಳೆ ॥ ೪೧ ॥

ಕ್ಷೀರದೊಳು ಘೃತವಿರ್ಪುದೆಂದು ವಿ-
ಚಾರ ಬೋಧೆಯ ಪೇಳ್ವರಲ್ಲದೆ
ಸಾರವಮಂ ಕುರುಹಿಸರು ದೀಕ್ಷಾತ್ರಯಗಳಿಂ ಮಥಿಸಿ ॥
ಚಾರು ಪರತರ ವಸ್ತು ಸಾಕ್ಷಾ
ತ್ಕಾರವಮಂ ಮಾಡುವೊಡೆ ನೀವೆಂ-
ಪಾರಯಿದು ನಿಮ್ಮಡಿಗೆ ಬಂದಾಂ ಶರಣು ಗತಿವೊಕ್ಕೆಂ ॥ ೪೨ ॥

---

* ಕೆಳಗೆ ಗೆರೆ ಹಾಕಿದ್ದು ಸ್ವಂತ ಪಾಠ

ಕಾಯ ಜೀವದ ಹೊಲಿಗೆಯಂ ತಿಳಿ
ದಾಯತವ ನನುಗೊಳಿಸಿದಲ್ಲದೆ
ಸ್ವಾಯತಂ ನೆಲೆಗೊಳದು ಚಿದ್ಘನ ಗುರುವೆ ಮದ್ಗುರುವೆ ||
ತೋಯಮುಂ ಕ್ಷೀರವನು ಬೇರ್ಪಡಿ
*ಪಾಯುವನೆ ಕಳಹಂಸೆ ಬಲ್ಲುದು
ಕಾಯ ಜೀವದ ಸಂದನರಿವೊಡೆ ನೀವೆ ಮನ್ನಾಥ || ೪೩ ||

ಅಹುದಹುದು ಮತ್ತನಯ ನಿನ್ನಂ
ತಿಹಗೆ ಕಣ್ಣಿಡಬಹುದೆ ಪರರಿಗೆ
ಮಹದನಂತ ಬ್ರಹ್ಮ ಸತ್ಯಜ್ಞಾನದಿರವಿಂಗೆ ||
ಅಹಿತ ಸಂಸಾರಾಂಧಕಾರಕೆ
ಮಿಹಿರನಾದ ಮಹಾಸ್ವತಂತ್ರನೆ
ಮಹಿತ ಸಮ್ಯಗ್ ಜ್ಞಾನಿ ನಿನಗಿದಿರಾವುದಖಿಳದೊಳು || ೪೪ ||

ಹರಹರಾ ಮದ್ಗುರುವೆ ನಿಮ್ಮಯ
ಚರಣ ಸಾರಸ ಕಿರಣ ಶಕ್ತಿ
ಸ್ಫುರಣಮೇ ಮನ ಸ್ಫಟಿಕ ಭವನಾಂತರದೊಳೊಪ್ಪಿರಲು ||
ಕರಣ ನಿರ್ಮಲ ಮಾಗಿಯುದರಿಂ
ಪರಮ ನಿಮ್ಮುವ ನರಿವೆನಲ್ಲದೆ
ಯರಿವುದೆನಗೆ ಸ್ವತಂತ್ರ ಮಿಲ್ಲಿನ್ನೊಂದನವಧರಿಸೆ || ೪೫ ||

ಶಿಷ್ಟ ದೇಹಮೆ ಪೀಠಮಾತ್ಮಕ
ನಿಷ್ಟಮಾಗಿರೆ ಬೇರೆ ಕುರುಹಿಗೆ
ಕಷ್ಟದಿಂ ಬೇವಧಿಕ ನಿರವಯಮುಂಟೆ ಜಗದೊಳಗೆ ||
ನಷ್ಟಮಂ ಕರದಲ್ಲಿ ಪಿಡಿದಾ
ದೃಷ್ಟಮಂ ಸಾಧಿಸುವೆನೆಂದೊಡೆ
ಶ್ರೇಷ್ಠ ನಿಜಮದು ಸಾಧ್ಯವಹ ಪರಿಎಂತುಮನ್ನಾಥ || ೪೬ ||

---

* ಟಿ—ಅಯ—ಮರ್ಮ, ಗುಟ್ಟು

ಸಂತತೇಷ್ಟ ಪ್ರಾಣ ದಿರವಂ
ಮುಂತೆ ಬಲ್ಲವರಾರು ಬಾಹ್ಯ ಮಿ
ದಂತರಂಗಕೆ ಮುಂದುದೋರ್ಪುದು ಮನವನೆಡೆಗೊಂಡ[೧] ॥
ಸಂತದರಿವದು ವ್ಯಾಕುಲಕೆ[೨] ಬರ
ದಂತೆ ಭಾವಜ್ಞಾನ ಸುಮನೋ
ನಂತ ನೋಟವ ತಂದು ನಿಕ್ಷೇಪಿಸಿ ಕರಾಗ್ರದೊಳು ॥ ೪೭ ॥

ಸಂಗತಾಂತರ್ಬಾಹ್ಯ ವರಿಯದೆ
ಪಿಂಗದನಿಮಿಷನಾಗಿ ಚಿದ್ಘನ
ಲಿಂಗಮುಖಮಂ ನೋಡಿ ಪರಿಣಮಿಪುದಕೆ ಮಣಿಮಯದ ॥
ತುಂಗ ದರ್ಪಣವಿಡಿದಿಹರು ಶಿವ
ಸಂಗಿಗಳು ನಿಜಪದವ ನೈದಲು
ಹಿಂಗೆ ಕುರುಹಿಂ ಕುರುಹ ಗೆಲಬೇಕಯ್ಯ ಕೇಳ್ಮಗನೆ ॥ ೪೮ ॥

ದೇವ ದೇವ ಹಸಾದ ಜೀವ ಕೃ
ಪಾವಲೋಕನ ಲೋಕಪಾವನ
ಭಾವ ನಿರ್ಭಾವಾನುಭವ ಮಜ್ಜೀವ ಇದನೆನಗೆ ॥
ಈವುದೆನ್ನಂ ಕಾವುದಿದರಿಂ
ಜೀವಿಸುವೆ ನಿನ್ನಾವ ಗತಿ ಯಿ
ಲ್ಲಾವಗಂ ಬಿಡದೋವು ಮದ್ಗುರುದೇವ ನಿಜಭಾವ ॥ ೪೯ ॥

ವ್ಯಕ್ತ ಶಿವ ಕರುಣಾ ಕಟಾಕ್ಷದ
ಶಕ್ತಿಯಿಂ ವಿನಿವೃತ್ತಿ ಶಕ್ತಿಯ
ಯುಕ್ತಿ ಶಕ್ತಿಯನರಿದು ನಾಂ ಪ್ರತ್ಯಕ್ಷಮಾಗಿವಗೆ ॥
ಮುಕ್ತಿಯಂ ಪಾಲಿಸದೆ ಪೋಪುದು
ಮುಕ್ತಿಯುಲ್ತೆಮಗೆಂದು ತಾನು
ದ್ವ್ಯಕ್ತನಾದಂ ಕರುಣಿಸಲ್ನಿಜ ದೇಶಿಕೋತ್ತಮನು ॥ ೫೦ ॥

---

* ಪಾ—೧ ಗೊಂಡು. ೨ ವ್ಯಾಕುಲತೆ.

ನೂತನ ಪ್ರಖ್ಯಾತ ಮಹಿಮ ಪು
ರಾತನ ಪ್ರಮಥಾ ತುಮಾಬ್ಜ ನಿ-
ಕೇತನ ಸ್ವಪದಾತಿಗ ಪರಂಜ್ಯೋತಿಲಾಕಾರ ||
ಪೂತನವ್ಯಾಜಾತ ಶರಣ
ವ್ರಾತ ನತಪದ ವೀತಕಲುಷ ಸ-
ನಾತನಾನಂದಾತಿಶಯ ಮಸ್ನಾಥ ಜಯಜಯತು || ೫೧ ||

ಇದು ಸಮಸ್ತ ಶಿವಾನುಬೋಧರ ಪದ ಪಯೋರುಹ ಗಂಧಮದ
ಷಟ್‌ಪದನು ಷಟ್‌ಸ್ಥಲ ಸಾರ್ವಭೌಮಂ ಚೆನ್ನ ವೃಷಭೇಂದ್ರಂ ||
ವಿದಿತಮಾಗಿ ನಿರೂಪಿಸಿದ ಸಮ್ಮುದ ಮಹಾಕ್ಷೇತ್ರಜ್ಞ ಸುಮನಃ
ಕದನದೊಳು ಗುರುಕರುಣ ವಿವರಣೆ ಗಷ್ಟಮಸ್ಥಲವು || ೫೨ ||

ಇತಿ ಕ್ಷೇತ್ರಜ್ಞ ಸುಮನೋವಾದೆ ಗುರುಕಾರುಣ್ಯ
ವಿವರಣಮಷ್ಟಮ ಪ್ರಕರಣಂ || ಅಂತು
ಸ್ಥಲವೆಂಟಕ್ಕಂ ಪದಂ ೫೩೩ಕ್ಕಂ
ಸಮಾಪ್ತಂ || ಮಂಗಳಮಹಾ

ಶ್ರೀ ಶ್ರೀ ಶ್ರೀ

ಶ್ರೀಗುರು ಬಸವಲಿಂಗಾಯನಮಃ

# ಒಂಬತ್ತನೆಯ ಸಂಧಿ

## ದೀಕ್ಷಾ ವಿಧಾನ ಸ್ಥಲಂ

ತನ್ನ ನಿಜಮಂ ತೋರಿ ಶಿಶುವಿನ
ಭಿನ್ನ ಭಾವಮನಳಿದು ಕರದೊಳ
ಭಿನ್ನ ಲಿಂಗಮನಿತ್ತು ಸಲಹಿದನಾದಿ ದೇಶಿಕನು ॥ ಪಲ್ಲವಂ ॥

ಸ್ವೀಕೃತಾಗಮಸಾರ ತತ್ವತೃ
ಣೀಕೃತಾಖಿಳ ಕ್ರೂರವಿಷಯ ನಿ
ರಾಕೃತಾತ್ಮಕ ವೈರ ನಿಜಗರ್ಭೀಕೃತಾನುಭವ ॥
ಪ್ರಾಕೃತಾತ್ಮಕ ದೂರ ಮಹದಂ
ಗೀಕೃತೈಕ್ಯವಿಚಾರ ವಿಜಿತ ಕೃ
ತಾಕೃತಾತ್ಮಕರಾಲಿಪುದು ನಲಿದೀ ಕೃತಿಯನೊಲಿದು ॥ ೧ ॥

ಸದ್ಗುರುವೆ ಭವಭಿದ್ಗುರುವೆ ಸುಖ
ಕೃದ್ಗುರುವೆ ಸುಮಹದ್ಗುರುವೆ ನಿಜ
ವಿದ್ಗುರುವೆ ಶಶ್ವದ್ಗುರುವೆ ನಿತ್ಯಾದ್ಗುರುವೆಪೂರ್ಣ ॥
ಚಿದ್ಗುರುವೆ ಬಲವದ್ಗುರುವೆ ಶಿವ
ಪದ್ಗುರುವೆ ಸಮ್ಮುದ್ಗುರುವೆ ಶಿವ
ವಿದ್ಗುರುವೆ ವಿಲಸದ್ಗುರುವೆ ಘನದುದ್ಗುರುವೆ ಜಯತು ॥ ೨ ॥

ಎಂದು ಹಸ್ತದ್ವಂದ್ವ ಮುಕುಳಿತ
ದಿಂದೆ ಗುರುವಿನ ಮುಂದೆ ನುತಿಸುತೆ
ನಿಂದಿರಲ್ಕಾನಂದಮಯದಿಂ ಬಂದಭಯಕರವಂ ||
ತಂದು ಕೋ ಕೋ ಎಂದು ಭಯ ಬೇ
ಡೆಂದು ಕರುಣಾಸಿಂಧು ಜಲದಿಂ
ದೊಂದಿ ಮೀಯಿಸಿ ತಂದು ಶಿವಗಣವೃಂದಮಧ್ಯದೊಳು || ೩ ||

ಮೋಕ್ಷ ಮಂದಿರವೆಂಬ ಮಂಟಪ
ವಾಕ್ಷಣದೊಳತ್ಯಂತ ಶೋಭನ
ಲಕ್ಷಣದೆ ಶೃಂಗರಿಸಿ ತನ್ಮಂಟಪದ ಮಧ್ಯದೊಳೂ ||
ಈಕ್ಷಿಸುತ್ತೈ ಮೂಲೆಯೊಡನೆ ಸ
ಮಕ್ಷಮಾಗಿಹ ಪಂಚ ಮುದ್ರೆಯ
ಲಕ್ಷವಿಟ್ಟುದ್ಧರಿಸಿ ತನ್ಮುದ್ರಾಂಗ ಬಾಹ್ಯದೊಳು || ೪ ||

ಪಂಚಕಲೆಯಿಂ ವ್ಯಾಪಿಸಿದ ಸ-
ತ್ಪಂಚ ಶಕ್ತ್ಯಾತ್ಮಕ ದೊಳೊಪ್ಪುವ
ಪಂಚ ವರ್ಣದ ತಂಡುಲದೊಳಾದೊಡ ಮತಿಶ್ವೇತ ||
ಸಂಚ ತಂಡುಲ ಮಾದೊಡೈದೆ ಸ
ಮಂಚಿತದ ಮಂಡಲವ ನಿರಚಿಸಿ
ಪಿಂಚಿಪಸೆ ರೂಪಿನೊಳು ಚೌಕಮನಿಕ್ಕೆ ಬಾಹ್ಯದೊಳೂ || ೫ ||

ಪದ್ಮದಲ್ಲಿ ಸವೃತ್ತಕೇಸರ
ಪದ್ಮಮಂ ಬರೆದಾಪ್ರಣವಮಂ
ಪದ್ಮಮಧ್ಯದೊಳಿರಿಸಿ ಪಂಚಾಕ್ಷರಮನಾ ಪಂಚ ||
ಸದ್ಮದೊಳು ನೆಲೆಗೊಳಿಸಿ ರಾಜಿಪ
ಛದ್ಮ ಪಂಚಬ್ರಹ್ಮಮಂ ಸತ್
ಪದ್ಮಕಿಂಜಲ್ಕದೊಳು ಸುಪರ ಬ್ರಹ್ಮಮಂ ನಿಲಿಸಿ || ೬ ||

ಮಂತ್ರಮಯ ರಾಜಿತ ಸದನದೊ
ಳ್ತಂತ್ರದಿಂ ಸಂಪೂರ್ಣ ಕಳಶಗ
ಳಂತ್ರಿಣೇತ್ರಂ ತಂದು ಮಧ್ಯದೊಳೊಂದ ನೆಲೆಗೊಳಿಸಿ ||
ಯಂತ್ರ ವಾಹಕ ನೈದನಾ ಸ್ವಾ
ತಂತ್ರ ಪಂಚಾಲಯಮೊಳಿರಿಸಿಯೆ
ಮಂತ್ರ ರೂಪಾದಮಲ ಷಟ್ಕಳಶವನು ದೇಶಿಕನು || ೭ ||

ಚಿತ್ರದಿಂದವೆ ಸುತ್ತಿ ನಿರ್ಮಲ
ಸೂತ್ರದಿಂ ದೂರ್ವಾಮ್ರ ಕುಶಗಳ
ಪತ್ರಿಗಳನಿರಿಸುತ್ತೆ ಪೂಜಿಸಿ ಮಂತ್ರವಿಧಿಯಿಂದೆ ||
ಸ್ತೋತ್ರಮಂ ಸಲೆಮಾಡಿ ನಿಜ ಸತ್
ಪುತ್ರನುತ್ತರ ಮುಖನಾಗಿಸಪ
ವಿತ್ರನೆನ್ನಂ ಪೂರ್ವ ಮುಖಮಾಗಿಯೆ ನಿಯಾಮಿಸುತೆ || ೮ ||

ಖ್ಯಾತ ಋತ್ವಿಕ್ಕುಗಳಿನೊಲಿದೆರೆ
ದೋತು ಕಳಶೋದಕವ ಮೂರ್ಸೊಳ್
ಪೂತ ಸಮ್ಯಕ್ ಜ್ಞಾನದಭಿವೃದ್ಧಿಗೆ ಮಹಾಶಕ್ತಿ ||
ಪಾತಮಂ ತವೆ ಮಾಡಿ ಕರಜಲ
ಜಾತಮಂ ಶಿರಕಿಟ್ಟು ಚಿದ್ಭ್ರ-
ಹ್ಮಾತಿಶಯ ಕಳೆಯಂ ಚಿದಭ್ರುವ ಬಿಡಿಸಿ ತಂದದನು || ೯ ||

ಮೆಲ್ಲಮೆಲ್ಲನೆ ಭಾವ ಮನನಗ
ಳಲ್ಲಿ ಕುಳ್ಳಿರಿಸಿದನರಿವು ಮನ
ವಲ್ಲಿ ನೆಲೆಗೊಳಿಸುತ್ತೆ ನೇತ್ರಕೆ ತಂದು ಸುವಿನಯದಿ ||
ಖುಲ್ಲ ಸಂಸಾರಾಬ್ಧಿ ಚಿತ್ರಸ
ಮುಲ್ಲಸನ್ಮಂತ್ರವನು ಬಲಗಿವಿ
ಯಲ್ಲಿ ಋಷ್ಯಧಿದೈವ ಛಂದದ ರೂಪುಗಳ ಪೇಳಿ || ೧೦ ||

ಲಿಂಗದೊಳು ಶಿವನಧಿಕಮಾಗೆ ಕ
ಡಂಗಿ ಮೃತ್ಯು, ದರಿದ್ರ ಮಾ ಶ
ಕ್ತ್ಯಂಗ ಮಥಿತಮದಾಗೆ, ಶಿವಶಕ್ತಿ ಸಮಾನತೆಯಿಂ ॥
ಮಂಗಳೋನ್ನತ ಭೋಗ ಮೋಕ್ಷಂ
ಸಾಂಗ ಮಪ್ಪುದರಿಂ ಮಹಾಘನ
ಲಿಂಗ ಮೂರ್ತಿಯ ಪಂಚ ಲಕ್ಷಣಮಂ ಪರೀಕ್ಷಿಸಿಯೆ ॥ ೧೧ ॥

ಪಂಚಗವ್ಯ ಸುತೀರ್ಥ ಜಲ ಭ
ಸ್ಮಾಂಚಿತೋದಕದಿಂ ತ್ರಿ ರಾತ್ರಿಗ
ಳಿಂ ಚದುರಿನೊಂದೊಂದು ರಾತ್ರಿಯೊಳಿರಿಸಿ ನೂರೆಂಟು ॥
ಪಂಚ ಮಂತ್ರಗಳಿನಭಿ ಮಂತ್ರಿಸಿ
ಸಂಚದಿಂ ನಾಲ್ಕನೆಯ ರಾತ್ರಿಗೆ
ಮುಂಚೆ ಕಳಶ ಸ್ಥಾಪನಕ್ಕುತ್ತರದಿಶಾಂಗದೊಳು ॥ ೧೨ ॥

ಇಳೆಯ ಶುದ್ಧಂ ಮಾಡಿಯಷ್ಟಕ
ದಳದ ಪದ್ಮವ ತುಂಬಿ ಬಿಳಿದೇ
ಳ್ಮೊಳದ ವಸ್ತ್ರದೊಳವರ ಮೇಲೊರ್ಮೊಳನ ನಾವರಿಸಿ ॥
ಬಳಿಕ ಸಾವೆಯ ನದರ ಮೇಲಂ
ಗುಳದ ದಟ್ಟಕೆ ಹರವುತಷ್ಟಕ
ದಳ ನಳಿನಮಂ ಲಿಖಿಸಿ ವಸನವನೊರ್ಮೊಳನಮುಚ್ಚಿ ॥ ೧೩ ॥

ಮತ್ತದರ ಮೇಲ್ತಿಲವನುರೆ ಪರ
ಡುತ್ತ ಮಷ್ಟದಳಾಬ್ಜಮಂ ಬರೆ
ವುತ್ತೆ ಚೇಲಮನೊಂದು ಮೊಳನಂ ಬಾಸಣಿಸಿ ಬಳಿಕ ॥
ಇತ್ತ ಗೋದುವೆಯಂ ವಿಕೀರ್ಣಿಸಿ
ಯುತ್ತಮಾಷ್ಟ ದಳಾರವಿಂದವ
ಬಿತ್ತರಿಸುತಂಶುಕಮನೊಂದು ಮೊಳವನು ಮುಸುಕಿಟ್ಟು ॥ ೧೪ ॥

ಅದರ ಮೇಲುರೆ ತಳಿದು ನೆಲ್ಲಂ
ಪದಪಿನಷ್ಟದಳಾಂಬುಜವನ
ಭ್ಯುದಯದಿಂ ವಿಸ್ತರಿಸಿ ವಾಸವನೊಂದರತ್ನಿಯನು ||
ಪೊದಿಸಿ ಸಿತ ತಂಡುಲವ ಪಸರಿಸಿ
ಮುದದೊಳಷ್ಟದಳಾರ್ಣಜಾತವ
ನೊದವಿಸುತ್ತಾಚ್ಛಾದನವ ನೊರ್ಮ್ಮೆಳನ ಪಚ್ಚಡಿಸಿ || ೧೫ ||

ಓತಪಾಮಾರ್ಗ್ಗಾಮಳಕ ಕುಶ
ಚೂತ ಬಿಲ್ವಿದ ಪತ್ರಿಗಳ ಸಂ
ಪ್ರೀತಿಯಿಂ ಬಿದಿರುತ್ತು ಮಾಚ್ಛಾದಿಸುತೆ ವಸನವನು ||
ಈ ತೆರೆದೊಳೇಳ್ನೆಲೆಯ ಕಲ್ಪಿತ
ನೂತನಾರುವ ಸ್ಥಲಂ ಪರಿ
ಪೂತ ಮಾಗಲ್ನಿರ್ಮ್ಮಿಸಿಯೆ ಬಳಿಕದರ ಮೇಲನುವಿಂ || ೧೬ ||

ಆ ಮಹಾಘನ ಲಿಂಗ ಮೂರ್ತಿಯ
ಗೋಮುಖೋತ್ತರ ಭಾಗವಾಗಿ
ಪ್ರೇಮದಿಂದ ನೆಲೆಗೊಳಿಸಿ ಸೀತ್ಕಾರಾದಿಕ ಪ್ರಾಣಾ ||
ಯಾಮದಿಂ ಸನ್ಮೂಲಮಂತ್ರವ
ನಾಮುದಾಂಗಿ ಸಹಸ್ರ ಜಪವಂ
ನೇಮದಿಂ ಜಪಿಸುತ್ತೆ ಲಿಂಗಕ್ಕಾಗಮ ಕ್ರಿಯೆಯಿಂ || ೧೭ ||

ಪೂರಿತ ಕಲಾ ಮಾತೃಕಾದಿ ವಿ
ಚಾರ ಮಂತ್ರ ನ್ಯಾಸ ಮುಖ್ಯಾ
ಚಾರದಿಂದ ಪ್ರಾಣಪ್ರತಿಷ್ಠೆಯ ಮಾಡಿ ತತ್ಕಲಶ ||
ವಾರಿಯಿಂ ಸ್ನಪನವ ನೊಡರ್ಚ್ಚಿಸಿ
ಚಾರು ಸದ್ಗುರು ತನ್ನ ಕರದಿಂ
ಗೌರವಾಷ್ಟ ವಿಧಾರ್ಚ್ಚನೆಯನೆಸಗಿ ಈ ಪ್ರಕಾರದೊಳು || ೧೮ ||

ಶ್ರೀಷ್ಠ ಮಂತ್ರದಿ ಶುದ್ಧವಾಗಿ
ರ್ದ್ದಿಷ್ಟದಲ್ಲಾ ಹ್ವಾನದಿಂದು-
ತ್ಕೃಷ್ಟ ಶಿವಕಳೆಯಂ ಪ್ರತಿಷ್ಠಿಸಿ ತೊಲಗದಿನ್ನೆಂದು ||
ಶಿಷ್ಟ ಶಿವನಾಜ್ಞಾಪಿಸುತೆ ತಂ
ದಿಷ್ಟದೊಳ್ಪ್ರಾಣವನು ಪ್ರಾಣದೊ
ಳಿಷ್ಟವಂ ನೆಲೆಗೊಳಿಸಿ ಯೊಂದೆನಿಸಿತ್ತು ಕರದಲ್ಲಿ || ೧೯ ||

ಲೋಲ ಕಾಯ ಪ್ರಾಣ ಮಾನಸ
ಕಾಲ ಕರ್ಮ ಮಲತ್ರಯಂಗಳ
ಕೀಲ ಕಳೆದಾ ಪ್ರಾಜ್ಞ ತೈಜಸ ವಿಶ್ವಜೀವಗುಣ ||
ಜಾಲಮಂ ಬರಿಕೆಯ್ದು ಸದ್ಗುರು
ಲೀಲೆಯಿಂದಂಗ ತ್ರಯಂಗಳ
ಮೇಲೆ ಲಿಂಗತ್ರಯವನನುವಿಂ ಸ್ಥಾಪಿಸುತೆ ಬಳಿಕ || ೨೦ ||

ಏಕವಿಂಶದ್ದೀಕ್ಷೆಯಂ ಕರು
ಣಾಕರಂ ತನು ಮನ ಸುಭಾವಕೆ
ಬೇಕು ಮಾಡಿ ಶರೀರ ಸುಮನೋಜ್ಞಾನ ಭಾವಗಳಂ ||
ಪ್ರಾಕಟಂ ಮಿಗೆ ನಲವಿನಿವನೇ
ಕೀಕರಿಸಿ ಕರದಲ್ಲಿ ಧರಿಸಿ
ಸ್ವೀಕರಿಸು ನಿಜದೃಕ್ಕಿದೆಂದೊರೆದನು ಗುರೂತ್ತಮನು || ೨೧ ||

ಲಿಂಗಚೇತನ ವಂಗದಲ್ಲಿಹು
ದಂಗ ಚೇತನ ಲಿಂಗದಲ್ಲಿಹು
ದಂಗ ಲಿಂಗ ಪ್ರಾಣ ಚೇತನವೆರಸಿ ನಿನಗಿಷ್ಟ ||
ಸಾಂಗದಿಂ ಕರ್ಪೂರ ಸೌರ
ಭ್ಯಂಗಳಂ ತನುಪಮುಮಭೇದಂ
ಲಿಂಗಮಂ ಪೂಜಿಸಿಯೆ ಸುಖಮಿಹುದೆಂದ ದೇಶಿಕನು || ೨೨ ||

ಇದು ನಿಮಿತ್ತಂ ದೇಶಿಕೇಂದ್ರನ
ಪದ ಪಯೋಜಪರಾಗ ಮಧುಕರ
ವಿದಿತ ನಿಷ್ಠಾಚಾರ ಭಾವಸಮೇತ ನೆನಿಪಾನು ||
ಪದೆದು ಸಂಸಾರದೊಳು ಸೌಖ್ಯಾ
ಭ್ಯುದಯಮಿಲ್ಲೆಂದರಿದು ಗುರು ಕರು
ಣದೊಳು ಸಮ್ಯಕ್ ಜ್ಞಾನ ಲಿಂಗವ ಪಡೆದೆ ನೆಂತೆನಲು || ೨೩ ||

ಅರಿವನಾವರಿಸಿತ್ತು ಮರವೆಯೆ
ಮರವೆಯುಂದುರ್ಮ್ಮಾಯೆ ಮಾಯೆಯ
ನರಿಯೆ ಕರ್ಮ್ಮಂ ಕರ್ಮ್ಮಮುಂ ತನು ತನುವ ಸಂಸಾರಂ ||
ಬರಿಯ ಸಂಸಾರದೊಳು ವರ್ತ್ತಿಸಿ
ಮರಹು ಬಂದಪುದೆಂದಪಂ ಪಳಿ
ದರಿವಿನಿಂ ಲಿಂಗವನು ಪಡೆದಿರಿಸಿದೆನದರೊಳರಿವಂ || ೨೪ ||

ಅರಿವು ತಲೆದೋರ್ದ್ದಲ್ಲದಳಿಯದು
ಮರಹು ಮರಹಳಿದಲ್ಲದೆಯೆ ಮಹ
ದರಿವು ನಿಜವಲ್ಲರಿವು ನಿಜಮಾಗಿಂಬುಗೊಳೆ ಬಳಿಕ ||
ಅರಿಯೆ ಗುರುವಾರ್ಲ್ಲಿಂಗ ಮಾವುದು
ಕಿರಿದು ಘನತರ ಮಾವವೆಲೆ ನೀ
ನರಿದು ಮರೆದುಪದೇಶ ವಡೆದೊಡೆ ಸಹಜಮೆಂತಹುದು || ೨೫ ||

ಅರಿದೊಡಲ್ಲದೆ ಗುರುಮೆ ಕಾಣಿಸ
ನರಿದೊಡಲ್ಲದೆ ಲಿಂಗವರಿಯಿಸ
ದರಿದೊಡಲ್ಲದೆ ಜಂಗಮಾನುಭವ ಪ್ರಸಾದಗಳು ||
ಅರಿಸವಿಂತು ಚತುರ್ವ್ವಿಧಂ ತಾ
ನರಿವಿನಿಂ ನೆಲೆಗೊಂಡಿಹುವು ಮಹ
ದರಿವಿದೇ ನೀ ಲಿಂಗ ಸಂಬಂಧಕ್ಕೆ ಪಗೆಯಹುದು || ೨೬ ||

ಸ್ವಾಯದಿಂ ಗುರು ಲಿಂಗ ಚರ ಶೇ
ಷಾಯತಂ ಗುರುವಿಂದೆನಲ್ನಿಜ
ಕಾಯ ಮಾನಸ ಮಿಲ್ಲದಿರಬೇಕರಿವರತು ಮರಹು ॥
ವಾಯುವಾಗಿಯೆ ಲಿಂಗದೊಳು ನಿ
ರ್ಮ್ಮಾಯ ನಾದಲ್ಲದೆ ವಿಚಾರ
ಸ್ವಾಯತಂ ನಿನಗೇ ಪರಿಯೊಳಾಯ್ತಯ್ಯ ಪರಿಕಿಪೊಡೆ ॥ ೨೭ ॥

ತನುವಿನೊಳ್ಪೊರೆ ಮನದೊಳತಿ ಚಿಂ
ತನೆ ವಿಭಾವದೊಳೀಪ್ಸೆಯರಿವಿನೊ
ಳನು ವಿಚಾರಂ ನಿಜದೊಳವಧಾನಾದಿ ಗುಣವೆಲ್ಲಂ ॥
ಸನುಮತಂಬಡೆದನುಭವಾಗಮ
ದನುವಿನಿಂ ನಿರ್ಲ್ಲೇಪ ಸಂಗದೊ
ಳನಘ ಮತಿ ಬೆಚ್ಚಂತೆ ಬೆರಸಿ ವಿಭೇದ ಮಳಿದಿಹವು ॥ ೨೮ ॥

ತನುವಿನಲ್ಲಿಹ ಲೋಭಮಂ ತ
ನ್ಮನದೊಳಗೆ ಮಾತಾಡೆ ತನುವೇ
ಘನ ಮನೋರೂಪಾಗಿ ತೋರ್ಪುದು ಭಾವದಾಕಾಂಕ್ಷೆ ॥
ಮನದೆ ಸಮರತಿಯಾಗದಾಗಿಯೆ
ವಿನುತ ಕಾಮದ ಕಡುವಿಲೋಭದ
ಕನಲೊಳಿಹುದಾನರಿದೆನೆಂದುಸುರಿದೊಡೆ ಮೆಚ್ಚುವರೆ ॥ ೨೯ ॥

ಅಂಗದೊಳ್ಗುರುಕಾಯ ಕರದೊಳು
ಲಿಂಗಮೀ ಕ್ರೋಧೇಕ್ಷಣದೊಳಾ
ಜಂಗಮು ಸ್ವಾಯತವ ಮಾಡಿದೆ ನೀ ಪ್ರಸಾದವನು ॥
ಸಂಗತಾಧಿಕ ಲೋಭಮಿಲ್ಲದ
ಹಾಂಗೆ ಗ್ರಹಿಸಿದೆ ನೀ ಚತುರ್ವಿಧ
ದಂಗಮೇ ನೆಲೆಯಾಗಿ ಕಾಂಕ್ಷೆ ನಿರಾಶ್ರಯದೊಳಿಹುದು ॥ ೩೦ ॥

ತನುಮನೋಗುಣವಳಿದೊಡೇನುಭ
ಯನುತ ಭಾವವನಳಿಯಬೇಕಾ
ವಿಸಯ ಭಾವಂ ಕೆಡದಿರಲ್ಮೃಹದರಿವು ನೆಲೆಗೊಳದು ||
ಘನಪರಿವು ನೆಲೆಗೊಳಲು ಕುರುಹಿಂ
ಗನುಪಮದ ಕುರುಹಳಿದಖಂಡೈ
ಕನಿಜಮಂ ಬೆರಸುವ ಸುಖಂ ನಿನಗೆಂತು ಸಮನಿಪುದು || ೩೧ ||

ಈ ಪ್ರಸಾದವನುಂಡೆನಾಗಿ ಮ
ಹಾಪ್ರಪೂಜೆಯೆ ಶುದ್ಧಮಾಗಿಹು
ದಪ್ರಮಾಣಪ್ರಾಣಲಿಂಗವನರಿದೆನಾಗಿಲ್ಲಿ ||
ಸ್ವಪ್ರಕಾಮ ಕ್ರೋಧ ಭಾವಾ
ದಿ ಪ್ರಣಾಶನ ಮಾದವೆಲೆ ಪೂ
ರ್ವ ಪ್ರಕಾಶಜ್ಞಾನದಿಂ ನೆರೆಯರಿದ ಕಾರಣದಿ || ೩೨ ||

ಆದಿ ಘನದಿಂ ಬಂದ ಪರಿಯಂ
ಭೇದವಿಲ್ಲದೆ ನಿಂದ ಪರಿಯಂ
ನಾದ ಬಿಂದು ಕಳಾ ಸ್ವರೂಪಿನೊಳೊಂದಿರುವ ಪರಿಯಂ ||
ನೋದ ನಿಜ ನಿರ್ಲೇಪ ಸಂಗದೊ
ಳೆಯ್ದಿ ಸಂದಿಹ ಪರಿಯನರಿ ಪೂ
ರ್ಣೋದಯಾಖಂಡೈಕಬೋಧಾರಸಮಯಂ ತಾನೆ || ೩೩ ||

ವ್ಯಾಪಕನೆ ಕೇಳ್ನಾದ ಬಿಂದು ಕ
ಳಾಪರಿಮಿತ ಸ್ಪರ್ಶನದೊಳಿ
ರ್ದ್ದೇಪರಿಯೊಳಾ ಕಾಲಕರ್ಮಕ್ಕಂಜಿ ಸಂಸಾರಂ ||
ಲೋಪವಾಗದೆ ಕಡಗಿ ಬಂದು ಗು
ರೂಪದೇಶವ ಪಡೆದು ನಿಜ ನಿ
ರ್ಲೇಪ ಸಂಗದೊಳೊಂದಿ ನಿಂದಿಹೆನೆಂಬುದೆಂತಯ್ಯ || ೩೪ ||

ಲಿಂಗಸಂಗವೊಳೀಗ ದೇಹವೆ
ಲಿಂಗವೆಂಬುದು ಸಹಜವಲ್ತಹು
ದಂಗದೊಳು ಸೇರಿಯುರಿವ ಮುನ್ನ ಜ್ಯೋತ್ರಿದವಿರಳವೆ ॥
ತುಂಗ ಕಾಷ್ಠಾಂತರ್ಗತಾಗ್ನಿತ
ದಂಗದಿಂ ಪೊರಮಟ್ಟ ತೆರದಿಂ
ಲಿಂಗಮುಹುದು ಶರೀರವರಿಯೆ ಗುರೂಪದೇಶದೊಳು ॥ ೩೫ ॥

ಲಿಂಗಸಂಬಂಧವನು ಪಡೆವಡೆ
ಸಾಂಗದಿಂ ನಿಕ್ಷೇಪ ಧಾರಣೆ
ಯಂಗವಾಗಿರಬೇಕು ಗುರುವೆಂಬಂಜನಂ ಶಿಷ್ಯಂ ॥
ಸಂಗತಿಯು ಪಾಯೊಳು ಕಡವರ
ಲಿಂಗವರಿವಾಚಾರ ಮುಭಯವೆ
ತುಂಗ ದಿಗ್ಬಂಧನವೆನಿಸಿ ಪರಿಪೂರ್ಣವಾಗಿಹುದು ॥ ೩೬ ॥

ಕಂಗಳಿಂ ಗುರು ಸಿಂಗಲಾವೃತ
ಭಂಗವೇಂದೀ ಲಿಂಗವುಂ ತನು
ಸಂಗವೆನಿಸಲ್ಕಂಗವಳಿದೀ ಲಿಂಗ ಸಮರತಿಯಿಂ ॥
ಮಂಗಳಾತ್ಮ ಮಸಂಗಳೆಲ್ಲಂ
ತುಂಗ ಗುರು ಚರ ಲಿಂಗ ಶೇಷ ಸು
ಸಂಗದಿಂದವರಂದವಾದುವಡಂಗಿದುದು ಜನನಂ ॥ ೩೭ ॥

ನಾದ ಬಿಂದು ಕಳಾತಿಶಯ ಪೂ
ರ್ಣೋದಯಾಖಂಡೈಕ ರಸಮಯ
ವೇದ ವೇದಾಂತಾವಗಮ್ಯಾನಾದಿಪರತತ್ವ ॥
ಮೋದಿ ತಾಷ್ಟತ್ರಿಂಶ ಸುಕಳಾ
ಭೇದರಹಿತಬ್ರಹ್ಮವನು ಸತ
ತೋದಿತಂ ಗುರು ಕರುಣಿಸಲ್ ದೃಢವಿಡಿದು ಬದುಕಿದೆನು ॥ ೩೮ ॥

ಕರ್ಮವಶದಿಂದಾದ ತನುಕರ
ಣೋರ್ಮಿವಿಷಯೇಂದ್ರಿಯ ಮಹಾದುಷ್
ಕರ್ಮಪೂರ್ವಾಶ್ರಯಪವನಳಿದೊಳಹೊರಗೆ ಲಿಂಗವನು ॥
ಧರ್ಮ ಗುರು ಪರಿಪೂರ್ಣವೆನಿಸಲ್
ಸೂರ್ಮ್ಮಡಿಸಿ ಎನ್ನೊಡನೆ ಜನಿಸಿಯೆ
ಕೂರ್ಮೆಯಿಂ ನೀವೆಲ್ಲರುಂ ಸುಖಿಯಾದಿರ್ಪೈ ಭಲರೆ ॥ ೩೯ ॥

ಸ್ವಾನುಭಾವಾದ್ಯಂತರಹಿತ ಕೃ
ಪಾನಿಧಾನ ಶ್ರೀ ಗುರೂತ್ತಮ
ಮಾನಿತೋನ್ನತ ತನ್ನ ಕರುಣದ ಮಂತ್ರ ಲಿಂಗದೊಳು ॥
ಜ್ಞಾನ ನಿಷ್ಠಾ ಚಾರವನು ಸಂ
ಧಾನಮಂ ಮಾಡಿತ್ತು ಕರದೊಳ
ನೂನಮಾಗಾಚರಿಪುದೆಂದು ನಿರೂಪಿಸಿದನೊಲಿದು ॥ ೪೦ ॥

ಅಭವ ಜಯ ನಿರ್ಮಾಯ ಜಯಜಯ
ಶುಭಗ ಜಯ ಪರಿಪೂರ್ಣ ಜಯಜಯ
ಅಭಯಕರ ಜಯ ಸಚ್ಚಿದಾನಂದೈಕ ಜಯ ಜಯತು ॥
ಪ್ರಭುವೆ ಜಯಮೋಕ್ಷದನೆ ಜಯಜಯ
ವಿಭುವೆ ಜಯ ಸರ್ವಜ್ಞ ಜಯಜಯ
ಕುಭವಹರಜಯ ಕರುಣನಿಧಿ ಮದ್ಗುರುವೆ ಜಯ ಜಯತು ॥ ೪೧ ॥

ಇದು ಸಮಸ್ತ ಶಿವಾನುಭಾವರ
ಪದಪಯೋರುಹಗಂಧಮುದಷ
ಟ್ಪದನು ಷಟ್‌ಸ್ಥಲಸಾರ್ವಭೌಮಂ ಚೆನ್ನವೃಷಭೇಂದ್ರಂ ॥
ವಿದಿತಮಾಗಿ ನಿರೂಪಿಸಿದ ಸ-
ಮ್ಮುದಮಹಾ ಕ್ಷೇತ್ರಜ್ಞ ...
ಕದನದೊಳು ದೀಕ್ಷಾವಿಧಾನಕೆ ಸುನವಮ ಸ್ಥಲವು

ಇತಿ ಕ್ಷೇತ್ರಜ್ಞ ಸುಮನೋವಾದೇ ದೀಕ್ಷಾವಿಧಾನವಿವರಣಂ
ನವಮ ಪ್ರಕರಣಂ ॥ ಅಂತು ಸ್ಥಲ ಒಂಭತ್ತಕ್ಕಂ ಪದನು
೫೭೭ಲಕ್ಕಂ (೫೩೭+೪೧) ಸಮಾಪ್ತಂ ಮಂಗಳ ಮಹಾಶ್ರೀ...... ಶ್ರೀ... ಶ್ರೀ

ಶ್ರೀಗುರು ಬಸವಲಿಂಗಾಯ ನಮಃ

# ೧೦ನೆಯ ಸಂಧಿ

## ಜ್ಞಾನಾಚಾರ ಸ್ಥಲಂ

ಜ್ಞಾನ ನಿಷ್ಠಾಚಾರದಿಂ ಬಿಡ
ದೇ ನಿರಂತರ ಲಿಂಗಮಂ ಸುಯಿ
ಧಾನದಿಂ ಭಜಿಸೆಂದು ನಿರವಿಸಿದನು ಗುರೂತ್ತಮನು ||ಪಲ್ಲವಿ||

ಪದ

ಪೂರ್ಣ ರೂಪಕರಾದಿ ಮಾಯಾ
ಮರ್ಣ್ಣರು ಸಂಸಾರ ವಿಷಯಮ-
ಹರ್ಣ್ನಿಯರು ಚರಲಿಂಗಜೀವಾಕರ್ಣ್ಣರು ಬ್ರಹ್ಮ ||
ವರ್ಣ್ನಜಾಮೃತ ಚಿತ್ತ ಪಾಶಾ
ಘೂರ್ಣ್ಣರು ಲಾಲಿಪುದು ಸರ್ವೋ
ತ್ಕರ್ಷ ಪೂಜಾನ್ವಿತರು ತತ್ವ ವಿಮರ್ಶಕರು ನಲಿದು || ೧ ||

ಶ್ರೀ ಗುರೂತ್ತಮನಿಂ ಸದಾಶಿವ
ಯೋಗಮದರಿಂ ಚಾರಲಿಂಗದ
ಯೋಗಮದರಿಂ ಸುಪ್ರಸಾದದ ಯೋಗಮದರಿಂದ ||
ತೂಗುವಮಲಾಚಾರಲಿಂಗದ
ಯೋಗಮದರಿಂ ಮಹದ ಪರಶಿವ
ಯೋಗ ಮಹುದಾಚಾರಮಂ ಬಿಡದಾಚರಿಪುದೊಲಿದು || ೨ ||

ಜ್ಞಾನಿಯಾದ ಬಳಿಕ್ಕ ಶರಣನು
ಹಾನುಭವವೇತಕೆ ಪರಬ್ರ
ಹ್ಮಾನುಸಂಧಾನೋಪದೇಶವೆ ಬ್ರಹ್ಮವಾಗಿರಲು ||
ತಾನರಿವುದೇನಯ್ಯ ಸಮ್ಯಕ್
ಜ್ಞಾನಮೇ ಸ್ವಯಮಾದ ಬಳಿಕಾ
ಮಾನಿತಾಚಾರವದನಾಚರಿಸೇಂ ಪ್ರಯೋಜನವು || ೩ ||

ಚಾರು ಬ್ರಹ್ಮೋಪದೇಶಂ ಪರಿ
ಪೂರ್ಣಮೆಂದಾ ಬ್ರಹ್ಮದೊಳು ಧಿ
ಕ್ಕಾರ ಬೇಡೆನ್ನಂ ತಿಳಿದೆನೆಂದನಘಶರಣರೊಳು ||
ವೈರಬೇಡೆಲೆ ಜ್ಞಾನಿಯೆಂದಾ
ಚಾರನಿಂದೆಯೆ ಬೇಡ ತ್ರೈವಿಧ
ಕೂರದುತ್ಪಾತಂಗಳಿರೆ ಮೋಕ್ಷಕ್ಕೆ ದೂರವಲಾ || ೪ ||

ಮತ್ತೆ ಕರಣದ್ವಾರದಿಂ ನಿಜ
ಚಿತ್ತುವೆ ಬಹಿರ್ಮುಖಮನೆಯ್ದಲು
ನಾತ್ತ ವಿಪರೀತಂಗಳಪ್ಪುವು ಬಂಧ ಮೋಕ್ಷಾದಿ ||
ವೇತ್ತ ಸಂಸೃತಿಯಾದೊಡಂ ಬಹು
ತತ್ವ ತಾತ್ವಿಕ ಮಾದೊಡಂ ಸ್ವಸಿ
ಮಿತ್ತಮುದಯಿಸುವಾಗಿ ಬಾಹ್ಯಕ್ರಿಯೆಯು ಬಿಡಬೇಕು || ೫ ||
ಈ ವಿಚಾರದೊಳರಿದುಪಾಧಿಯ
ನೇ ವಿಭಾಗಿಪಸನಕಸೋಹಂ
ಭಾವಮುಳ್ಳನಕರಿವು ಸಹಿತ ಕ್ರಿಯೆಯನೆಸಗುವುದು ||
ಭಾವರಹಿತ ಕ್ರಿಯೆಯೆ ಸಂಸೃತಿ
ಥಾವತಿಗೆ ಕಾರಣವು ಸುಜ್ಞಾ
ನಾವಲಂಬ ಕ್ರಿಯೆಯೆ ನಿಜಮೋಕ್ಷಕ್ಕೆ ಕಾರಣವು || ೬ ||

ಭಾವದಿಂ ಕ್ರಿಯೆಯಿಂ ಪ್ರಯೋಜನ
ಮಾವುದೆಲೆ ಸುಜ್ಞಾನಮೇ ಮೋ
ಕ್ಷಾವಭಾಸನ ಕಾರಣಂ ನಿಜ ನಿರ್ಪಯಲನೊಂದು ||
ಭಾವದಿಂ ಕುರುಹಿಟ್ಟು ಬಹುಕ
ರ್ಮಾವಲಂಬನನೆಸಗಲಾಫಲ
ಮಾವ ಜನ್ಮವನೀವುದುತ್ಕಟ ಕಪಟವಿದನರಿಯೆ || ೭ ||

ಆ ನಿರೂಪಮೆ ಕಾಣಬಾರದು
ಲೂನ ರೂಪಿಗೆ ಸಕಲ ನಿಷ್ಕಲ
ವೇನು ಪೂಜಾ ಕಾರಣಮೆ ತಿಳಿವಿಂ ಸಮರ್ಚಿಸಿಯೆ ||
ಜಾನಿಸುವ ಪರಿ ಎಂತು ಶ್ರೀಗುರು
ವಾನಿರೂಪನೆ ಕಾಣ್ಬವೊಲು ಸಲೆ
ತಾನೆ ಮಾಡಿದನಾಗಿಯುಭಯುವನರಿದು ಭಜಿಸುವುದು || ೮ ||

ದೃಷ್ಟಮುಯುಮಪ್ಪಿಷ್ಟಲಿಂಗವ
ನಷ್ಟವಿಧದಿಂ ಶ್ರೇಷ್ಠ ಪೂಜೆಯು
ನೆಷ್ಟ ಮಾಡಲ್ಕಷ್ಟಮಲ್ಲದೆ ತುಷ್ಟಿ ನಿಜವಹುದೆ ||
ನಿಷ್ಠೆಯಿಂ ಪ್ರಾಣೇಷ್ಟಲಿಂಗಮೆ
ಶಿಷ್ಟಮೆಂದರಿದಷ್ಟರಿಂದು
ತೃಪ್ತ ಮೋಕ್ಷಾಭೀಷ್ಟೆಯುಹುದೀ ಕಷ್ಟವೇತಕೆಲೆ || ೯ ||

ಕಾಯದಲ್ಲಾ ಚಾರಲಿಂಗ
ಸ್ವಾಯತೋದ್ಗತಮಾದುದಿಷ್ಟವ
ದೀಯುತೀಷ್ಟಮೆ ಸಹಿತ ಸೂಕ್ಷ್ಮ ಪ್ರಾಣಲಿಂಗಮುದು ||
ಆಯತೋಭಯ ವೃಕ್ಷಬೀಜ
ನ್ಯಾಯದಂತಿಷ್ಟಾಧಿಕಾರ
ಸ್ವೀಯಮೆಂದರಿದರ್ಚಿಪುದು ನಿಜಭಾವ ಶುದ್ಧದೊಳು || ೧೦ ||

ನಯನನವ್ಯೈದಿದ ತಾಪನಂಘ್ರಿ ನಿ
ನಯದೊಳೈದಲು ಬಲ್ಲವೇ ನಿ
ರ್ಣಯದ ಮನವ್ಯೈದಿಪ್ಪ ಘನಮದು ತನುಗೆ ಸಿಲ್ಕುವವೇ ॥
ಕಾಯಕೆತ್ತಣ ಮಾತೊ ಕರ್ಮ
ಕ್ರಿಯೆಯೆ ಜಡವೆಂದರಿದ ಬಳಿಕ
ಸ್ವಯದ ಲಿಂಗವೆ ಬಾಹ್ಯದೊಳರಸಲಿಲ್ಲ ನಿಲ್‌ಮಾಣು ॥ ೧೧ ॥

ನಿರುತ ಕಾಷ್ಠಾಂತರ್ಗತಾಗ್ನಿ
ಸ್ಫುರಿಸಿ ಕಾಷ್ಠವನೊಳಗು ಮಾಳ್ಪಂ
ತುರುತರ ಶ್ರೀಗುರುವರೇಣ್ಯ ನಿಜೋಪದೇಶದೊಳು ॥
ಭರಿತ ಚಿದ್‌ಘನ ಲಿಂಗವುಂ ಮ
ತ್ಕರದೊಳೊಲವಿಂದಿತ್ತನಾಗಿ
ಳ್ಳಿರದು ಬಾಹ್ಯಾಭ್ಯಂತರೋಭಯವೆಂಬ ಸಂಶಯವು ॥ ೧೨ ॥

ಪ್ರಣುತ ನಿಶ್ಶಬ್ದ ಸ್ವರೂಪ
ಪ್ರಣವಮಂತ್ರಾತ್ಮಕ ನಿರಧಿಕ
ಪ್ರಣಮಿತಾಖಂಡೈಕ ಬೋಧೋದಯ ಸದಾನಂದ ॥
ಗಣಿತಚಿದ್ಘನಲಿಂಗ ನಿಜಕಾ
ರಣ ಮಹೋದಯ ನಿರವಯಂ ನಿ-
ರ್ಗುಣದ ನಿರುಪಾಧಿಕನ ಸೋಪಾಧಿಕಕೆ ತರಬಹುದೆ ॥ ೧೩ ॥

ಜ್ವಲನ ದಾಹಕ ಶಕ್ತಿ ಬೆಳಗಿನೊ
ಳೊಲವಿನುಂಟೆ ವಿಚಾರಿಸಲು ನಿ
ಸ್ಥಲದ ಮೂಲಾಂಕುರ ಮಹೋದಯ ಪೂರ್ಣ ಚಿದಖಂಡ ॥
ಫಲಿತ ಪರಮಾನಂದಮಯ ಕೇ-
ವಲ ನಿಜಗತಾನಿಷ್ಟ ಸಂಸೃತಿ
ಕಲಿಮಲಾಪಹೃತೀಷ್ಟವೇ ಮಹದಾದಿ ಕಾರಣವು ॥ ೧೪ ॥

ದೇಹ ವಿಷಯೇಂದ್ರಿಯ ಮನಃ ಪ್ರಾ
ಣಾಹವವನುರೆ ಮಾಡಿ ಕೆಡಿಸಿತು
ಸ್ನೇಹ ತತ್ವವ ಕೋಹಮೆನಲರಿಯದ ಮಹಾಮುಗ್ಧ ||
ಸೋಹಮೆಂಬುದನರಿಯಪೆಯಹಂ
ಮೋಹಿತತ್ವ ಪದಾರ್ಥ ಮುಳಿಸುಗು
ಮೋಹೊ ತತ್ವಮಸೀತಿ ವಾಕ್ಯಂ ತಾನೆ ಬೇರಿಲ್ಲ || ೧೫ ||

ಏನುಮಿಲ್ಲದ ಬಯಲೊಳೊಂದನು
ಮಾನಕನುಪಮಮಾದ ಬಣ್ಣಂ
ತಾನೆ ತಲೆದೋರಿತ್ತದಂ ನಿರ್ವಯಲೆ ಶೃಂಗರಿಸಿ ||
ಆ ನಿರೂಪಮೆ ರೂಪುಗೊಂಡುದ
ನೂನ ರೂಪಿನ ಕಳೆಯ ಬೆಳಗಿದು
ತಾನೆ ನಿಜ ಮೂಲಾಂಕುರಂ ತಿಳಿದರ್ಚಿಪುದು ಮರುಳೆ || ೧೬ ||

ಲಿಂಗ ನಿಜಮಂ ಕಾಣದಷ್ಟವಿ
ಧಾಂಗ ಪೂಜೆಯ ಮಾಡಿ ಫಲವೇಂ
ಲಿಂಗಮುಖಮಂ ಕಾಣದಖಿಳ ಪದಾರ್ಥವರ್ಪಿಸಿಯೆ ||
ತುಂಗ ಶೇಷವನುಂಡೆನೆಂಬುದು
ಸಾಂಗಮೇ ಕೃತ್ರಿಮದ ಫಲಮಂ
ನುಂಗಿ ನಿಜಪರಿತೃಪ್ತನಾಗಿಹೆನೆನಲು ಮೆಚ್ಚುವರೆ || ೧೭ ||

ಕಾಣಬಹುದದು ಕೈಗೆ ಸಿಲ್ಕದು
ಮೇಣು ಮನದಿಂದರಿಯ ಬಹುದದ
ಜಾಣಿನಿಂ ಕುರುಹಿಡಲು ಬಾರದು ಭಾವಿಸಲುಬಹುದು ||
ಮಾಣದದರೊಳು ಬೆರಸಬಾರದು
ಕಾಣದುದನುರೆ ಕಂಡೆನೆಂಬುದು
ಕೇಣಮಲ್ಲದೆ ಸಹಜಮಲ್ಲಾಚಾರ ಮಾರ್ಗದೊಳು || ೧೮ ||

ಒಂದೆ ನಿಶ್ಚಯಮಿಲ್ಲದೆಯೆ ಪಲ
ವಂದವರ್ಚನೆ ಏಕೆ ಹೃದಯದೊ
ಳೊಂದು ಮಾತಿನೊಳೊಂದು ಕಾಯವೆ ಭಕ್ತಗೀ ಮನವೆ ||
ಸಂದು ಭವಿಯಾಗಿರಲು ದೋಷ ವಿ
ದೆಂದು ನಾನೀ ಪ್ರಾಣಲಿಂಗಮ
ನೊಂದಿ ನಿಜಮೊಂದರಿದೆನಿಷ್ಟ ಕ್ರಿಯೆಗಳಂ ಮರೆದೆ ||೨೯||

ವರ್ಣ ರಹಿತನ ಸರಸಿ ಕಾಣದ
ವರ್ಣನೆಂದುಮ್ಮಳಿಸದಿರು ಶಿವ
ಪೂರ್ಣನಾಗಿಹ ಸಕಲ ನಿಷ್ಕಲದಲ್ಲಿ ಎಂದೊರೆದ ||
ಕರ್ಣಮಂತ್ರ ವಿರೋಧಿಯಾಗದೆ
ನಿರ್ಣಯೇಷ್ಟ ಬ್ರಹ್ಮವೇ ಸಂ
ಕೀರ್ಣ ಮೂಲಸ್ತಂಭವೆಂದರಿದರ್ಚಿಸುವುದೊಲಿದು ||೩೦||

ಅನಿಕಲಬ್ರಹ್ಮಾಂಡತತ್ವ
ಪ್ರವರ ಮೂಲಸ್ತಂಭ ಶಂಭು
ಪ್ರನಿಮಲಾಖಂಡೈಕಬೋಧಾಮಾತ್ರ ಪರಿಪೂರ್ಣ ||
ಅವಿರಳಪ್ರಾಣೇಶನಂ ಭಾ
ವಪರ ಸಮ್ಯಕ್‌ಜ್ಞಾನ ನಿರ್ಗುಣ
ನಿವಿಧ ಸತ್ಕ್ರಿಯೆಯಂ ತಣಿಸಿ ಬಾಹ್ಯವನು ಮರೆದಿಹೆನು ||೩೧||

ಆ ವಿಹಂಗನ ಗರಿಗಳಂಬುಗ
ಳಾವಲಂಬಮೊಳಲಗು ಗುರಿಯಂ
ಭಾವಿಸಲು ಸಂಧಾನಮಪ್ಪಂತನುಪಮಿತ ಮಹಿತ ||
ಭಾವಿತಾಖಂಡಿತ ಸದಾಗಣಿ
ತಾವಿರಳಿತ ಪ್ರಾಣನಾಥ ನಿ
ಜಾವಿಕಲ ಪದವಡೆವೊಡಿಷ್ಟಕ್ರಿಯೆಗಳಿರಬೇಕು ||೩೨||

ಕಣೆಯುನರ್ಚಿಸಿ ಮಣಿಗಳಂ ಬಿಡ
ದೆಣಿಸಿ ಕಾಲವ ಕಳೆಯಲೇತಕೆ
ಕ್ಷಣಮುಮರ್ಧಕ್ಷಣಮುಮಾದೊಡ ಮಾಗಲಕಳಂಕ ॥
ಪ್ರಣುತ ಸಾಕ್ಷಾದ ಪ್ರಮೇಯಾ
ಗಣಿತ ಪರಿಪೂರ್ಣಾನುಭವ ನಿ
ರ್ಗ್ಗುಣ ನಿರೂಢ ಪ್ರಾಣಲಿಂಗದ ನಿಜ ನೆನಹೆ ಸಾಕು ॥ ೨೩ ॥

ನೆನಹಿನೀಕ್ಷೆಯ ನೋಟದೊಳು ದೃ
ಕ್ಕಿನ ಮನೋರಥ ಸೋಂಕಿನೊಳು ಸೋಂ
ಕಿನ ವಿವಾಂಛೆಯೆ ಕೂಟದೊಳು ಕೂಟದ ಮಹಾಕಾಂಕ್ಷೆ ॥
ವಿನಯ ಪರವಶದಲ್ಲಿ ಲಯುವಹು
ದಿನಿತು ಸತ್ಕ್ರಿಯೆ ಎಂದು ಪರವಶ
ಮನಘ ಪರಮಾನಂದ ಮೆಯ್ದುವನಕ ಸಮರ್ಪಿಪುದು ॥ ೨೪ ॥

ಕರಣ ವಿಜಯ ನಿರೂಢ ಪಾವನ
ಚರಿತ ಶಿವಸುಖ ಮಾನಸನೆ ಕೇ
ಳರಸೆವರಗೃಹಿಶೀತಭೀತಂ ಗಾರುಢಾಗ್ನಿಗಳಂ ॥
ತ್ವರಿತದಿಂ ಸತ್ಕರಿಸಿದಂತೀ
ಶರಿರದಾಮಯ ಕಾಲಕರ್ಮ್ಮೇ
ತ್ಕರಮನಪಹರಿಸದೊಡೆ ಸಾಕೇತರ ಶಿವಾರ್ಚನೆಯು ॥ ೨೫ ॥

ಲೋಲಗುರು ಕರುಣಾದಯಾಸಂ
ದಾಲಯ ಬ್ರಹ್ಮದೊಳು ಲೋಚನ
ದಾಲಿನಿಂದಾಲಿಪ ಶ್ರವಣಚಿನ್ನ ಭವನಪ್ಪಿರಲು ॥
ಮೇಲುಲುಹು ನಿರ್ವೃತ ಚಿತ್ತಂ
ಕೀಲಿಸಿ ಸಮಾಧಾನ ಮಾಗಲು
ಕಾಲಕರ್ಮಾದಿಗಳ ಜಯಿಸುವುದೇನು ಸೋಜಿಗವು ॥ ೨೬ ॥

ತನು ತರಹರಂ ಬೋಗಿ ಪುಳಕಂ
ಮೊನೆವೆರಸಿ ರೋಮಾಂಚ ಕಂಚುಕ
ಜನಿಸಲಾನಂದಾಶ್ರುಜಲಧಿ ತರಂಗಿಸಲು ನೆರೆಯು ||
ಕೊನರಿ ಗದ್ಗದವೆಸೆಯಲೀ ಸಂ
ಹನನ ಹೊರೆಯೇರಲ್ಕನಂಬುಗ
ಲನಿಮಿಷೈಕ್ಯಾನಂದದಲ್ಲೆಂದಿರ್ಪೆನೋ ದೇವ || ೨೭ ||

ಕರಣ ಮಾನಸ ಭಾವದೊಳ ಹೊರ
ಗರರೆ ಪರಿಪೂರ್ಣ ಸ್ವರೂಪಾ
ದುರುತರ ಬ್ರಹ್ಮದೊಳು ಮುದದಿಂ ಪರಮ ಶಿವಭಾವಂ ||
ಬೆರಸಿ ಹರ್ಷೋತ್ಕರ್ಷನಾಗಿ
ಸ್ಫುರಿತ ಗದ್ಗಗ ಕಂಠದಿಂ ಸಂ
ಸ್ಮರಿಸುತರ್ಚಿಸಿ ನುತಿಸುತೆಂದಿರ್ಪೆನೊ ಮಹಾದೇವ || ೨೮ ||

ವರಮನೋ ಮೂಲೈಕ ಪುಳಕಾಂ
ಕುರ ಮಹಾರೋಮಾಂಚಪಲ್ಲವ
ಹರುಷ ಶಾಖಾದ್ಯನಿಮಿಷೇಕ್ಷಣ ಕುಸುಮಗದ್ಗದಿಕಾ ||
ಚಿರ ಫಳಾನಂದಾಶ್ರು ನಿಜರಸ
ನಿರುತನಾದ್ಯುದ್ಭಾವಲತಿಕಾ*
ವರಣ ತನು ವೃಕ್ಷಾಶ್ರಿತೇಷ್ಟ ಬ್ರಹ್ಮವನು ನಲಿದು || ೨೯ ||

ಶಸ್ತ ರೂಪಾಂಗದೊಳು ಜಾಗ್ರಾ
ವಸ್ಥೆಯಿಂ ಪ್ರೇಕ್ಷಣವು ದೃಕ್ಕಿಂ
ಹಸ್ತದಷ್ಟವಿಧಾರ್ಚನಂ ಷೋಡಶ ಸಮುಪಚಾರಂ ||
ವಿಸ್ತರಂ ಮಿಗೆ ಮಾಡಿ ವಾಕ್ಯದೊ
ಳಾಸ್ತವಂಗಳ ನೆಸಗಿ ಸತತ ನಿ
ರಸ್ತ ಬ್ರಹ್ಮಾಲಸ್ಯದಿಂ ಮನವಲರಿ ಮಾಡುವೆನು || ೩೦ ||

* ಪಾ--ನಾದ್ಯಥಿದೈವಲತಿಕಾ

ಭೂಮಿ ಸಮಾರ್ಜನೆಯೊಳುದಕಂ
ಕಾಮಿತ ಸ್ನಪನದೊಳು, ತಾಪದಿ
ನಾಮರುತ್ಸಖ, ನಾಲವಟ್ಟದಿ ನನಿಲನಾ ಧೂಪ ||
ಧೂಮದೊಳ್ಮುಳುಗಿಸುವ ಕತದಿಂ
ವ್ಯೋಮ, ಪುಷ್ಪದಿನಿನನುಗಂಧವೆ
ಸೋಮನಕ್ಷತೆಯಲ್ಲಿ ನಕ್ಷತ್ರಂಗಳತಿ ಶುದ್ಧಂ || ೩೧ ||

ಬಿಸಿಲು ಗೋಘೃತ ದೀಪ ಕಾಂತಿಯೊ
ಳಸಮ ಕರ್ಪೂರ ಪ್ರದೀಪದಿ
ನೆಸೆವ ಚಂದ್ರಿಕೆಯಾರತಿಗಳಿಂ ಛಾಯೆ, ದಿಕ್ಕುಗಳು||
ವಸನದಿಂ, ನೈವೇದ್ಯದಿಂ ದೊಡ
ಲಸುಗಳಾ ತಾಂಬೂಲದಿಂ ಗುಣ
ನಿಸರಮಾ ಸ್ತೋತ್ರಂಗಳಿಂ ಶ್ರುತಿ ಶುದ್ಧಮಾಗಿಹುವು || ೩೨ ||

ಅರ್ಚನೆಯ ನೊಲಿದೆಸಗುತಿಹ ಲಿಂ
ಗಾರ್ಚನಾವಸರವನು ಸತತಮೆ
ಡರ್ಚಿ ವಿಷಯೋತ್ಪಾತ ಗುಣಮುಂ ತೀರ್ಚಿ ಲಿಂಗದೊಳು ||
ಸಾರ್ಚಿ ಸುಚಿದಾತ್ಮನನು ಮನವನ
ಮರ್ಚಿದ್ರವ್ಯ ವಿಶುದ್ಧಿ ಪಡೆದನು
ಲಾರ್ಚೆಯಿಂದಂ ಸುಪ್ರಸಾದವ ಪೆರ್ಚಿ ಮುದವಲರಿ || ೩೩ ||

ಪಿಂಗದನಿಮಿಷನಾಗಿ ಚಿದ್ಘನ
ಲಿಂಗದೊಳು ಸರ್ವೇಂದ್ರಿಯಾತ್ಮನು-
ನಂಗಳಂತರ್ಮುಖಮನೈದಿ ಹೃದಯಂ ಮಥನಮಾಗಿ ||
ತುಂಗ ಸಚ್ಚಿತ್ ಪ್ರಣವ ಲಿಂಗದ
ಸಂಗವನು ಕಂಡೆರೆದು ಧ್ಯಾನಮ
ನಂಗೊಳಲ್ನಿಜ ಪರವಶಾಲೀ ಧಾಮ ಶಕ್ತಿಯೊಳು || ೩೪ ||

ಏಸುತ ಹೃದ್ದ್ವಾತ್ರಿಂಶ ಪದ್ಮದೊ
ಳನಲ ಚಂದ್ರಾದಿತ್ಯರವರೊ
ಳ್ಗಸ ಮಹಾಪ್ರಭೆಯುದರೊಳಮಲ ಜ್ಞಾನಮದರಲ್ಲಿ ॥
ಚಿನುಮಯಾತ್ಮಕನಾತ್ಮಮಧ್ಯದೊ
ಳನವರತ ಚಿಚ್ಛಕ್ತಿಪೀಠದೊ
ಳನುಪಮ ಪ್ರಾಣೇಶ ಲಿಂಗಂ ಮೂರ್ತಿಗೊಂಡಿರಲು ॥ ೩೫ ॥

ಒಡೆದು ಸೂಕ್ಷ್ಮ ಬ್ರಹ್ಮರಂಧ್ರಂ
ಬಿಡದೆ ಮಾರುತ ಘಾತಿಯಿಂದಿಳಿ
ದಿಡಿದ ಸುಧೆಯಿಂದಂತರಂಗಂ ಶೀತಲಮದಾಗಿ ॥
ತೊಡೆದು ಸ್ವಪ್ನಾವಸ್ಥೆಯಿಂದೆಡೆ
ಬಿಡದೆ ಸೂಕ್ಷ್ಮಾಂಗದೊಳು ಹರ್ಷಂ
ಬಡೆದು ಧ್ಯಾನದೊಳೀಶನ ಸ್ಮರಣಂಗಳಿಂದೊಲಿದು ॥ ೩೬ ॥

ಶಾಂತಿ ಜಲದಿನಹಂಕೃದಕ್ಷತೆ
ಯಿಂ ತಮೋಹ ವಿವೇಕ ವಸ್ತ್ರದಿ
ನಂತು ಸತ್ಯಾಭರಣದಿಂ ಶಿವಯೋಗ ಗಂಧದೊಳು ॥
ಭ್ರಾಂತಿಹರ ವೈರಾಗ್ಯ ವಿಮಲ ಲ-
ತಾಂತದಿಂ ನಿಶ್ವಾಸ ಧೂಪದಿ
ನಂತು ಸಂವಿಜ್ಜ್ಯೋತಿಯಿಂ ಪರಮೌನ ಘಂಟೆಗಳಿಂ ॥ ೩೭ ॥

ಲೇಪ ವಿಷಯ ಸಮರ್ಪಣದಿ ನಾ
ತ್ಮೋಪ ನೈವೇದ್ಯದೊಳು ಭಕ್ತಿಕ
ಲಾಪರಸ ತಾಂಬೂಲದಿಂ ವಿಷಯ ಭ್ರಮಣ ವಿಜಯ ॥
ಸುಪ್ರದಕ್ಷಿಣದಿಂ ಸುಬುದ್ಧಿ ಪ
ರಾಪ ಶಕ್ತಿ ನಮಸ್ಕರಣ ಮು
ಖ್ಯೋಪ ಚಾರದಿನಂತರಭಿಮುಖಮಾದ ಮಾನಸದಿ ॥ ೩೮ ॥

ಪ್ರಾಣಲಿಂಗವಸೀ ಪರಿಯ ನಿ
ರ್ವಾಣ ಹೇತ್ವಖಿಲೋಪಚಾರಥು
ರೀಣ ಭಕ್ತಿಗಳಿಂ ಸಮರ್ಪಿಸಿ ಧ್ಯಾನದೊಳ್ಮನವಂ ॥
ಪ್ರಾಣಮುಂ ಕರಣೇಂದ್ರಿಯೈಕ
ತ್ರಾಣ ಭಾವಾದಿಗಳು ಹೃದಯದ
ಶೋಣ ಪದ್ಮದೊಳೊಂದುಗೂಡಿ ವಿನಿಶ್ಚಲನಮಾಗಿ ॥ ೩೯ ॥

ಕುಂಡಲೀ ಭ್ರೂಮಧ್ಯ ಮೊಂದಿ ಯ
ಖಂಡ ಪೂರ್ವದ ಹೃದಯ ತುಂಬಿತ
ಕಂಡು ಮಧ್ಯ ಹೃದಯ ಗ್ರಹಿಸಿ ನಿಜೋರ್ಧ್ವ ಹೃದಯ ಸಹ ॥
ಚಂಡ ಪಶ್ಚಿಮದಲ್ಲಿಯುಸುನೆಲೆ
ಗೊಂಡು ವಪ್ರ ಶಿಖಾನುಭವ ಚ-
ಕ್ರಾಂಡದೊಳು ಘನಭಾವವಡಗಿ ಸಹಸ್ರದಳದಲ್ಲಿ ॥ ೪೦ ॥

ಪತಿಯ ಬರವಿಗೆ ನಿಜ ಮಹೋದವ
ಸಿತದೊಳಮೃತದ ತಳ್ಪವಿಕ್ಕಿಸು
ಮತಿಯ ದೀಪವ ನಿಃಕ್ರಿಯೋಪಕರಣವನನು ಮಾಡಿ ॥
ವಿತತ ಭಾವದ ಜವನಿಕೆಯುಮರ
ಸುತವೆ ಪಶ್ಚಿಮದ್ವಾರ ದೆರೆದಾ
ಯತ ಚಿದಕ್ಷಿಯೆ ಜೀವಮಾಗುನ್ಮೀಳಿಪಳೆಂದೊಲಿದು ॥ ೪೧ ॥

ತಾನೆ ನಡೆ ತಂದನುಪಮಿತದಿ-
ವ್ಯಾನುಭವ ಸುಚಿದಾಸನದೊಳಾ
ಸೀನನಾಗಿರಲವಿರಳ ಸಮಾಧಿ ಪ್ರಸೂನಗಳ ॥
ಧ್ಯಾನದಿಂ ಸು ಮನೋಲಯದಿ ನಸ-
ಮಾನಸೋಹಂ ಭಾವದಿಂ ಸುಯಿ
ಧಾನದಿಂ ಸಂವಿತ್ಕ್ರಿಯೆಗಂ ತಣಿಸುತವೆ ಬಳಿಕ ॥ ೪೨ ॥

ಕಾರಣಾತ್ಮೆಷ್ಟವನು ಮಹದುಪ
ಚಾರದಿಂಮಂತ್ರಾನುಭವಪರಿ
ಪೂರಿತ ಪ್ರಾಣವನು ಚಿತ್ಪರಿಚರಣತಾ ಕ್ರಿಯೆಯಿಂ ॥
ಚಾರು ನಿಜವನು ಸಂವಿದೈಕಾ
ಚಾರದಿಂ ಸತತಂ ಭಜಿಸಿ ವರ
ಧಾರಣ ಧ್ಯಾನ ಸುಸಮಾಧಿಗಳಲ್ಲಿ ಧರಿಸಿಹುದು ॥ ೪೩ ॥

ಸತ್ತು ಚಿತ್ತಾನಂದ ಲಿಂಗವು
ಮತ್ತಮೊಂದಾನೊಂದು ವೇಳೆಯೊ
ಳಿತ್ತಲಾ ಸಂಗವನು ವಿಸ್ಮೃತಿಯಿಂದತಿಕ್ರಮಿಸಿ ॥
ಚಿತ್ತದೊಳು ಮೋಕ್ಷಾರ್ಥ ಸಿದ್ಧಿ ನಿ
ಮಿತ್ತ ಜೀವ ತ್ಯಾಗಮೇ ಪ್ರಾ
ಕ್ಷಿತ್ತಮಾಗಿ ಪ್ರಾಣ ತನುಯೋಗದೊಳು ಧರಿಸಿಹುದು ॥ ೪೪ ॥

ಸಮ್ಯಗನುಭವ ಭಾವ ಪರಶಿವ
ಸೌಮ್ಯ ಪರಮಾನಂದಮಯ ನೈ
ಯಮ್ಯ ಯುಕ್ತಿ ಸುಚಿತ್ತಗುಣ ನೈಷಮ್ಯ ನಿಜ ಬೋಧಾ ॥
ಸಾಮ್ಯ ಸದ್ಗುಣ ವೃಂದಸನ್ನುತ
ಕಾಮ್ಯದಾಖಂಡೈಕರಸಮಯ
ರಮ್ಯ ಸಾಕ್ಷಾದನಿಕಲಾ ನೌಪಮ್ಯ ಜಯ ಜಯತು ॥ ೪೫ ॥

ಇದು ಸಮಸ್ತ ಶಿವಾನುಭಾವರ
ಪದ ಪಯೋರುಹ ಗಂಧ ಮದ ಷಟ್
ಪದನು ಷಟ್‌ಸ್ಥಲ ಸಾರ್ವಭೌಮಂ ಚೆನ್ನವೃಷಭೇಂದ್ರಂ ॥
ವಿದಿತಮಾಗಿ ನಿರೂಪಿಸಿದ ಸ
ಮ್ಮದ ಮಹಾಕ್ಷೇತ್ರಜ್ಞ ಸುಮನೋ
ವಾದದೊಳಗಾ ಜ್ಞಾನಸಮಾಚರಣೆ ದಶಮಸ್ಥಲವು ॥ ೪೬ ॥

ಇತಿ ಕ್ಷೇತ್ರಜ್ಞ ಸುಮನೋವಾದೇ "ಜ್ಞಾನಾಚರ ವಿವರಣಂ"
ದಶಮ ಪ್ರಕರಣಂ । ಅಂತು ಸ್ಥಲಹತ್ತಕ್ಕಂ ಪದನು
೬೨೩ಕ್ಕಂ (೫೭೮+೪೫) ಸಮಾಪ್ತಂ ಮಂಗಳ ಮಹಾಶ್ರೀ... ಶ್ರೀ.... ಶ್ರೀ.

ಶ್ರೀಗುರುಬಸವಲಿಂಗಾಯ ನಮಃ

# ಹನ್ನೊಂದನೆಯ ಪ್ರಕರಣಂ

## ಲಿಂಗಧಾರಣ ಸ್ಥಲಂ

ಲಿಂಗಮಂ ಪೂಜಿಸಿಯೆ ತಚ್ಛಿವ
ಲಿಂಗಮಂ ಸರ್ವತ್ರ ತೊಲಗದ
ಹಾಂಗೆ ಷಟ್‌ಸ್ಥಾನದೊಳು ಧರಿಸೆಂದನು ಗುರೂತ್ತಮನೂ ||ಪಲ್ಲವಂ||

ಸಂಚಲಗ್ರಹಕಾದಿ ಮೋಕ್ಷಾ
ವಾಂಛಿತ ಬ್ರಹ್ಮೈಕ ಸಂಪದ
ವಾಚಿತಾನುಭವಾಗವೋದಿತ ನಟನಭವ ಪಾಶ
ಸಂಚಿದನುಪಮ ಸೌಖ್ಯಮಯಲಸ
ದುಂಭ ಭುಗ್ವರದಾತ್ತ ಪರಶಿವ
ಲೋಚನಾತ್ಮಕರಾಲಿಪುದು ನಲಿದೀ ಕೃತಿಯನೊಲಿದು || ೧ ||

ತೊಳ್ತುಗೆಲಸಂ ಮಾಡಲಾರದೆ
ಮಿಳ್ತು ಸರಿದೋಡಿತ್ತುಕಾಮದ
ಕಳ್ತಲದು ಪಿಂಗಿತ್ತು ಘನಲಿಂಗ ಪ್ರಕಾಶದೊಳು ।
ಅಳ್ತಿಯಿಲ್ಲದೆ ಷಡರಿವರ್ಗಗ-
ಳಳ್ತು ಪೋದುವು ವಿಷಯ ಸಂಗತಿ
ಬಾಳ್ತೆ ಎಮಗಿಲ್ಲಿಲ್ಲ ವೆನುತಡಿಯಿಟ್ಟು ಜಾರಿದವು || ೨ ||

ನಾಣ್ಚಿದೆನು ವನಿತಾಭೀತಿಯಿಂ
ನುಣ್ಚಿದೆನು ಸಂಸಾರದಿಂ ಕಡೆ
ಗಣ್ಚಿದೆನು ಪಶುಪಾಶದಿಂದವಿಕಲ ಮಹಾಬ್ರಹ್ಮ ||
ಮೇಣ್ಚದುರಿನಂಗದೊಳು ನೆಲಿಸಲ್
ಪೂಣ್ಚಿದಾನಂದಾಬ್ಧಿವೀಚಿಯೊ
ಳಣ್ಚಿದೆನು ಸರ್ವಭ್ರಮಣಮಂ ನಣ್ಚಿಸಿದೆನಮಮಾ || ೩ ||

ನೆಳ್ಗಲಾಕಿದೆ ನಮಮ ಮಾಯೆಯ
ನುಳ್ಗ ಮಾಡಿದೆನಿಂದ್ರಿಯಂಗಳ
ತಳ್ಗಿಸಿದೆನೀ ದೇಹ ಧರ್ಮವನಿದನಹಂಮತಿಯ ||
ಪುಳ್ಗಿದೆನು ವಿಪರೀತ ಭಾವವ
ನಳ್ಗಿದೆನು ಗುರುಕುರಣ ಪದದಲಿ
ಉಳ್ಗಿದೆನು ಸಲೆ ವಿಧಿನಿಷೇಧವ ಕುಳ್ಗಿಸಿದೆನಾಹಾ || ೪ ||

ಅಂಗದೊಡನೀ ಪ್ರಾಣಮುದಿಸಿ-
ತ್ತಂಗದಿಂ ಬೇರ್ಪಡಿಸದಸುವಂ
ಲಿಂಗದೊಳು ನೆಲೆಗೊಳಿಸಿ ಬಳಿಕಾಲಿಂಗಮಂ ತಂದು ||
ಅಂಗದಲ್ಲಿ ನಿಜಪ್ರತಿಷ್ಠೆಯ
ಸಾಂಗಮಾಗಲು ಮಾಡಲೀಘನ
ಲಿಂಗಮಿಂತಿದು ಷಟ್ಪ್ರಕಾರಮದಾಗಿ ನೆಲಸಿಹುದು || ೫ ||

ಅಮಮ ಮೋಕ್ಷದೊಳಿಚ್ಛೆಯುಳ್ಳ
ರ್ಗಮಿತ ಸರ್ವಾಭೀಷ್ಟದಾಯಕ
ವಿಮಲ ಧಾರಣಮಿದುವೆ ಬಾಹ್ಯಾಭ್ಯಂತರಂಗಳಿದು ||
ಸಮಧುರೋಭಯ ಭೇದಮಹುದು-
ತ್ತಮವು ಬಾಹ್ಯದ ಧಾರಣಂ ಮ
ಧ್ಯಮುವದಭ್ಯಂತರದ ಧಾರಣವಾಗಮೋಕ್ತಿಯೊಳು || ೬ ||

ಜೀರ್ಣಕಲ್ಮಷಜನಿತ ವಿಜಯವಿ-
ಶೀರ್ಣ ಮೂಲಾಧಾರದಲ್ಲಿ ಸು-
ವರ್ಣರುಚಿಯಿಂ ಹೃದಯದೊಳ್ಪಿದ್ರುಮಲತಾದ್ವೈತ ||
ವರ್ಣದಿಂ ಭ್ರೂಮಧ್ಯದೊಳ್ ಪರಿ
ಪೂರ್ಣಮಯಮಾಣಿಕ್ಯ ತೇಜಃ
ಕೀರ್ಣದಿಂ ಧ್ಯಾನಿಸಿ ಸದಾ ಧರಿಸಿರ್ಪುದುತ್ತಮವು ||೭||

ರಾಗದಿಂ ಹೃದಯಾಂಬುರುಹದೊಳು
ಯೋಗ ಮೂಲಾಧಾರದೊಳು ನಿಜ
ಭೋಗ ಸದ್ಭ್ರೂಮಧ್ಯದೊಳು ತ್ರಿವಿಧ ಪ್ರಕಾರದೊಳು ||
ಯೋಗಿಗಳು ಜಾನಿಸುವರೊಲವಿಂ
ಭೋಗೆ ನಿರುಪಾಧಿಕದ ಧಾರಣ
ವಾಗಿ ನಿಜಮಲ್ತಿಡು ವಿಚಾರಿಸಲಾಗವೋಕ್ತಿಯೊಳು ||೮||

ಮತ್ತಮಾಧಾರಾದಿಯಜರಂ
ಧ್ರೋತ್ತರದೊಳಾ ಪೂರ್ಣಮಯದಿಂ
ದುತ್ತಮಧ್ಯಾನೈಕಗೋಚರಮಾಗಿ ನಿಜಮಿರಲು ||
ಇತ್ತ ಬಾಹ್ಯದ ಧಾರಣದ ಬೆಂ
ಬತ್ತಿ ಬಳಲುವುದೇಕೆ ಪೂಜ್ಯಂ
ಬೆತ್ತು ಸುಧೆಯಂ ಪೀರ್ದು ರಳಿಗೆಳಸುವರೆ ಮರುಳಾತ್ಮಾ ||೯||

ಅಂತರಂಗದ ಧಾರಣವೆ ಮನ-
ದಂತರಜ್ಞಾನವನೆ ಕೆಡಿಪುದು
ಮುಂತೆ ಗುರುವಿಂ ಪಡೆದ ಲಿಂಗವೆ ಮೋಕ್ಷಕಾರಣವು ||
ಸ್ವಾಂತ ಮನನಂ ಶುದ್ಧಮಿಲ್ಲ ನಿ
ತಾಂತ ಬಾಹ್ಯಂ ಶುದ್ಧಮಾಗದೆ
ಅಂತರಂಗ ಧ್ಯಾನ ಧಾರಣಮೇಂ ಪ್ರಯೋಜನವು ||೧೦||

ಚಿತ್ರ ವನಿತೆಯು ಹಸ್ತದೀಪದಿ
ಮೊತ್ತವಹ ತಮವಳಿವುದೇ ಮನ-
ದತ್ತಣಿಂದರಿದರಿವಿನಿಂ ಬಾಹ್ಯಕ್ಕೆ ಕುರುಹಾಗಿ ||
ಸತ್ತುಚಿತ್ತಾನಂದ ನಿತ್ಯಾ-
ಯತ್ತ ಪೂರ್ಣಪ್ರಾಣಲಿಂಗದು-
ದಾತ್ತಕಳೆ ನೆಲಿಸಿದೊಡದನೆ ಪರವೆನಬಹುದೆ ನೋಡೆ ||೧೧||

ಶ್ರೇಷ್ಠ ದೀಕ್ಷಾಮಥನ ಜನಿತೋ
ತ್ಕೃಷ್ಟ ಸಾರೋದ್ಧಾರವಾ ನೀ-
ತೇಷ್ಟವಾಂತ ಬಳಿಕ್ಕೆ ತನುಗುಣವಳಿದು ಮನದಲ್ಲಿ ||
ನಿಷ್ಠೆ ನಿರ್ಧರವಾದುದರಿವದು
ದುಷ್ಟ ಚಂಚದ್ರೂಪು ಮುನ್ನವಿ
ಶಿಷ್ಟ ಶೇಷಪ್ರಾಣ ತತ್ತ್ವದೊಳೇನನರಸುವುದು ||೧೨||

ಶುದ್ಧಮಲ್ತೇ ಜ್ಞಾನವರಿವಿಂ
ಶುದ್ಧಮಾಗರಿದಲ್ಲದನಿಶಂ
ಶುದ್ಧಮಲ್ತರ್ಚನೆ ಮನಃಪೂರ್ವಕ ಮದಲ್ಲದೊಡೆ ||
ಶುದ್ಧಮಲ್ತೇ ಧ್ಯಾನ ಭಾವಂ
ಶುದ್ಧಮಾಗಲು ಜಾನಿಸಲ್ಲದೆ
ಶುದ್ಧಮಾಗಿಹುದಂತರಂಗದ ಧಾರಣಕ್ರಿಯೆಯಿಃಂ ||೧೩||

ಪೂಜೆಭಕ್ತಿಧ್ಯಾನಧಾರಣ
ಯೋಜಿತ ಜ್ಞಾನಂಗಳಿಂ ತ
ನ್ನೈಜ ಸಾಕ್ಷಾತ್ಕಾರಮಲ್ಲದೆ ಧ್ಯಾನಮಾತ್ರಕ್ಕೆ ||
ಆ ಜಲಾಂತರ್ದೀಪದಂತೆ ವಿ
ರಾಜಿಪುದು ನಿಜಮಲ್ಲ ಬಳಿಕಾ
ರಾಜಯೋಗದ ಮೇಲೆ ಶಿವಯೋಗಾನುಭವವಿಹುದು ||೧೪||

ವಿನುತ ಬಾಹ್ಯದ ಧಾರಣವೆ ಲಾಂ–
ಛನಕೆ ಕಾರಣಮಲ್ಲದವಿಕಲ
ಘನ ಮಹೋದಯ ವಸ್ತುಸಾಕ್ಷಾತ್ಕಾರ ಮಿಲ್ಲಾಗಿ ||
ಮನನಮಂತ್ರಪ್ರಾಣ ಶಕ್ತಿಗ–
ಳನುವಿನಿಂ ನವಚಕ್ರ ಮಧ್ಯದೊ–
ಳನವರತ ನಿಜಪೂರ್ಣ ಧಾರಣಮೆನಿಸಿ ರಾಜಿಪುದು ||೧೫||

ನಾದಮಯ ದಿವ್ಯಾನುಭವ ಪೂ–
ರ್ಣೋದಯ ಬ್ರಹ್ಮದೊಳು ಸಂದಾ–
ಮೋದನಾದಾಂತರ್ಗತ ಮನೋನ್ಮನಿಯೊಳಾ ಮನನ ||
ವೇದಿತಾಂತರ್ಬಾಹ್ಯ ದೃಷ್ಟಿ ವಿ–
ನೋದಮಂ ಪೊರಪೊಣ್ಮಲೀಯದ
ಭೇದ ಜೀವನ್ಮುಕ್ತಿವಡೆದಿಹೆನೆನಲು ನಿಜಮಲ್ತು ||೧೬||

ಭಂಗುರಾಮಯ ಸಕಲ ನಿಷ್ಕಲ
ಸಂಗಮಂ ಗರ್ಭೀಕರಿಸಿ ರೂ–
ಹಿಂಗೆ ರೂಪಾಗಿಯೆ ಸುಚಿತ್ತಾದಿಕ ಷಡಧ್ವದೊಳು ||
ಮಂಗಳ ಷಡಧ್ವಾಯಮಾಗಿ ನಿ–
ರಂಗದೊಳು ನೆಲೆಗೊಂಡು ತಿಳಿವಿನ
ಕಂಗಳಿಗೆ ಪರಿಪೂರ್ಣ ಗೋಚರವಾಗಿ ರಾಜಿಪುದು ||೧೭||

ಶಸ್ತ ಶಿವಯೋಗಾನುಭವದಿಂ
ವಸ್ತುಸಾಕ್ಷಾತ್ಕಾರಮಲ್ಲದೆ
ವಿಸ್ತರಿಸಿ ತನ್ನಾದಬಿಂದೂಪಾಧಿಯೊಳು ಪೂರ್ಣ ||
ವಸ್ತು ತೋರಿದೊಡದುವೆ ಮರಳಿ ನಿ–
ರಸ್ತ ಸ್ವಪ್ನೈಶ್ವರ್ಯದಂದದೊ–
ಳಸ್ತಮಿಸಿ ಬಯಲಪ್ಪುದದಃ ನಿಜಮಲ್ಲ ತಿಳಿ ಮರುಳೆ ||೧೮||

ಮಾನನಿಧಿ ಗುರುನಾಥನೊಲವಿಂ
ಸ್ವಾನುಭಾವಾಯತಕೆ ಸಮ್ಯಕ್-
ಜ್ಞಾನವನು ರೂಪಿಂಗೆ ರೂಪನು ಸುಪ್ರಸಾದವನು ||
ಆ ನಿಜಾತ್ಮಂಗೊಲಿದು ಕರುಣಿಸಿ
ಪೀನ ತನುವಿನ ಮೇಲೆ ಶಿವಸಂ-
ಧಾನವೆನಿಸಿದ ಕಾರಣಂ ಸವಿಶೇಷ ಧಾರಣವು ||೧೯||

ಮೋದಿತಾಂತಃಕರಣದೊಳು ಬಿಂ
ದ್ವಾದಿ ಷಡ್ವರ್ಗದೊಳು ಧಾತು
ದ್ವಾದಶೇಂದ್ರಿಯದಲ್ಲಿ ವಿಕೃತಿ ಕ್ಷೇತ್ರ ಮರುತದೊಳು ||
ಐದೆ ಷೋಡಶ ಕಲೆಯೊಳು ಕಲಾ
ಭೇದದಿನಹಂಕಾರ ಮಮ ಕಾ
ಯದೊಳಮೃತದಮಲಾತ್ಮ ವಿದ್ಯಾಲಿಂಗ ಮಾಗಿಹುದು ||೨೦||

ಘ್ರಾಣಪಾಯುಗಳಲ್ಲಿ ಜಿಹ್ವಾ
ತ್ರಾಣ ಗುಹ್ಯಗಳಲ್ಲಿ ನೇತ್ರ ಧು-
ರೀಣ ಪಾದಗಳಲ್ಲಿ ತತ್ವಾಳಿಗಳೊಳಾ ಶ್ರೋತ್ರ ||
ಪಾಣಿಗಳೊಳಾ ಪೂರ್ವ ಹೃದಯ
ಪ್ರಾಣದೊಳು ಪರಮೇಷ್ಟಲಿಂಗಮೆ
ಜಾಣ ಷಡ್ವಿಧ ಲಿಂಗಮಾಗಿ ವಿರಾಜಿಸುತ್ತಿಹುದು ||೨೧||

ಸಾಂದ್ರ ತೇಜೋಮೂರ್ತಿ ಪರಮ ಜಿ-
ತೇಂದ್ರಿಯಾತ್ಮರ ಲಿಂಗ ಮುಖದ-
ಲ್ಲಿಂದ್ರಿಯಂಗಳು ಬಂದು ತಮ್ಮಯ ಸಂಶಯಂಗಳನು ||
ರುಂದ್ರದಿಂ ಪರಿಹರಿಸಿಕೊಂಡು ಶು-
ಭೇಂದ್ರ ರೂಪಾಗಿರ್ಪುವಲ್ಲದೆ
ಇಂದ್ರಿಯಂಗಳಿಗೆಲ್ಲಿಯದು ಶಿವಲಿಂಗಸಂಬಂಧಂ ||೨೨||

ಭೌತಿಕೇಂದ್ರಿಯ ವಿಷಯ ಜೀವನ
ಜಾತ ಬೀಜ ಪ್ರಮುಖ ಬಹು
ವಿಪರೀತ ಷಡ್ಭಾವಂಗಳಂ ಚಿದ್‌ವಹ್ನಿಯಿಂ ದಹಿಸಿ ||
ಪೂತ ಗುರು ಲಿಂಗವನು ಕರಜಲ–
ಜಾತಕಿತ್ತಾರಭ್ಯಮಖಿಳಂ
ಖ್ಯಾತ ಚಿದ್ಘನಲಿಂಗ ಸಂಬಂಧಿಗಳವಾಗಿಹವು || ೨೩ ||

ಜ್ಞಾನ ಗುರುವೇ ಬ್ರಹ್ಮರಂಧ್ರ–
ಸ್ಥಾನದೊಳು ಭ್ರೂಮಧ್ಯದೊಳು ಚರ
ಮಾನಿ ನಾಸಾಗ್ರಂ ಪ್ರಸಾದಂ ಚೌಕಮಧ್ಯದೊಳು ||
ಸ್ವಾನುಭಾವಂ ಮೂರ್ತಿಗೊಳಲು ನ–
ವೀನ ಹೃತ್ಪದ್ಮದೊಳು ಪೂರ್ಣ ಮ–
ಹಾನಿಜಂ ನೆಲೆಗೊಂಡು ತುಂಬಿ ವಿಜೃಂಭಿಸುತ್ತಿಹುದು || ೨೪ ||

ಲಿಂಗಪಂಚಕ ಪಂಚ ಸಾದಾ–
ಖ್ಯಂಗಳಂ ಗರ್ಭೀಕರಿಸಿ ರೂ–
ಪಿಂಗೆ ರೂಪಾಗಂಗದಲ್ಲಾಚಾರಮಾತ್ಮನೊಳು |
ತಾಂ ಗುರು ಪ್ರಾಣದೊಳು ಶಿವ ಚರ
ಲಿಂಗ ಮಿಂದ್ರಿಯ ದೊಳ್ ಪ್ರಸಾದಂ
ಸಂಗದೊಳು ನಿಜ ತೃಪ್ತಿಯೊಳು ಘನಲಿಂಗ ಮಾಗಿಹುದು || ೨೫ ||

ಒಂದರಾಧಾರದೆ ಚತುರ್ವಿಧ
ಬಿಂದು ಷಡ್ವಿಧ ಧಾತುಲಿಂಗದೊ
ಳಂ ದಶವಿಧ ಕ್ಷೇತ್ರಮಾ ನಾಭಿಯೊಳು ಹೃದಯದೊಳು ||
ಸಂದ ದ್ವಾದಶ ವಿಕೃತಿ ಕಂಠದೊ–
ಳೊಂದಿ ಷೋಡಶ ಕಲೆ ಸುಭ್ರೂಮ
ಧ್ಯೇಂದುಮಂಡಲದಾತ್ಮ ವಿದ್ಯಾಲಿಂಗ ಮಾಗಿಹುದು || ೨೬ ||

ಪೀನಮಜರಂಧ್ರದೊಳು ಸೌಖ್ಯ
ಸ್ಥಾನದೊಳು ಪಂಚ ಪ್ರಸಾದಂ
ಸ್ವಾನುಭಾವಂ ದ್ವಾರದೊಳು ನಿಂದರಿದು ಭಾವಿಸುವ ||
ಜ್ಞಾನ ಭಾವಂ ಬಲಿದು ಧ್ಯೇಯ
ಧ್ಯಾನ ಮೊಂದಾಗಷ್ಟ ವರ್ಗಾಂ
ತಾನುಭಾವ ವಿವೇಕ ಲಿಂಗಂ ಶಿಖಿಯೊಳಾಗಿಹುದು || ೨೭ ||

ಈ ಪ್ರಣವ ಸಂಸ್ಕರಣ ಲಯ ಗಮ–
ನಾಪ್ರದರ್ಶಿತ ಪಶ್ಚಿಮದೊಳು ನಿ–
ಜಾಪ್ರಮೇಯಾಖಂಡ ಬೋಧಾದ್ವಯ ಸದಾನಂದ ||
ಅಪ್ರತಿಮ ಚರಲಿಂಗಮಾಗಿಹು
ದು ಪ್ರಸಿದ್ಧ ಪ್ರಾಣಲಿಂಗ ವಿ–
ದೇ ಪ್ರಪೂರಿತಮಾಗಿ ತುಂಬಿ ವಿಜೃಂಭಿಸುತ್ತಿಹುದು || ೨೮ ||

ನಾಸಿಕಾಗ್ರದ ದೃಷ್ಟಿ ಲಿಂಗದೊ
ಳೋಸರಿಸದೀಕ್ಷಿಸಲು ಸತ್ಪ್ರಭೆ
ಸೂಸದಕ್ಷಿಯ ತುಂಬಿಯ್ದದು ಮನಮಂ ಪ್ರವೇಶಿಸಲು ||
ಆ ಸುಮನವೇ ಮಂತ್ರದೊಡವೆರ
ದಾ ಸುಮಂತ್ರಮೆ ಯೋಗಮಾಗಿ ನಿ–
ವಾಸ ನವ ಚಕ್ರಾಂಬುಜಂಗಳ ಬೆಳಗುತಿಹುದೊಲಿದು || ೨೯ ||

ತುಂಗಸಾನಂದೇಷ್ಟಲಿಂಗಮಿ–
ದಂಗಲಿಂಗಂ ಪ್ರಾಣಲಿಂಗಂ
ಮಂಗಳ ಮನೋಲಿಂಗಮನುಭಾವಲಿಂಗಮಾಭಾವ ||
ಲಿಂಗ ಸಂಪಿಲ್ಲಿಂಗಸತ್ಕ್ರಿಯೆ
ಲಿಂಗಮಖಿಳೇಂದ್ರಿಯಮೆ ಚಿದ್ಘನ–
ಲಿಂಗಮಾಗೊಳಹೊರಗೆ ಧಾರಣಮಾಗಿ ರಾಜಿಪುದು || ೩೦ ||

ಪಾಳಿಯಿಂ ತನು ಲಿಂಗಮಾಗಿಪ-
ದಾಳಿಗತಿಗತಿಯಿಲ್ಲಮಸನವ-
ನಾಳಸಂಚಲವರಿಯದಸುವೇ ಲಿಂಗರೂಪಾಗಿ |
ಕೇಳು ಮನವೇ ಲಿಂಗಮಾಗಿ ನಿ-
ರಾಳದಲ್ಲಿಯ ನೆನಹು ನಿಷ್ಪತಿ
ಪೇಳುವನುಭವ ಲಿಂಗಮಾಗಿ ವಿಚಾರವರಿಯಿತ್ತು || ೩೧ ||

ಭಾವಲಿಂಗಮುದಾಗಿ ನಿರಹಂ-
ಭಾವಮುಳವಟ್ಟಿತ್ತು ಜ್ಞಾನಮೆ
ತೀವಿ ಲಿಂಗಮುದಾಗಿ ಸೋಹಂಭಾವವರಿಯಿಸದು ||
ತೀವಿ ಸತ್ಕ್ರಿಯೆ ಲಿಂಗಮಾಗಿಯೆ
ಸಾವಧಾನವನರಿಯದಿಂದ್ರಿಯ-
ದೈವಮಾಗಖಿಳೇಂದ್ರಿಯಂಗಳ ಗಮನವಳಿಯಿತ್ತು || ೩೨ ||

ಈ ಪರಿಯ ಸರ್ವಾಂಗಲಿಂಗಂ
ಲೇಪಮಾಯ್ತಾಗಖಿಳತನುಗುಣ
ಲೋಪಮಾದುವು ಮಹವೆ ನೆಲೆಯಾಯ್ತಾಗಿ ನಿಷ್ಪತಿಯೆ ||
ವ್ಯಾಪಿಸಿತ್ತಾನಂದಸಚ್ಚಿ
ದ್ರೂಪಮಾಯ್ತಾ ಗೀಗಳವಿರಳ
ದೀಪಿಕಾಂತರ್ಬಾಹ್ಯಭೇದಮುದಳಿದು ನಿಜಮಾಯ್ತು || ೩೩ ||

ಮತ್ತಮಂತರ್ಬಾಹ್ಯವೆಂದಾ
ಡುತ್ತಿಹವನುಂ ನೀನೆ ಮಧ್ಯಮ
ಮುತ್ತಮಂಗಳಿವೆಂದು ಪೇಳ್ವನು ನೀನೆ ಇಂತುಭಯ ||
ತತ್ತ್ವಭೇದಮುದೆಂದು ಸತತಂ
ಬಿತ್ತರಿಪುವನು ನೀನೆ ನಿನ್ನಿಂ
ದತ್ತಲಿತ್ತಲು ಮಿಸುಕುಬಾರದು ನಿಜವನುಸಿರೆನಗೆ || ೩೪ ||

ಸಾರಮತಿ ಕೇಳ್ವೀರಶೈವಾ-
ಚಾರಕಂ ವೇದಾಂತದರಿವಿಗೆ
ದೂರವೆಂದಭ್ಯಂತರದ ಧಾರಣದಿಂದ ಬಾಹ್ಯ ||
ಧಾರಣವೆ ಘನವೆಂದೆನರಿವಾ-
ಚಾರವಂತರ್ಬಾಹ್ಯದೊಳು ಪರಿ-
ಪೂರವಾಗಿಹುದೀ ಮಹಾಘನಲಿಂಗವಂ ಬಿಡದೆ || ೩೫ ||

ಧರಿಸು ಷಟ್‌ಸ್ಥಾನದೊಳು ಕ್ರಮದಿಂ
ವರ ಜಟಾಗ್ರಂ ನಾಭಿಯಿಂ ಕೆಳ-
ಗರರೆ ಹಿಂಭಾಗದೊಳು ಧರಿಸಲು ದೋಷಮಹುದೆಂದು |
ನಿರುತ ಧಾರಣವರಿದು ಮಹಿಮಂ
ನಿರುಪಮೈಶ್ವರ್ಯಪ್ರದಾಮಲ-
ತರವಿಭೂತಿಯ ನಲಿದು ಧರಿಸೆಂದನು ಗುರೂತ್ತಮನು || ೩೬ ||

ಹೃದ್ಯಶಿವಯೋಗಾನುಭವ ನಿರ-
ವದ್ಯಪರತರ ನಿರ್ವಿಕಲ್ಪಾ-
ಭೇದ್ಯ ನಿರುಪಮ ನಿತ್ಯ ನಿರ್ಮಲಜೋದ್ಯಚಾರಿತ್ರ |
ಸಾಧ್ಯ ತತ್ವ ವಿಮರ್ಶನಾಯತ
ವೇದ್ಯ ನಿಜ ಗಂಭೀರನಭಹೃ-
ನ್ಮಧ್ಯ ಸಂವಿಜ್ಜ್ಯೋತಿ ಪರಮಾರಾಧ್ಯ ಜಯ ಜಯತು || ೩೭ ||

ಇದು ಸಮಸ್ತಶಿವಾನುಭಾವರ
ಪದಪಯೋರುಹಗಂಧಮದಷಟ್-
ಪದನು ಷಟ್‌ಸ್ಥಲಸಾರ್ವಭೌಮಂ ಚೆನ್ನವೃಷಭೇಂದ್ರಂ |
ವಿದಿತಮಾಗಿ ನಿರೂಪಿಸಿದ ಸ-
ಮ್ಮುದದ ಮಹಾ ಕ್ಷೇತ್ರಜ್ಞ ಸುಮನೋ-
ವಾದದೊಳು ಶಿವಧಾರಣಕ್ಕೇಕಾದಶ ಸ್ಥಲವು

ಇತಿ ಕ್ಷೇತ್ರಜ್ಞಸುಮನೋವಾದೇ ಲಿಂಗಧಾರಣ ವಿವರಣ
ಮೇಕಾದಶ ಪ್ರಕರಣಂ|| ಅಂತು ಸ್ಥಲ ಹನ್ನೊಂದಕ್ಕಂ
ಪದನು ೬೭೦ ( ೬೩೩ + ೩೭ )
ಘುಂಗಳ ಮಹಾ ಶ್ರೀ ಶ್ರೀ ಶ್ರೀ

ಶ್ರೀ ಗುರುಬಸವಲಿಂಗಾಯ ನಮಃ

# ಹನ್ನೆರಡನೆಯ ಪ್ರಕರಣಂ

## ವಿಭೂತಿ ಸ್ಥಲಂ

ಲಿಂಗಮುಂ ತಾಳ್ದಂಗದೊಳು ಶಿವ
ಲಿಂಗವೀಶಜ್ಞಾನವೃದ್ಧಿನಿ
ಜಾಂಗಮಾದ ವಿಭೂತಿಯಂ ಧರಿಸೆಂದ ದೇಶಿಕನು ‖ ಪಲ್ಲವಂ ‖

ವೈಸ್ಯ (ವಶ್ಯ) ವಾದಾ ದೃಶ್ಯರಹಿತಾ
ಲಸ್ಯಮತವೈರಸ್ಯ ಜಂಗಮ
ದಾಸ್ಯಗತ ದೃಶ್ಯಚಿನ್ಮಯಲಾಸ್ಯ *ಜಿತ ಸಂಸಾರ ‖
ಹಾಸ್ಯಸಾಮಂಜಸ್ಯಶಿವಸಾ–
ದೃಶ್ಯಸಂವಿತ್ಸಸ್ಯ ನಿರ್ಮಲ
ಕಾಶ್ಯಪಿ ಜಿತಾಸ್ಪೃಶ್ಯ ಲಿಂಗಮಯಾಸ್ಯರಾಲಿಪುದು ‖ ೧ ‖

ಸರ್ವಭುವನಗಳಲ್ಲಿಯುಂ ಮೇಣ್
ಸರ್ವದೇವ ಶ್ರೇಷ್ಠರಲ್ಲಿಯು
ಮುರ್ವಿಯೊಳು ಶಿವಲಿಂಗಧಾರಣಮಿದುವೆ ಘನವೆಂದು ‖
ನಿರ್ವಹಿಸಿ ತಾಳ್ದವನು ಬಳಿಕಾ
ಸರ್ವವಶ್ಯಪ್ರದ ವಿಭೂತಿಯ
ಸರ್ವಮಂಗಳವೆಂದು ಧರಿಸುವುದುತ್ತಮವ್ರತವು ‖ ೨ ‖

* ಮೇಲೆ ಗೆರೆ ಹಾಕಿದ್ದು ಸ್ವಂತ ಪಾಠ

ಆದಿಯೊಳು ನಿಜಗೂಢನಿರ್ನಾ-
ಮೋದಯಂ ಚೈತನ್ಯಶಾಶ್ವತ-
ಮಾದುದೆರಡನೆಯಲ್ಲಿ ವೃಷಭಾಕಾರಚಿದ್ರೂಪ ||
ವಿದೇ ಮೂರನೆಯಲ್ಲಿ ಚಿತ್ತಿನ
ಮೋದದಂಗಕೆ ಭೂಷಣಾಯ:ತ
ಮಾದುದಿದು ನಾಲ್ಕನೆಯೊಳನುಪಮಭಸ್ಮಧಾರಣವು || ೩ ||

ಆದಿಯಲ್ಲಿ ವಿಭೂತಿಯಂತ್ಯದೊ-
ಳೈದೆ ಪರಮಪರಾನುಭೂತಿಮ-
ಹೋದಯಂ ಮಧ್ಯದೊಳು ಪಂಚಕನಾಮ ಮಾಡಿದಸು ||
ಮೋದಧಾರಣ ಧೂಳನ ಸ್ನಾ-
ನಾದಿಕಕ್ರಿಯೆಯಿಂ ಸಮಂತ್ರಕ
ಭೇದ ವಿಮಲಧ್ಯಾನದಿಂ ಧರಿಪುದು ವಿಧಿಕ್ರಮದಿಂ || ೪ ||

ಸಚ್ಚಿದಾನಂದೈಕಪರಶಿವ
ಪಂಚಮುಖದಿಂ ಪಂಚಬೀಜಂ
ಪಂಚಕಲೆಯಿಂ ಕೃತಶರೀರಾದಿಕ ವಿಗತದೋಷ ||
ಪಂಚವರ್ಣದ ಧೇನುವದರಿಂ
ಸಂಚದಿಂ ದುರ್ಗಂಧಮುಖ್ಯಸ
ಮಂಚಿತಾದಿಕ ದೋಷವಿಲ್ಲದ ವಿಮಲಗೋಮಯವ || ೫ ||

ವಿಹಿತ ಪಂಚಬ್ರಹ್ಮಮಂತ್ರದೆ
ಗ್ರಹಣಕಬಳನಶೋಷಣಾದಿಕ
ದಹನಶೋಧನಮೆಂಬ ಪಂಚಕ್ರಿಯೆಗಳಿಂ ಭೂತಿ ||
ಮಹಿತ ಭಸಿತಂ ಭಸ್ಮಮಾಕ್ಷತಿ *
ರಹಿತ ರಕ್ಷಗಳೆಂಬ ವೈವಿಧ
ವಿಹ ವಿಭೂತಿಗಳುದಿಸಿದುವು ತಿಳಿಯಾಗಮಕ್ರಮದಿಂ || ೬ ||

* ಟಿ. ಕ್ಷತಿರಹಿತ = ಕ್ಷಾರ

ವಾರಣದೊಳ್ಯೈಶ್ವರ್ಯಸಂಪ-
ತ್ಕಾರಣಂ ಸರ್ವಾವಭಾಸನ-
ಕಾರಣಂ ಸರ್ವಾಘಭರ್ತ್ಸನಕಾರಣಂ ದುಃಖ ||
ಕಾರಣಾಧಿವ್ಯಾಧಿಸಂಹರ
ಕಾರಣಂ ಭವಭೀತಿರಕ್ಷಣ
ಕಾರಣಂ ಪೆಸರ್ವಡೆದು ಲೋಕಹಿತಾರ್ಥಮಾಗಿಹುದು || ೭ ||

ನಿತ್ಯದಲ್ಲಿ ವಿಭೂತಿ, ಕಾಮ್ಯದ
ಕೃತ್ಯದೊಳು ಭಸ್ಮವ, ನಿಮಿತ್ಯದೊ-
ಳತ್ಯಮಲಭಸಿತವನು, ಪ್ರಾಯಶ್ಚಿತ್ತಕಾಲದೊಳು ||
* ಪ್ರತ್ಯಯಕ್ಷತಿಯನ್ನು, ಪರತರ
ನಿತ್ಯಮುಕ್ತಿಯ ಕಾರ್ಯದೊಳ್ನಿಜ
ಸತ್ಯರಕ್ಷೆಯನೊಲಿದು ಧರಿಸುವುದಾಗಮಕ್ರಿಯೆಯು || ೮ ||

ಕಲ್ಪಮನುಕಲ್ಪೋಪಕಲ್ಪವು
ಕಲ್ಪಮೆಂದು ಚತುರ್ವಿಧಂ ಸಂ-
ಕಲ್ಪಪೂರ್ವೋಕ್ತ ಗ್ರಹಣ ಕಬಳನ ಮುಖಕ್ರಿಯೆಯಿಂ ||
ಕಲ್ಪಿಸಿಯೆ ಮಾಡಿದುದಮಲತರ
ಕಲ್ಪಮಕ್ಕುಂ ವನದೊಳೊಣಗಿದ-
ನಲ್ಪ ಗೋಮಯಮಿದನು ಚೂರ್ಣಿಸಿ ಮಾಳ್ಪುದನುಕಲ್ಪಂ || ೯ ||

ಮೊದಲು ದಹಿಸಿರ್ದುದನೆ ಸಿತವ-
ಸ್ತ್ರದೊಳು ಶೋಧಿಸಿಯದನು ಗೋಮೂ-
ತ್ರದೊಳು ಕಲಸುತೆ ಪಿಂಡಮಂ ಮಾಡುತ್ತೆ ಪೂರ್ವೋಕ್ತ ||
ವಿಧಿಯೊಳನುವಿಂ ಪಚಿಸಿ ಮಾಳ್ಪುದೆ
ಸದುಪಕಲ್ಪಮಿದನ್ಯರಿಂ ಮಾ-
ಡಿದುದಕಲ್ಪಮೆನಿಕ್ಕುಮೀನಾಲ್ವಿಧ ವಿಭೂತಿಗಳು || ೧೦ ||

---

* ಟ. ಕ್ಷತಿ= ಕ್ಷಾರ

ವೇದಶಾಸ್ತ್ರಾಗಮಪುರಾಣ ನಿ-
ಜೋದಯಾನಂದೈಕಸಂಪದ-
ನಾದಿಸಂಸಿದ್ಧ ಪ್ರಮಾಣಜ್ಞಾನಗಂಭೀರ ||
ಮೋದಭಕ್ತಿನಿರೂಢವೈರಾ-
ಗ್ಯಾದಿಪರಶಿವಮೂಲಚೈತ
ನ್ಯೋದಿತಾಮಲಮುಕ್ತಿಕಾರಣವಹ ವಿಭೂತಿಯನು ||೧೧||

ಸಾರಮತಿಯಿಂ ಗ್ರಹಿಸುತೊಂದಾ-
ಧಾರಬಿಲ್ವಾಶೋಕಚೂತಶಿ-
ಲಾರಮಾತಾರಪಾತ್ರಮಾದೊಡಮಾಗಲಂಶುಕದಾ ||
ಧಾರಮಾದೊಡೆ ಯಾಗಲಿವರೊಳ್
ಪೂರಮಾಗಿಯೆ ತುಂಬಿಕೊಂಡು ವಿ-
ಚಾರಸುಯಿಧಾನದೊಳು ಧರಿಸುವುದಾಗಮಕ್ರಿಯೆಯಿಂ ||೧೨||

ನಿತ್ಯನಿರ್ಮಲನಾದೊಡಂ ಸ್ವ-
ಪ್ರತ್ಯಯಬ್ರಹ್ಮಾತ್ಮನಾದೊಡ
ಮತ್ಯನುಪಮಶ್ರೇಷ್ಠರಾವುದನಾಚರಿಪರದನೇ ||
ಮರ್ತ್ಯರನುವರ್ತಿಪುದರಿಂ ಕೃತ-
ಕೃತ್ಯದುಪದೇಶಾರ್ಥಮಾಗಿಯೆ
ಸತ್ಯಮಂತ್ರನ್ಯಾಸಮುಖ್ಯಾಂಗಮುವನಾಚರಿಕ್ಕಂ ||೧೩||

ಸಕಲ ಸಾಂಗಿಕಮಾಗಿ ಲಿಂಗಾ-
ರ್ಚಕನು ಶಿವಮಂತ್ರೋಚ್ಚರಣದಿಂ
ನಿಕಟಸುಮನಶ್ಶುದ್ಧಿಯಿಂ ಕರಪದಮುಖಂಗಳನು ||
ಪ್ರಕಟಮಂತ್ರೋದಕದೆ ತೊಳೆದಾ-
ಸುಕರಪೂಜಾಗೃಹಮನೊಳ ಪೊ-
ಕ್ಕಕುಟಿಲೋನ್ನತಸಿದ್ಧಪೀಠದೊಳೈದೆ ಮಂಡಿಸುತೆ ||೧೪||

ಹೃದ್ಯಮಂತ್ರೋಚ್ಚರಣದಿಂ ನಿಜ
ವೇದ್ಯದಕ್ಷಿಣಕರದನಾಮಿಕ-
ಮಧ್ಯಮಾಂಗುಷ್ಠಂಗಳಿಂದಾಧಾರದಿಂ ತೆಗೆದು ||
ಸಾಧ್ಯಭಸ್ಮವ ವಾಮಕರತಳ-
ಮಧ್ಯದಲ್ಲಿರಿಸಂಗುಲಿಗಳಿಂ
ಭೇದ್ಯಮಪ್ಪೊಲ್ಮುಚ್ಚಿ ಮಂತ್ರಿಸಿ ಬಳಿಕಥಃಕರಿಸಿ || ೧೫ ||

ಸಲೆ ನಮಸ್ಕರಿಸುತ್ತೆ ಭಸ್ಮಕೆ
ಬಲದೊಡೆಯ ಮೇಲಿಟ್ಟು ಬಳಿಕವಿ-
ಕಲಮಹಾಮಂತ್ರೈಕರಾಜ ವಿಮೂಲಮಂತ್ರದೊಳು ||
ಒಲವಿನಿಂ ಪಸ್ನೊಂದು ಸೂಳಾ-
ಗಲಿಯದೇಳ್ಸೂಳಾದೊಡಾಗಲಿ
ನಲಿದು ಮಂತ್ರಿಸಿಯೂರ್ಧ್ವಕೆತ್ತಿ ಮಹಾವಿಭೂತಿಯನು || ೧೬ ||

ಪರಮಪಂಚಬ್ರಹ್ಮ ಪಂಚಾ-
ಕ್ಷರಗಳಿಂ ಮಸ್ತಕದೊಳೈಸೂ-
ಳ್ಪರಮುಖಾಂಬುಜದಲ್ಲಿ ನಾಲ್ಸೂಳ್ಪೂರ್ವಹೃದಯದೊಳು ||
ಕರದೊಳೆಣ್ಬಾರಿ ತ್ರಯೋದಶ
ದಿರವುಗುಹ್ಯದೊಳೆಂಟು ವೇಳೆಯೆ
ಚರಣಸಾರಸದಲ್ಲಿ ಸರ್ವಾಂಗದೊಳು ಧರಿಸುವದೇ || ೧೭ ||

ಚಿತ್ರದುದ್ಧೂಳನವು ಬಳಿಕ ಮ-
ಹಾತ್ರ್ಯಂಬಕಮಂತ್ರಮಾದೊಡ-
ಮಾತ್ರ್ಯಾಯುಷ ಮಂತ್ರಮಾದೊಡಮಾವಿಭೂತಿಯನು ||
ಪಾತ್ರಜಲಮಿಶ್ರವನು ಮಾಡಿ ಪ-
ವಿತ್ರ ಪಂಚಾದಶ ಪದಂಗಳೊ-
ಳೆ ತ್ರಿಪುಂಡ್ರಮನೊಲಿದು ಧರಿಸುವುದಿದುವೆ ಧಾರಣವು || ೧೮ ||

ವೇದ್ಯದಂಗುಷ್ಠದೊಳನಾಮಿಕ
ಮಧ್ಯಮೆಯೊಳನುಲೋಮವಾಗಲಿ
ಹೃದ್ಯಮಪ್ಪ ವಿಲೋಮವಾಗಲಿಯಲ್ಲವೆ ಅಕಾರಂ ||
ಆದ್ಯನಾಮಿಕರೂಪುಕಾರಮೆ
ಮಧ್ಯದಲಿಮಾಕ್ಷರವೆ ತರ್ಜನಿ
ಮಧ್ಯಮಾಂಗುಲದಿಂ ತ್ರಿಪುಂಡ್ರಮನೊಲಿದು ಧರಿಸುವುದು || ೧೯ ||

ಚಿತ್ರದಿಂ ಕಾಲತ್ರಯಂ ವೇ-
ದತ್ರಯಂ ಲೋಕತ್ರಯಂ ವ-
ರ್ಷತ್ರಯಂ ಗುಣತ್ರಯಾದ್ಯಗ್ನಿತ್ರಯಂ ಸಚ್ಚಿದಾ ||
ತ್ಮತ್ರಯಂ ಮೂರ್ತಿತ್ರಯಂ ತ-
ತ್ವತ್ರಯಂ ಭಾವತ್ರಯಂ ಲಿಂ-
ಗತ್ರಯಾತ್ಮಕವೆಂದು ಧರಿಸುವುದೀ ತ್ರಿಪುಂಡ್ರವನು || ೨೦ ||

ಮಲಿನ ಕಠಿಣಚ್ಛಿನ್ನ ವಕ್ರಾ
ಲಲಿತದೂರಾಭಿನ್ನ ಮೆಂಬಿವ
ತೊಲಗಿ ಶುಭ್ರವಿವಿಕ್ತಸಾಂದ್ರಸಮೀಪಭಿನ್ನಮಯಾ ||
ಕಲಿತಷಡ್ಲಕ್ಷಣಸಮೇತೋ-
ಜ್ವಲಿತಸದಮಳನತ್ರಿಪುಂಡ್ರವ
ನೊಲಿದು ದೃಗ್ಫಾಳಾಂತಮಾಗಿಯೇ ಧರಿಪುದೀ ಕ್ರಮದಿಂ || ೨೧ ||

ಮೂಲಪಂಚಾಕ್ಷರಗಳಿಂದಂ
ವಿಲಾಸ ಪಂಚಬ್ರಹ್ಮಮಂತ್ರದಿ
ನಾ ಲಲಿತಮಸ್ತಕಮುಖಾಂಬುಜಹೃದಯ ಗುಹ್ಯಾಂಘ್ರಿ ||
ಕೀಲಿತಾಖಿಲದೇಹಮೆಂಬೀ
ಲೋಲಷಟ್‌ಸ್ಥಾನಂಗಳೊಳು
ಸಲ್ಲೀಲೆಯಿಂ ಸಂಪ್ರೋಕ್ಷಣಂಗೈಯ್ವುದೆ ಮಹಾಸ್ನಾನಂ || ೨೨ ||

ಮಹಿತ ಭಸ್ಮಸ್ನಾನಮಿಂತಿದೆ
ವಿಹಿತಮಾಜ್ಞಾ ಸಿದ್ಧಿಕಾರಣ
ಸಹಿತಮುತ್ತಮಮಿದನು ದ್ವಾತ್ರಿಂಶಸ್ಥಲಂಗಳೊಳು ||
ಸುಹಿತದಾಗಮಮಾರ್ಗದಿಂ ಸ-
ನ್ನಿಹಿತಮತಿಯಿಂ ಧರಿಸೆ ಬಂಧವಿ-
ರಹಿತಮೋಕ್ಷಾಂಗನೆಯ ಪಾಣಿಗ್ರಹಣಕನುವಹನು || ೨೩ ||

ಜಲಮುಖ ಸ್ನಾನಂಗಳಿಂದಮೆ
ಮಲಿನಮಾತ್ರವೆ ಪೋಪುದಲ್ಲದೆ
ಲಲಿತಮೋಕ್ಷಂ ಸಿದ್ಧಿಯಾಗದು ತಜ್ಜಲಸ್ನಾನಂ ||
ಬಲಿದ ಹಿಂಸೆ ತದೀಯ ಹಿಂಸೆಯೆ
ಮಲಿನಮಾಯೆ ಕುಮಾಯೆ ಬಂಧಂ
ಕಲುಷ ಪುಣ್ಯಸ್ವರ್ಗನರಕಗಳೆಂದು ಶ್ರುತಿಮತವು || ೨೪ ||

ಪಾತಕದ ಸಂಸಾರ ಬಂಧವ
ನೇತಿಗಳದತಿ ಮೋಕ್ಷಮೀವ ಪು-
ನೀತ ಭಸ್ಮಸ್ನಾನದೊಳು ನಿಷ್ಠಾತ್ಮರನವರತ ||
ಘೂತ ರೂಪಕದನುಪಮರು ನಿ-
ರ್ಜಾತರೀ ಶಿವತತ್ವನಿರ್ಣಯ
ರಾತುಮಾನಂದೈಕ್ಯಪದಯುತರೆನಲು ರಾಜಿಪರು || ೨೫ ||

ಯತಿಗಳುಂಜಲಮಿಶ್ರಮಿಲ್ಲದೆ,
ಸತಿ ಗೃಹಸ್ಥರು ಸತತ ಸಲಿಲಾ
ನ್ವಿತದೊಳಾಕನ್ಯೆಯರು ವಾನಪ್ರಸ್ಥರಧಿಕ ಪ್ರಾ ||
ಕೃತರು ಮಧ್ಯಾಹ್ನಾಂತಮರ್ಣೋ-
ದ್ಯತನಮಾಗಿಯೆ, ಮೇಲೆ ಕೇವಲ,
ಸ್ಥಿತ ವಿಭೂತಿಯನೊಲಿದು ಧರಿಸುವುದಾಗಮಕ್ರಮವು || ೨೬ ||

ಸ್ನಾನಮುದ್ಧೂಳನವು ಧಾರಣ-
ವೀ ನಯಕ್ರಮದಿಂ ತ್ರಿಸಂಧ್ಯೆಯೊ-
ಳೀ ನಿಗೂಢ ವಿಭೂತಿಯಂ ಮುದವಲರಿ ಧರಿಸುವುದೆ ||
ಮಾನಿತ ಶಿರೋವ್ರತವು ಸಂಸಾ-
ರಾನುಬಂಧಮನಳಿವುದೆಂದಿದು
ತಾನೆ ವೇದಾಗಮದೊಳಲೆ ಸಂಸಿದ್ಧಮಾಗಿಹುದು || ೨೭ ||

ಸಕಲ ಮನು ಮುನಿ ದೇವತಾಳಿ
ಪ್ರಕಟ ಮೋಕ್ಷಪ್ರದಮಿದೆಂದರಿ-
ದಕುಟಿಲದೆ ಧರಿಸಿದರು ಸುಮಂಗಳಾತ್ಮಕ ಮಾಗಿದನು ||
ಸಕಲ ವರ್ಣಿಗಳಾಶ್ರಮಿಗಳುಂ
ಸಕಲ ಮತದಭಿಮಾನಿಗಳು ಮೀ
ಸುಕರಭಸ್ಮವ ಧರಿಸುವುದೆ ಯೋಗ್ಯವು ವಿಚಾರಿಸಲು || ೨೮ ||

ಪ್ರಣವ ಕಳೆ ಪಂಚಾಕ್ಷರಿ ಬೆಳಗು
ಗುಣದನಿಧಿ ಸುಜ್ಞಾನವಾರಿಧಿ
ತ್ರಿಣಯತೇಜಂ ತಿಲಕರಾಜಂ ಗಣಮನೋಭುವನ ||
ಮಣಿಗಭಸ್ತಿ ಶುಭಪ್ರಶಸ್ತಿ
ಪ್ರಣಮಿತಶ್ರುತಿವಿಗತಸಂಸೃತಿ
ಗಣಿತರಹಿತಂ ಸರ್ವವಿಹಿತಂ ತಣಿವು ನಿಜಸುಖದ || ೨೯ ||

ಮೃತ್ಯುದಂಷ್ಟ್ರಂಗಳನು ಕೀಳುತ
ನಿತ್ಯಕಾಲನ ದಂಡಮಂ ಮುರಿ-
ದತ್ಯಧಿಕದುರ್ಲಿಖಿತಮಂ ತೊಡೆದಾವಿಧಿನಿಷೇಧ ||
ಕೃತ್ಯ ಸಂಸಾರಭ್ರಮಣಮಂ
ನಿತ್ಯಮಲ್ತೆಂದೆನಿಸಿ ನಿರುಪಮ
ಸತ್ಯ ಪರಶಿವಮೋಕ್ಷಮಂದಿರದಲ್ಲಿ ಕೊಡುವುದು || ೩೦ ||

ಇಂತು ಪೊರಗೊಳಗುಭಯಭಸ್ಮ
ಭ್ರಾಂತಿಯಿಂ ಸಚ್ಚಿತ್ಪ್ರಕಾಶಮ-
ನಾಂತು ಪರಮೇಶ್ವರಸಮಾರಾಧನೆಯ ಪಡೆದಾತಂ ||
ಮಂತೆ ಲೋಕಹಿತಾರ್ಥಮಾಗಿ ಮ-
ಹಂತ ಶಿವನಕ್ಷಿಗಳೊಳೊಗೆದ ನಿ-
ತಾಂತ ರುದ್ರಾಕ್ಷಿಯನು ಧರಿಸೆಂದನು ಗುರೂತ್ತಮನು || ೩೧ ||

ಇದು ಸಮಸ್ತ ಶಿವಾನುಭಾವರ
ಪದ ಪಯೋರುಹ ಗಂಧಮದ ಷ-
ಟ್ಪದನು ಷಟ್‌ಸ್ಥಲಸಾರ್ವಭೌಮಂ ಚೆನ್ನವೃಷಭೇಂದ್ರಂ ||
ವಿದಿತಮಾಗಿ ನಿರೂಪಿಸಿದ ಸ-
ಮ್ಮುದ ಮಹಾಕ್ಷೇತ್ರಜ್ಞ ಸುಮನಃ
ಕದನದೊಳು ಭಸ್ಮಾನುಲೇಪಕ ದ್ವಾದಶಸ್ಥಲವು

ಇತಿ ಕ್ಷೇತ್ರಜ್ಞ ಸುಮನೋವಾದೇ ಶ್ರೀ ಮದ್ಭಸ್ಮಧಾರಣ
ವಿವರಣಂ ದ್ವಾದಶ ಪ್ರಕರಣಂ
ಅಂತು ಸ್ಥಲವನ್ನೆರಡಕ್ಕಂ ಪದನು ೬೯೧ಕ್ಕಂ
( ೬೬೦ + ೩೧ ) ಸಮಾಪ್ತಂ ||
ಮಂಗಳ ಮಹಾ ಶ್ರೀ ಶ್ರೀ ಶ್ರೀ

ಶ್ರೀಗುರು ಬಸವಲಿಂಗಾಯ ನಮಃ

# ಹದಿಮೂರನೆಯ ಪ್ರಕರಣಂ

## ರುದ್ರಾಕ್ಷಿ ಸ್ಥಲಂ

ಅಕ್ಷಯಶ್ರೀಭಸ್ಮವಿಗ್ರಹ
ಲಕ್ಷಣಾಂಕಿತನಾದವಂ ರು-
ದ್ರಾಕ್ಷಿಯಂ ಧರಿಸೆಂದನೀಕ್ರಮದಿಂ ಗುರೂತ್ತಮಸು ‖ ಪಲ್ಲವಂ

ಸಭ್ಯಸಂಗಾಂಗೀಕೃತಾನುಭ-
ವಾಭ್ಯುದಯ ಗುರುಕರುಣಲಬ್ಧಾ-
ರಭ್ಯ ಶಿವಲಿಂಗಾರ್ಚನಾಪರ ಜಂಗಮಶ್ರದ್ಧಾ |
ಅಭ್ಯುಪಗಮಾನಂದ ಮೋಕ್ಷ-
ಲಭ್ಯ ಶರಣಪದಾಬ್ಜ ನವಸೌ-
ರಭ್ಯ ಮಧುಕರ ನಿಗಮತತಿದೌರ್ಲಭ್ಯರಾಲಿಪುದು ‖೧‖

ಶ್ರೀವಿಭೂತಿಯ ಧರಿಸಿ ಶಿವಲಿಂ-
ಗಾವಸರಮಂ ಮಾಳ್ಪ ಶರಣಂ
ತೀವಿ ಪರಮೇಶ್ವರನ ಸುಮಹಜ್ಜ್ಞಾನಚಕ್ಷುವಿನಿಂ ‖
ಓವಿ ಲೋಕಹಿತಾರ್ಥಮಾಗಿಯೆ
ಭಾವಿಸಲು ಜನಿಸಿರ್ಪ ರುದ್ರಾ-
ಕ್ಷಾವಳಿಯನರಿದಾಗಮಸ್ಥಾನದೊಳು ಧರಿಸುವುದು ‖೨‖

ಸುಹಿತಪರಮೇಶ್ವರನು ತ್ರೈಪುರ-
ದಹನಲೀಲಾಸಮಯದಲ್ಲಿಯೆ
ಮಿಹಿರಚಂದ್ರಜ್ವಲನನೇತ್ರತ್ರಯಃದಿನೀಕ್ಷಿಸಲು ||
ವಿಹಿತಜಲಬಿಂದುಗಳವನಿಯೊಳು
ನಿಹಿತಮಾಗಿಯೆ ಬೀಳಲೊಗೆದುವು
ಮಹಿತರುದ್ರಾಕ್ಷಂಗಳಷ್ಟತ್ರಿಂಶ ಭೇದದೊಳು || ೩ ||

ಮತ್ತೆ ಸರ್ವಾನುಗ್ರಹಾರ್ಥಂ
ಚಿತ್ತ ಶಶಿಲೋಚನದೆ ಶುಭ್ರಾ-
ಯತ್ತಷೋಡಶಭೇದದಿಂ ರವಿನೇತ್ರದಿಂ ರಕ್ತ ||
ಉತ್ತಮದ್ವಾದಶ ವಿಭೇದದಿ-
ನುತ್ತರಾಗ್ನೀಕ್ಷಣದೆ ಕೃಷ್ಣೋ-
ದಾತ್ತದಶವಿಧದಿಂ ಮಹಾರುದ್ರಾಕ್ಷಿ ಜನಿಸಿದವು || ೪ ||

ಸ್ಮರಣಮಾತ್ರದೆ ಪಾಪಮಂ ಸಂ-
ಹರಿಸಿ ನೋಡಿದ ಮಾತ್ರಕರ್ಮೋ-
ತ್ಕರಮನಿಳಿಯಲ್ಕೊಂಕಿ ಮುಟ್ಟಿದ ಮಾತ್ರದಿಂ ಭವವ ||
ಒರಸಿ ಧಾರಣಮಾತ್ರದಿಂದವೆ
ಪರಮರುದ್ರತ್ವವನು ನಿಜದಿಂ
ಧರಿಸಿ ಸದ್ಯೋನ್ಮುಕ್ತಿಯಂ ಪಾಲಿಪುದರಿಂದಿವರ || ೫ ||

ಉನ್ನತಸ್ಥಾನಮೇ ಸುತುಂಡ-
ಮಿನ್ನುನಿಮ್ನೋನ್ನಯಮೆ ಪೃಷ್ಠಂ
ನನ್ನಿಯಂ ತಿಳಿವುದಕೆ ರೇಖೆಯೆ ಲಪನ ರುದ್ರಾಕ್ಷಾ ||
ಸನ್ನಮೂಲವೆ ಬ್ರಹ್ಮ ನಾಳವೆ
ಚೆನ್ನವಿಷ್ಣುವು ವದನ ರುದ್ರನು
ಭಿನ್ನಕೇಸರಗಳೇ ಸಕಲ ದೇವತೆಗಳೆಂದರಿದು || ೬ ||

ರುದ್ರನಕ್ಷಿಯೊಳೊಗೆದುವಾಗಿಯೆ
ಭದ್ರರುದ್ರಾಕ್ಷಾಭಿಧಾನ
ಕ್ಷುದ್ರಸಂಸಾರಾದಿವಿಗತೋಪದ್ರವಮಣಿಗಳನು ||
ಮುದ್ರಿತಸ್ಥಾನಾಸ್ಯಗಣ ವಿಲ
ಸದ್ರಮಾಕರಭೇದವರಿದು ವಿ
ನಿದ್ರಿತಾನಂದೈಕಮತಿಯಿಂದೊಲಿದು ಧರಿಸುವುದು || ೭ ||

ದುರ್ನಯಾತಿಸ್ಥೂಲಸೂಕ್ಷ್ಮವಿ-
ಚೀರ್ಣಭಿನ್ನವ್ರಣಲಘುಪ್ರವಿ
ಕೀರ್ಣಕಂಟಕಪೂರ್ವಧಾರಣಮಣಿಗಳಂ ತ್ಯಜಿಸಿ ||
ಸ್ವರ್ಣಕಾಂತ್ಯುತ್ತಮಸುವೃತ್ತಾ-
ಕರ್ಣದೃಢದೃಕ್ಪ್ರೀತಿಮಣಿಯಂ
ನಿರ್ಣಯದೆ ಸರಗೊಳಿಸಿ ಧರಿಸುವುದುತ್ತಮ ವ್ರತವು || ೮ ||

ಸೊಗಸದಿಹಸಂಸಾರನಾಶಾ-
ದಿಗೆ ಮಹಾಕರ್ಮಾಕ್ಷಯಾರ್ಥ-
ಕ್ಕಗಿವ ಮಾಯಾದಿಪ್ರಪಂಚೋತ್ಕರವಿಯೋಗಕ್ಕೆ ||
ಬಗೆವ ವರ್ಗಭ್ರಮಣಹರಣಕೆ
ಬಗೆದು ಸಮ್ಯಕ್ಜ್ಞಾನದಭಿವೃ-
ದ್ಧಿಗೆ ಸದಾ ಮೋಕ್ಷಾರ್ಥಮಾಗಿಯೆ ಧರಿಸುವುದು ಮುದದಿಂ || ೯ ||

ಪಶುವಿಘಾತಂ ಭ್ರೂಣಹತ್ಯಂ
ನಿಶಿತವೈರಿಬ್ರಹ್ಮಹತ್ಯಂ
ವಸಿತ ದುರಿತಾಭಕ್ಷ್ಯಭಕ್ಷಣ ಮನುಜಪಿತೃಮಾತೃ ||
ವಿಶದವಧೆ ಗುರುತಲ್ಪಗಂ ಕ-
ರ್ಕಶದ ಭೂತಪ್ರೇತರಾಕ್ಷಸ
ಕೃಶಭಯಂಕರ ಮುಖ್ಯವಿಘ್ನಂಗಳನು ಪರಿಹರಿಸಿ || ೧೦ ||

ಸರ್ವಸಿದ್ಧಿಗಳಂ ಸುಖಂಗಳ
ಸರ್ವವಶ್ಯಗಳಂ ವಿಜಯಮುಂ
* ಸರ್ವಮಾಂಗಲ್ಯೋತ್ತಮದಾಕರಮುಶ್ವಮೇಧಾದಿ ||
ಸರ್ವಪುಣ್ಯಮನವಿಕಲತ್ವವ
ಸರ್ವಮೋಕ್ಷಮನೀವುದೊಲವಿಂ
ಸರ್ವಪಾವನ ಶಿಷ್ಟರುದ್ರಾಕ್ಷಿಯನು ಧರಿಸಿದೊಡೆ ||೧೧||

ಏನ ಪೇಳ್ವೆನು ತತ್ಫಲಂಗಳ-
ನಾ ನಳಿನಭವ ದಶಮುಖಾದಿ ಷ-
ಡಾನನಫಣೀಂದ್ರರಿಗಶಕ್ಯಂ ತನ್ಮಹಾತ್ಮೆಯದು ||
ಮಾನಿತಾಖಿಳಪುಣ್ಯಪುಂಜಂ
ಜ್ಞಾನನಿಧಿಶಿವಶರಣಜನಸುಮ-
ನೋನುರಥವಹ ಮೂಲಭೂಷಣವೆನಿಸಿ ರಾಜಿಪುದು ||೧೨||

ಗಣಿಸೆ ಪಶ್ಚಿಮದಲ್ಲಿಯೊರ್ಮುಖ-
ಮಣಿಯನುಭಯ ತ್ರಿದಶ ಲಪನದ
ಮಣಿಗಳಂ ಮೂರಂ ಶಿಖಿಯೊಳೇಕಾದಶಾನನದ ||
ಮಣಿಗಳಂ ಷಟ್ತ್ರಿಂಶಮುಂ ಕಾ-
ರಣದ ಶಿರಮಂ ಬಳಸಿ ಧರಿಸುವು-
ದಣಿಯರಂ ಕರ್ಣದ್ವಯಂಗಳೊಳಾಗಮಕ್ರಮದಿಂ ||೧೩||

ಐದುಹತ್ತೇಳ್ಮುಖದ ಮಣಿಗಳ-
ನೈದಲೆರಡೆರಡಾಗಿ ಯಾರಾ-
ರಾದೊಡೊಂದೊಂದಾದಡಂ ಧರಿಸುವುದು ಕಂಠದೊಳು ||
ಮೋದಪಡಷ್ಟಾನನ ಮಣಿಯನ-
ಭೇದದಿಂ ದ್ವಾತ್ರಿಂಶಮುಂ ಸ-
ಮ್ಮೋದದುರದೊಳು ನಾಲ್ಕುಮೊಗ ದೈವತ್ತು ಮಣಿಗಳನು ||೧೪||

---

* ಪಾ. ಮಾಂಗಲ್ಯೋತ್ಕರಾಕರ

ತೋರುತಿಹ ಬಾಹುದ್ವಯಕೆ ಪದಿ-
ನೂರುವಕ್ತ್ರದ ಮಣಿಗಳಂ ಪದಿ-
ನಾರು ಪದಿನಾರಾಗಿ ಮಣಿಬಂಧದೊಳು ನವಮುಖದಿಂ ||
ಬೀರುವೆರಡೀರಾರು ಮಣಿಯಂ
ಮೀರದನಿಶಂ ಯಜ್ಞಸೂತ್ರಕೆ
ಬೇರೆ ಪದಿನಾಲ್ಕಾಸ್ಯ ಮಣಿಯಂ ಧರಿಸು ನೂರೆಂಟು ||೧೫||

ಉದರ ಬಂಧಕ್ಕಾವ ಮುಖವೂ-
ಗೊದವಿದ ಮಣಿಗಳಾದೊಡಂ ಸಂ-
ಮುದದೊಳೊಲಿದೈವತ್ತುನಾಲ್ಕಂ ಧರಿಪುದೀಕ್ರಮದ ||
ವಿದಿತಮಣಿಗಳು ದೊರಕದಿರ್ದೊಡೆ
ಪಡೆದನಿತು ಮುಖಮಾದೊಡಂ ತ-
ಪ್ಪದೆ ಗಣಸ್ಥಾನಗಳನನಿಶಂ ತಿಳಿದು ಧರಿಸುವುದು ||೧೬||

ಮುತ್ತು-ಮಾಣಿಕ-ಪವಳ-ಮರ-
ಕತ-ಪುತ್ರಜೀವಿ-ಸ್ಫಟಿಕ-ಪಾದರ-
ಸೋಕ್ತಮಕುಟಗ್ರಂಥಿರಜತ-ಸುವರ್ಣ-ಶಂಖಗಳ ||
ವೃತ್ತಮಣಿಮಾಲೆಗಳ ಜಪದಿಂ-
ದುತ್ತರೋತ್ತರ ಸರ್ವಸಿದ್ಧಿಗ-
ಳತ್ತ ಸಾರ್ಜವವೆಂದು ತಿಳಿದಿವಕತ್ಯಧಿಕ ಮೆನಿಪ ||೧೭||

ದುಷ್ಟಸಂಸಾರಪ್ರಪಂಚಾ-
ನಿಷ್ಟಮಂ ಪರಿಹರಿಸಿ ಸರ್ವಾ-
ಭೀಷ್ಟಸಿದ್ಧಿಯನೀವಮಳರುದ್ರಾಕ್ಷಮಾಲೆಗಳಿಂ ||
ಶಿಷ್ಟ ಜಪಮಂ ನಿತ್ಯಸರ್ವೋ-
ತ್ಕೃಷ್ಟಮೋಕ್ಷಾಪೇಕ್ಷನಾ(ರಾ)ಗಿ ಮ
ಹೇಷ್ಟಲಿಂಗಾರ್ಚಕರು ಮುದದಿಂ ಮಾಳ್ಪುದನವರತ ||೧೮||

ಮೇರುಶೂನ್ಯೈಕಾದಶಗಳಿಂ
ಚಾರುಸಪ್ತಕವಿಂಶತಿಗಳಿಂ ಪ-
ಸರ ದಷ್ಟೋತ್ತರ ಶತಕಗಳನನ್ಯ ಮಾಲೆಗಳಿಂ ||
ಪಾರಮಾರ್ಥಧ್ಯಾನಹೃದಯ
ಪೂರಿತಾಂತಃಕರಣನಾಗಿ ವಿ- ||
ಚಾರದಿಂ ಶಿವ ಮಂತ್ರಯುಕ್ತ ಜಪವ ಮಾಡುವುದು || ೧೯ ||

ವಿವಿಧರುದ್ರಾಕ್ಷಮಾಲೆಗಳಿಂ-
ದವೆ ಮನೋಜನ ಬಿಲ್ಲ ಮುರಿವು-
ತ್ತವೆ ಮಹಾಮೃತ್ಯುವಿನ ದಂಷ್ಟ್ರಗಳನು ಕೀಳುತವೆ ||
ಜವನ ಕಣ್ಗೆಮ ಮಣ್ಣ ಪೊಯ್ಯು-
ತ್ತವೆ ಭವದ ಗ್ರಂಥಿಯನು ಭೇದಿಸು
ತ್ತವೆ ವಿಮೋಕ್ಷಾಗಾರದಲ್ಲಿ ವಿರಾಜಿಸುತ್ತಿಹಸು || ೨೦ ||

ಸಂಗತಾಹಂಭಾವದಳಿವೇ
ಲಿಂಗ ಸಮ್ಯಕ್‌ಜ್ಞಾನಮಗ್ನಮೆ
ಸಾಂಗಭಸ್ಮಸ್ನಾನ ಸುಮನೋಮುಖಚತುರ್ದಶಕ ||
ಮಂಗಳೇಂದ್ರಿಯಕುಲಮೆ ರುದ್ರಾ
ಕ್ಷಂಗಳಾಗಿರೆ ಧಾರಣಂಗೆ-
ಯ್ದಂಗವಿಸಿ ಸನ್ಮೂಲಮಂತ್ರಮನೊಲಿದು ಜಪಿಸುವುದು || ೨೧ ||

ಇದು ಸಮಸ್ತಶಿವಾನುಭಾವರ
ಪದಪಯೋರುಹಗಂಧಮದಷ-
ಟ್ಪದನು ಷಟ್ಸ್ಥಲಸಾರ್ವಭೌಮಂ ಚೆನ್ನವೃಷಭೇಂದ್ರಂ ||
ವಿದಿತಮಾಗಿ ನಿರೂಪಿಸಿದ ಸ-
ಮ್ಮುದಮಹಾಕ್ಷೇತ್ರಜ್ಞ ಸುಮನಃ—
ಕದನದೊಳ್ಮಣಿ ಧಾರಣಕ್ಕೆ ತ್ರಯೋದಶ ಸ್ಥಲವು ||

ಇತಿಕ್ಷೇತ್ರಜ್ಞ ಸುಮನೋವಾದೇ ರುದ್ರಾಕ್ಷಧಾರಣವಿವರಣಂ
ತ್ರಯೋದಶ ಸ್ಥಲಂ ||

ಅಂತು ಸ್ಥಲ ಪದಿವಮೂರಕ್ಕಂ ಪದನು ೭೧೨ (೬೯೧+೨೧) ಕ್ಕಂ
ಸಮಾಪ್ತಂ ಮಂಗಳ ಮಹಾ ಶ್ರೀ ಶ್ರೀ ಶ್ರೀ

ಶ್ರೀಗುರು ಬಸವಲಿಂಗಾಯ ನಮಃ

# ಹದಿನಾಲ್ಕನೆಯ ಪ್ರಕರಣಂ

## ಪಂಚಾಕ್ಷರಿಯ ಸ್ಥಲಂ

ಭಸ್ಮ ರುದ್ರಾಕ್ಷಿಗಳ ಧರಿಸಿಯೆ
ಭಸ್ಮ ಸಂಸಾರಾರ್ಣವ ವಹಿ
ತ್ರಸ್ಮರಣರೂಪಕ ಮಹಾಮಂತ್ರವನು ಜಪಿಸುವುದು ‖ ಪಲ್ಲವ ‖

ಸಾಮ್ಯವಿರಹಿತ ಸೌಮ್ಯಮತ ವೈ
ಷಮ್ಯ ಶಿವನೈಯಮ್ಯಯುಕ್ತಾ
ಗ್ರಾಮ್ಯ ವಿಗತಾಕ್ರಮ್ಯಭಾವ ಸ್ವಾಮ್ಯಹಂತಾರ ‖
ತಮ್ಯ ಪರಶಿವ ಸಮ್ಯಗನುಭವ
ರಮ್ಯ ದುರ್ಗಮಗಮ್ಯ ಬಂಧುರ
ಕಾಮ್ಯಫಲದಾನಾಮ್ಯಜಾ ನೌಮಪ್ಯರಾಲಿಪುದು ‖ ೧ ‖

ಶ್ರೀಭಸಿತರುದ್ರಾಕ್ಷಧಾರಣ
ಶೋಭನಾಂಚಿತ ಲಿಂಗಪೂಜಾ
ವೈಭವಾರಂಭಾದಿ ಕೋದ್ಯುಕ್ತಾಂಗ ನಾದವನು ‖
ಆ ಭವಾಬ್ಧಿ ವಹಿತ್ರ ಕುಮತವ
ದೇಭ ಪಂಚಾನನ ಸುಪೂರ್ಣಯ
ಶೋಭರಿತ ಸನ್ಮೂಲಮಂತ್ರಮನೊಲಿದು ಜಪಿಸುವುದು ‖ ೨ ‖

ಆ ನಿರಂಜನದಿಂ ವಿಚಾರ ಮ–
ಹಾನುಭ ವಿದ್ಯಾದಿಬೀಜ ಸ
ದಾನುಪಮ ಸತ್ಯಾಷ್ಟವರ್ಗಾಂತ್ಯಾಕ್ಷರ ತಾಮಹಾ ||
ಜ್ಞಾನ ಬಿಂದ್ವಾಕಾರ ಮದರಿಂ
ಮಾನನಿಧಿ ಬಸವಾಕ್ಷರತ್ರಯ
ಮೀ ನವಾರ್ಣಂಗಳಿನವಾಗ್ಜ ಕಲೋದಯಂ ಬಳಿಕ || ೩ ||

ಆ ಪ್ರವಣದಿಂದೋಮನಾದಿ ಪ
ರ ಪ್ರಣವವಾಚ್ಯಾನುರೂಪ ನಿ
ಜ ಪ್ರಸತ್ಯಜ್ಞಾನ ಮುಖ್ಯ ಸುಲಕ್ಷಣೋದ್ಯುಕ್ತ ||
ಅಪ್ರತಿಮ ಚಿತ್ತೆಂಬ ಚಿನ್ನಾ
ದ ಪ್ರಭವಮದರಿಂದಕಾರ ಮ
ಹಾ ಪ್ರಮಾಣೋಕಾರ ಮಾಕ್ಷರಮುದಯ ಮಿವರಿಂದಂ || ೪ ||

ಆದ್ಯ ಪರಮಂತ್ರಾತ್ಮವಾಚಕ
ವೇದ್ಯ ಶಬ್ದಾದಿಸ್ವರೂಪಕ
ಹೃದ್ಯ ಷಡ್ವರ್ಗಾದಿ ಷಟ್ಕೃತಿ ರೂಪಿನಿಂ ತಾನೆ ||
ಚೋದ್ಯ ಕರದೋಂಕಾರಮಿದೆ ನಾ
ದಾದ್ಯನುಪಮಬ್ರಹ್ಮಮೇ ವೇ
ದಾದ್ಯಮಲಹೃನ್ನಾದನಾದಂ ವೇದಭೂಮ್ಯಾದಿ || ೫ ||

ರಾಜಿತ ಜ್ಞಾನಂ ಶಿವಾತ್ಮಕ
ಮೋಜೆಯಿಂ ಸರ್ವಾತ್ಮವಿದ್ಯಾ
ಬೀಜಮಂತ್ರಪ್ರಾಣ ನಿಷ್ಕಲಮಾತ್ಮ ಮಂತ್ರಮೆನೆ ||
ನೈಜದಿಂ ಬ್ರಹ್ಮಾತ್ಮ ತೇಜೋ
ಬೀಜ ಮುಕ್ತಿವಿಬೀಜಮಕ್ಷರ
ಬೀಜಮೆಂಬಿತ್ಯಾದಿ ನಾಮಂಗಳಿನುದಯಿಸಿತ್ತು || ೬ ||

ಪ್ರಣವ ಷಟ್‌ಕೃತಿಗಳಿಂ ಪಂಚ
ಪ್ರಣವಮಾ ತಾರಕಾಕೃತಿಯೆ
ಪ್ರಣವಮಹುದೀ ಷಡಕ್ಷರದಿಂ ಸುಬಾವನ್ನ ॥
ಸುಪ್ರತಿಷ್ಠಿತ ವರ್ಣಮುವರಿಂ
ದೀಪ್ರಕಟ ವೇದಸ್ವರಾದ್ಯಖಿ
ಲ ಪ್ರಮಾಣಗಳಾದುವೆಂದರಿವುದು ವಿಚಾರದೊಳು ॥ ೭ ॥

ಮೂಲಪಂಚಾಕ್ಷರವು ವಿಮಲ
ಸ್ಥೂಲಪಂಚಾಕ್ಷರವು ಸೂಕ್ಷ್ಮತ್ರಿ
ಲೋಲ ಪಂಚಾಕ್ಷರವು ಪಂಚಾಕ್ಷರವು ಪ್ರಸಾದ ॥
ಜ್ವಾಲೆ ಮಾಯಾಖ್ಯಾರ್ಣ ಪಂಚಕೆ
ಮೂಲಪಂಚಾಕ್ಷರಮೆ ಯೋಗ್ಯಂ
ಲೀಲೆಯಿಂದೀ ಪಂಚ ಪಂಚಾಕ್ಷರಿಗಳೊಳು ತಿಳಿಯೆ ॥ ೮ ॥

ಅಪ್ರಮಾಣಾನಂದ ಸಾಕ
ಲ್ಯಪ್ರಣವ ಶಾಂಭವಮಹಾಪ್ರಣ
ವ ಪ್ರಕಟಸೌಖ್ಯಪ್ರಣವ ಸಾವಶ್ಯಸುಪ್ರಣವ ॥
ಸುಪ್ರತಿಷ್ಠಾಪೂರ್ಣ ಸಾಯು
ಜ್ಯಪ್ರಣವ ವಿಂತೊಪ್ಪುವೀ ಪಂ
ಚ ಪ್ರಣವದೊಳು ಮುಖ್ಯ ಸಾಕಲ್ಯ ಪ್ರಣವಮೆಂದು ॥ ೯ ॥

ಮುಂತೆ ಪಂಚಬ್ರಹ್ಮ ಮುಖ್ಯಾ
ನಂತ ವೈದ್ಯೆದಾದ ತತ್ವಂಗ
ಳಿಂತು ಪಂಚಾಕ್ಷರಿಯ ರೂಪುಗಳಾ ಪರಬ್ರಹ್ಮ ॥
ಸಂತತ ಪ್ರಣವಸ್ವರೂಪು ನಿ
ತಾಂತ ಬಹುಮಂತ್ರೈಕ ಜನನಿ ಮ–
ಹಂತ ಪಂಚಾಕ್ಷರಿಯೆ ತಾನಾಗಿಂಬುಗೊಂಡಿಹುದು ॥ ೧೦ ॥

ನಿರುತ ಸರ್ವಜ್ಞ ಸ್ವತಂತ್ರೋ
ತ್ಕರುಷ ನಿತ್ಯಾಲುಪ್ತಶಕ್ತಿ
ಸ್ಫುರಿತ ತೃಪ್ತಿಯನಾದಿಬೋಧೆಗಳೋಂ ನಮಃ ಶಿವಾಯ ||
ಪರಶಿವ ಕ್ಷೇತ್ರಜ್ಞ ಕರ್ತಾ
ರರು ನಿಜೈಕ್ಯದ ಭಾವ ಜೈತ
ನ್ಯರು ಮಹಾಂತರ್ಯಾಮಿರೂಪುಗಳೋಂ ನಮಃ ಶಿವಾಯ || ೧೧ ||

ನೈಜಭವ ಮೃಡಹರ ಮಹೇಶ್ವರ
ರಾಜಿತೈಕ್ಯ ಸದಾಶಿವಾದಿಕ
ರಾಜಿಯುಪಮಾತೀತ ಮೂರ್ತಿಗಳೋಂ ನಮಃ ಶಿವಾಯ ||
ಭೂಜಲಾನಲಮಾರುತಾಂಬರ
ಯೋಜಿತಾತ್ಮಕ ಭೂತಧಾತು ಸ
ಮಾಜ ಭಕ್ತಾದ್ಯೈಕ್ಯನಿಲಯುಗಳೋಂ ನಮಃ ಶಿವಾಯ || ೧೨ ||

ನಿಕಟ ಮೂಲಾಧಾರ ಮಣಿಪೂ
ರಕ ಸುಲಿಂಗಸ್ಥಾನ ಹೃದಯಾ
ದಿಕ ವಿಶುದ್ಧ್ಯಾಜ್ಞಾದಿ ಚಕ್ರಗಳೋಂ ನಮಃ ಶಿವಾಯ ||
ಪ್ರಕಟಿತಾಚಾರಾದಿ ಮಹದಂ
ತಿಕ ಮಹಾಲಿಂಗಂ ನಿವೃತ್ಯಾ
ದಿಕ ಕನತ್ಪರಿಪೂರ್ಣ ಷಟ್ಕಲೆಯೋಂ ನಮಃ ಶಿವಾಯ || ೧೩ ||

ಸೂಕ್ತಕರ್ಮಂ ಕರ್ತೃ ಮೂರ್ತಿ ವಿ
ವಿಕ್ತಸುಮಹದಮೂರ್ತಿ ಶಿವಮನು
ರಿಕ್ತ ಷಟ್ಸಾದಾಖ್ಯರೂಪುಗಳೋಂ ನಮಃ ಶಿವಾಯ ||
ವ್ಯಕ್ತ ಸತ್ಕ್ರಿಯೆ ಜ್ಞಾನಮಿಚ್ಛಾ
ಶಕ್ತಿ ಮಾಂಗಲ್ಯಾದಿ ಸುಪರಾ
ಶಕ್ತಿ ವರಚಿಚ್ಛಕ್ತಿಗಳ ಬಗೆಯೋಂ ನಮಃ ಶಿವಾಯ || ೧೪ ||

ಶ್ರದ್ಧೆ ನೈಷ್ಠಿಕೆ ಸಾವಧಾನಂ
ಬದ್ಧಿತಾನುಭವಂ ನಿಜಾನಂ
ದೋದ್ಧರಣ ಸಮರಸ ಭಕ್ತಿಗಳೋಂ ನಮಃ ಶಿವಾಯ ||
ಬುದ್ಧಿ ಚಿತ್ತಾಹಂಕೃತಿ ಮನಂ
ಸಿದ್ಧಿ ದಿವ್ಯಜ್ಞಾನ ಭಾವ ವಿ
ಶುದ್ಧ ಷಡ್ವಿಧ ಹಸ್ತಗಳ ಬಗೆಯೋಂ ನಮಃ ಶಿವಾಯ || ೧೫ ||

ನೇತ್ರ ಜಿಹ್ವಾಘ್ರಾಣ ಚರ್ಮ
ಶ್ರೋತ್ರ ಹೃದಯಾದ್ಯವಿಕಲಾತ್ಮ ಪ
ವಿತ್ರಷಡ್ವಿಧ ಮುಖಗಳಿವು ತಾನೋಂ ನಮಃ ಶಿವಾಯ ||
ಪಾತ್ರಶಬ್ದ ಸ್ಪರ್ಶರೂಪ ವಿ
ಚಿತ್ರರಸಗಂಧೈಕ ತೃಪ್ತಿ ಪ
ರತ್ರಮಿಲ್ಲದ ಷಟ್ಪದಾರ್ಥಗಳೋಂ ನಮಃ ಶಿವಾಯ || ೧೬ ||

ಆ ಸಮಾನೋದಾನ ಸುವ್ಯಾ
ನಾಸಮಾಪಾನಾದಿಕ ಪ್ರಾ
ಣಾಶುಗಂಗಳು ನಾಗ ಪಂಚಕವೋಂ ನಮಃ ಶಿವಾಯ ||
ಈಸುವಾಕ್ಪಾಣ್ಯಂಘ್ರಿಪಾಯು ವಿ
ಲಾಸಮೋಹನ ಮನನಷಟ್ಕೋ
ಲ್ಲಾಸ ಸರ್ವಕ್ರಿಯೆಗಳೆಲ್ಲವುವೋಂ ನಮಃ ಶಿವಾಯ || ೧೭ ||

ವೃತ್ತ ಮಧ್ಯಂ ಗೋಮುಖಂ ಘನ
ವರ್ತುಳಂ ನಾಳಂ ಸುಗೋಳಕ
ಮುತ್ತಮಸ್ಥಾನಂಗಳಿವು ತಾನೋಂ ನಮಃ ಶಿವಾಯ ||
ಉತ್ತರ ಶಿರಸ್ಸರಸಿಜಾತಾ
ಯತ್ತ ಬಾಹುಯುಗೈಕಮಧ್ಯೋ
ಧಾತ್ತ ಪಾದದ್ವಂದ್ವ ರೂಪುಗಳೋಂ ನಮಃ ಶಿವಾಯ || ೧೮ ||

ಪಂಚ ಭೂತ ದಶೇಂದ್ರಿಯಂಗಳು
ಪಂಚ ಕಿರಣಂಗಳು ಮಹಾತ್ಮಂ
ಪಂಚ ಪಂಚಾನಿಲಂ ತ್ರಿಗುಣಗಳೋಂ ನಮಃ ಶಿವಾಯ ||
ಚಂಚದಳಿಕಂ ಕಂಧರಂ ವದ
ನಂ ಚಿರೋನ್ನತ ಹೃದಯನಾಭಿ ಸ
ಮಂಚಿತಾಖಿಲವಪುರವಯವಗಳೋಂ ನಮಃ ಶಿವಾಯ || ೧೯ ||

ಶಿರಮದೀಶಾನಂ ಮುಖಮೆ ತ
ತ್ಪುರುಷ ಹೃದಯಮಘೋರಮಂತ್ರಂ
ನಿರುತ ಗುಹ್ಯಮೆ ವಾಮದೇವಂ ಪಾದ ಯುಗ್ಮಗಳೆ ||
ಪರಮ ಸದ್ಯೋಜಾತ ಮಂತ್ರೋ
ದ್ಧರಣಮೆನಿಸಿ ವಿಭಾಗೆವಡೆದಿಂ
ತರರೆ ಪಂಚಬ್ರಹ್ಮ ಮಂತ್ರಮೆ ದೇಹವಾಗಿಹುದು || ೨೦ ||

ಮೋದ ಮಸ್ತಕ ಕರ್ಣ ಭುಜಗಳೆ
ನಾದಮಾಸ್ಯಮೆ ಬಿಂದು ದೇಹಮ
ನಾದಿ ಜೀವಮವಾಗ್ಜಮಂತ್ರಂ ಮಾಕ್ಷರಪ್ರಣವಂ ||
ಪಾದಯುಗಂಗಳೆನಿಸಿಯೊಪ್ಪಿಹು
ದಾದಿಮಧ್ಯಾಂತಂಗಳೆಲ್ಲಂ
ವೇದಿತಾಮಲಮಂತ್ರಮಾತಾರೂಪವಾಗಿಹುದು || ೨೧ ||

ಗೋಳಕಸ್ಥಾನದೊಳವಾಗ್ಜಂ
ನಾಳದೊಳು ಬಿಂದ್ವಾಪ್ಯಕಾರಮೆ
ಮೇಳಂ ಗೋಮುಖದೊಳು ಮಕಾರಮೆ ವರ್ತುಳದೊಳಿಹುದು ||
ಪಾಳಿಯಿಂ ಮುದದೊಳುಕಾರಮೆ
ಪೇಳುವೊಡೆ ಸಂಬಂಧಮಾಗಿ ನಿ
ರಾಳರೂಪಕ ಮುಕ್ತಿಬೀಜವೇ ವೃತ್ತದಲ್ಲಿಹುದು || ೨೨ ||

ಮೂಲ ಮಂತ್ರವೆ ವೃತ್ತದೊಳು ವರ
ಕೀಲಕವೆ ಮಧ್ಯದೊಳು ವರ್ತುಳ
ದಾಲಯದೊಳಂ ನ್ಯಾಸಮಂತ್ರಂ ಗೋಮುಖದೊಳನಘ ||
ಲೋಲಶಕ್ತಿ ಷಡಂಗಮಂತ್ರಂ
ನಾಲದೊಳು ಸದ್ವದನಮಂತ್ರ ವಿ
ಶಾಲ ಗೋಳಕದಲ್ಲಿ ಲಿಂಗಪ್ರಣವ ಸಂಬಂಧ || ೨೩ ||

ಸಾರ್ಗ್ಗಮಕಚಟತಪಯಸಾಷ್ಟಕ
ವರ್ಗನಾದಂ ಬಿಂದುಕಳೆಗಳು
ಭರ್ಗ ಶಿವಲಿಂಗದ ನವಸ್ಥಾನದೊಳು ನೆಲಸಿಹವು ||
ಭೋರ್ಗರೆವ ಬಾವನ್ನ ವರ್ಣನಿ
ರರ್ಗಳದ ಷಟ್ ಸ್ಥಾನದೊಳು ಸಂ
ಸರ್ಗಮಾಗೊಪ್ಪಿಹವು ಬಳಿಕೀಲಿಂಗ ಮೂರ್ತಿಯೊಳು || ೨೪ ||

ತಾರಕಾಕೃತಿ ದಂಡಕಾಕೃತಿ
ಚಾರು ನವ ವರ್ಣಪ್ರಸಾದಾ
ಪೂರ ಸಂಪ್ರಾಪ್ತಿಯ ಮಕಾರ ಸಕಾರ ವರ್ಗಾಂತಂ ||
ಸಾರತರ ನವಮಂತ್ರಮಿನಿತಾ
ಚಾರರೂಪ ಮಹೇಷ್ಟಲಿಂಗಾ
ಕಾರಮಕ್ಕುಂ ಬಳಿಕಮಿವರೊಳುಕಾರಸಹಮಾಗಿ || ೨೫ ||

ವಿತತ ಕುಂಡಲಿಯರ್ಧಚಂದ್ರಾ
ಕೃತಿ ಶಿವಾಕ್ಷರ ಮಾಪ್ರಸಾದಾ
ಯತ ಮಹಾಹ್ರೂಂ ಹ್ರೈಮಕಾರ ಬಕಾರ ಚಿನ್ನಾದಂ ||
ನುತ ಮಹಿತ ದಶಮಂತ್ರಮಿನಿತು ವಿ
ಹಿತ ಸದಾದಿ ಪ್ರಾಣಲಿಂಗಾ
ಕೃತಿ ಸುನಾದಂ ಬಿಂದುಯುಗ್ಮಂ ಸಹಿತಮಾಗಿನ್ನು || ೨೬ ||

ದಿವ್ಯ ದರ್ಪಣ ಜ್ಯೋತಿರಾಕೃತಿ
ನವ್ಯಯಾಕ್ಷರವೋಂ ಪ್ರಸಾದಾ
ಸೇವ್ಯತಾ ಹ್ರೌಂ ಹ್ರಃ ಮಕಾರ ವಕಾರಗಳವಾಗ್ಗ ||
ಅವ್ಯಯೈಕಾದಶ ಮನುವೆ ವಿಗ
ತವ್ಯಥೋನ್ನತ ಭಾವಲಿಂಗಂ
ಭವ್ಯ ಲಿಂಗತ್ರಯಗಳಿಂತುಂ ಮಂತ್ರರೂಪಕವು || ೨೭ ||

ಮೊದಲ ಹ್ರಸ್ವಸ್ವರಮೆ ಧಾತುಗ
ಳೊದಗಿದಾ ಪಾಯ್ವಂ ಸಗುಹ್ಯಂ
ವಿದಿತ ದೀರ್ಘಮೆ ನೇತ್ರಜಿಹ್ವಾಘ್ರಾಣಕರ್ಣಗಳು ||
ಮುದಿತ ಹ್ರಾಂ ಭಾಳಂ ಸುಷುಮ್ನೆಯೆ
ಸದಮಳಿನ ಹ್ರೀಂ ವರ್ಣ ಮಪರಾ
ರ್ಧದ ಸುಮಂತ್ರಂ ಮೂರುವರೆ ಕೋಟಿಯೇಕ ಚಾಳಿಗಳು || ೨೮ ||

ಪೂರ್ವಮಂತ್ರ ಸ್ಥೂಲದೇಹನು
ಗರ್ವಿತೈಕಾದಶವಿಮಂತ್ರಮ
ಪೂರ್ವ ಸೂಕ್ಷ್ಮಾಂಗಂ ಪ್ರಸಾದವೆ ಕಾರಣಶರೀರ ||
ನಿರ್ವಿಕಾರಪ್ರಮುದ ವೃತ್ತಿ
ಖರ್ವ ಪಂಚಾವಸ್ಥೆಯೊಳು ಸ
ನ್ನಿರ್ವಿಕಲ್ಪಿತ ಸೂಕ್ಷ್ಮಪಂಚಾಕ್ಷರವು ನೆಲಸಿಹವು || ೨೯ ||

ನಿರುತ ಪೂರ್ವೋಕ್ತಾದಿ ಪಂಚಾ
ಕ್ಷರಿಯೆ ವಿಶ್ವವ್ಯಾಪಿ ಹಂಸೋ
ತ್ಕರುಷಮಯದಿಂ ಜೀವಮಂತ್ರಮದೆನಿಸಿಯೊಪ್ಪಿಹುದು ||
ಮರಳಿಯೋಂಕಾರವೆ ವಿಚಾರಿಸೆ
ಗುರು ಸದಾಸೋಹಂ ಸ್ವರೂಪಿ
ಸ್ಫುರಣ ಪರಮಾತ್ಮಸ್ವರೂಪಕವೆನಿಸಿ ರಾಜಿಪುದು || ೩೦ ||

ಬಂಧುರಾಮಳವಿದ್ಯೆಯೆಂದಾ
ನಂದ ಶಿವಶಿವ ಹೃದಯಶೈವ ಮ
ದೆಂದು ಸೂತ್ರಮದೆಂದು ಪರ್ಯಾಯಾಖ್ಯಮಾಗಿಹುದು ||
ಸಂದವೇದಾಗಮಪುರಾಣಾ
ಮಂದಶಾಸ್ತ್ರಾಳಿಪ್ರಸಿದ್ಧಮ
ದೆಂದಖಿಳಭಕ್ತರ್ಗೆ ಜಪಿಸಲು ಯೋಗ್ಯಮಾಗಿಹುದು || ೩೧ ||

ಸಕಲ ಶಾಸ್ತ್ರಂಗಳೊಳು ವೇದಮ-
ಧಿಕಂ ವೇದದೊಳು ಶತರುದ್ರೀ
ಯಕಮುಖ ಶ್ರೀರುದ್ರಮಧಿಕ ಮದೀ ಸುಮಂತ್ರದೊಳು ||
ಪ್ರಕಟ ಪಂಚಾಕ್ಷರಿಯೆ ಶಿವ ವ
ರ್ಣಕಮೆ ಘನ ಪಂಚಾಕ್ಷರಿಯ ಸೂ
ತ್ರಕೆ ಶ್ರುತಿಸ್ಮೃತ್ಯಾಗಮಾದಿಯೆ ಭಾಷ್ಯಮಾಗಿಹವು || ೩೨ ||

ನೈಜದಿಂದಲ್ಪಾಕ್ಷರಂ ವಟ
ಬೀಜ ವಟಕೋಟಿಯನು ನುಂಗಿದ
ಓಜೆಯಿಂ ಬ್ರಹ್ಮಾಂಡ ಕೋಟಿಯನುದರದಲ್ಲಿರಿಸಿ ||
ರಾಜಿಸುತ್ತೆ ಮಹಾರ್ಥ ಗರ್ಭಿತ
ತೇಜದಿಂ ವರ ಸಕಲ ಮಂತ್ರಕೆ
ರಾಜ ಮಂತ್ರಮದೆನಿಸಿಯೊಪ್ಪಿಹುದೇನ ಪೇಳುವೆನು || ೩೩ ||

ವಾಮದೇವನೆ ಋಷಿ ಸದಾಶಿವ
ನೆ ಮುದದೊಳಗಧಿದೈವ ಮಧಿಕ
ಪ್ರೇಮ ಸಪ್ರಚ್ಛಂದಮಾ ಸತ್ಪ್ರಣವಮೇ ಬೀಜಂ |
ಆ ಮಹೋಮಾ ಶಕ್ತ್ಯುದಾತ್ತಂ
ಧಾಮರೂಪ ಶ್ವೇತವರ್ಣಂ
ಕಾಮಿತೋನ್ನತ ಭೋಗಮೋಕ್ಷಪ್ರದಮದಾಗಿಹುದು || ೩೪ ||

ಭಾವಿಸಲು ಜ್ಞಾನೋಪದೇಶಮ
ನೀವೊಡೀ ಷಡ್ವರ್ಣಪೇ ಮು
ಖ್ಯಾವರಣ ಸದ್ವಿದ್ಯೆತಾನೇ ಮೋಕ್ಷಸಾಧನವು ||
ಭಾವಶುದ್ಧದೊಳೊರ್ಮೆ ನೆನೆದೊಡೆ
ತೀವಿದುರುಸಂಸಾರದೋಷ ತ
ಮೋವರಣವಾರಣಪರಂಜ್ಯೋತಿಸ್ವರೂಪಕವು || ೩೫ ||

ಅಂತ್ಯಜಾಗ್ರಜ ಮೂರ್ಖಪಂಡಿತ
ರಂತು ಮಂತ್ರವ ಜಪಿಸಿ ಮೋಕ್ಷಮ
ನಂತರಿಸದೈದುವರು ಜಪಿಸದಿರಲ್ಕೆ ಬಂಧನವು ||
ಕಂತುಹರ ಗುರುಲಿಂಗ ಜಂಗಮ
ಶಾಂತಮಯ ಸಿದ್ಧಪ್ರಸಾದಗ
ಳಿಂತು ಷಡ್ವರ್ಣಗಳು ಸಾಕ್ಷಾತ್ಪರಶಿವಂ ತಾನೆ || ೩೬ ||

ಸದ್ವಿಮಲ ಶಿವನೆಂಬ ಲಘುವ
ರ್ಣದ್ವಯಮೆ ಸರ್ವೋತ್ಕರುಷಮಾ
ದದ್ವಿತೀಯ ಬ್ರಹ್ಮಮಂ ಪೇಳುವುದು ಶಬ್ದಕ್ಕೆ ||
ತದ್ವಿಧಿಯನುಳಿದಕ್ಷರಗಳೆ ಗು
ಣಾಧ್ವದೊಳು ಸಂಚರಿಪ ಕಾರಣ
ಮದ್ವಯನ ಮುಖ್ಯಾಭಿಧಾನ * ತಕ್ಪ್ಯಕಾರದೊಳು || ೩೭ ||

ನಾಮಕಂ ದೇಹಿಗೆ ವಿಭೇದವ
ನೇಮಿಸಲ್ಕಿಲ್ಲಾಗಿ ಪರಶಿವ
ನಾಮಮಂ ಸತತಾಶ್ರಯಿಸಿ ಸಕಲಶ್ರುತಿಗಳ ಶಿರೋ ||
ಧಾಮದಲ್ಲಿರ್ದಖಿಳ ಮಂತ್ರಕ
ನಾಮಯ ಜನನಿಯಾಗಿ ರಾಜಿಪು
ದೀಮಹಿತ ಪಂಚಾಕ್ಷರಿಯೆ ಪರಶಿವ ಸಹಜ ರೂಪು || ೩೮ ||

---

* ಪಾ. ಕ ತತ್ಪ್ರಕರಣದೊಳು

ಅಧಿಕ ಪರಶಿವತತ್ವದಿಂ ಮ
ತ್ತಧಿಕತತ್ವಗಳಿಲ್ಲವಿದರಂ-
ತಧಿಕ ಪಂಚಾಕ್ಷರಿಗೆ ಸಮವಹ ಮಂತ್ರವೇ ಇಲ್ಲ ||
ವಿಧಿನಿಷೇಧವಿಮೋಚಕಂ ಶಿವ
ಮಧುರ ಪಂಚಾಕ್ಷರಿಯೆ ಭವವಾ
ರಿಧಿಯ ದಾಂಟಿಸೆ ಮೋಕ್ಷವೀವ ಸಮಗ್ರದಿಂಡಿಹುದು || ೩೯ ||

ತಂತ್ರರೂಢೋದಿತ ವಿಧಿಯೊಳೀ
ಮಂತ್ರರಾಜ ಸ್ಮರಣೆಗೆಯ್ಯಲು
ಯಂತ್ರವಾಹಕನಾಕ್ಷಣಂ ಪ್ರತ್ಯಕ್ಷನಾಗಿಹನು ||
ತಾಂ ತ್ರಿಣೇತ್ರ ಮಹೇಶನಂ ಸ್ವಾ-
ತಂತ್ರ್ಯದಿಂದರುಹಿಸಿ ಕೊಡುವ ಸ
ನ್ಮಂತ್ರಮಂ ಸರ್ವತ್ರ ಸಂಸ್ಮರಿಸಲ್ಕೆ ಯೋಗ್ಯವಲಾ || ೪೦ ||

ಅಕ್ಷಯಂ ಪರಶಿವನೆ ತಾಂ ಪ್ರ
ತ್ಯಕ್ಷನಾಗಿರಲುಳಿದದೇನರ
ನೀಕ್ಷಿಸಲಿಕೇಂ ಸಿದ್ಧಿ ಪೇಳ್ಪಂಚಾಕ್ಷರಿಯೆ ಸತತ ||
ಪಕ್ಷದಿಂ ಜಿಹ್ವಾಗ್ರದಲ್ಲಿರ
ಲೀಕ್ಷಿತಿಯ ಜಡಮಂತ್ರದಿಂದೇಂ
ಮೋಕ್ಷದಾತನ ಮುಖದೊಳೊಗೆದೈತಂದುದಿಂತಿದನು || ೪೧ ||

ಮೊದಲು ಭಕ್ತಿಜ್ಞಾನಲಿಂಗಾಂ
ಗದ ಮಹಾಯೋಗಾತ್ಮಕ ನಮಃ
ಪದಮನುಚ್ಚರಿಸೆರಡರಲ್ಲಿಯೆ ಷಟ್‌ಸ್ಥಲಬ್ರಹ್ಮಾ ||
ತ್ಮದ ಶಿವಾಯೇತ್ಯರ್ಥ ರೂಪಕ
ಪದಮನುಚ್ಚರಿಸಲ್ಕೆ ತಾನೇ
ಮುದದೆ ಪಂಚಾಕ್ಷರಿಯೆ ವಪುರವಯವಗಳಾಗಿಹನು || ೪೨ ||

ಪ್ರಣವ ನಿಷ್ಕಲವಸ್ತು ಪಂಚ
ಪ್ರಣವ ಪಂಚಬ್ರಹ್ಮಮಾ ನಿ
ರ್ಗುಣನೆ ಸಗುಣ ಸುಮೂರ್ತಿಯಿಂ ಸಗುಣಸ್ವರೂಪಾದ ||
ಗುಣಿ ಸಗುಣನಿರ್ಗುಣನೆನಿಸಿ ಸತ್
ಪ್ರಣವ ಮುಖ್ಯ ಷಡಕ್ಷರಾತ್ಮಕ
ಘೃಣಿಮಯದಿನೊಪ್ಪಿಹನು ಪರಶಿವನಿಂತು ಸಮ್ಮುದದಿ || ೪೩ ||

ಮಾನಸಂ ವಾಚಕಮುಪಾಂಶು
ತ್ರೈನಿರೂಪಕ್ರಮದೊಳನುಸಂ
ಧಾನದಿಂ ಸನ್ಮಂತ್ರಜಪಮಂ ಮಾಳ್ಪುದೊಲವುಣ್ಮಿ ||
ಜ್ಞಾನ ಶಿವಯೋಗೀಶ್ವರರು ಸುಯಿ
ಧಾನದಿಂದೀ ಮಂತ್ರಮೂರ್ತಿ
ಧ್ಯಾನಮಂ ತವೆ ಮಾಡಿ ಸೌಖ್ಯಮನೊಂದುತಿಹರಾಗಿ || ೪೪ ||

ವೇದವೇದಾಂತಾನುಸಾರವ
ದಾದ ಸಕಲಾಗಮದ ಚೇತನ
ಮೈದೆ ಮೋಕ್ಷಾಗಾರ * ಮಹೋಪನಂ ಶಿವನತೋರ್ಪ ||
ಮೋದ ಕರ್ಣಾಲಂಕೃತಂ ಭುವ
ನಾದಿ ಸರ್ವಜನೋಪಕಾರಿಯ
ನಾದಿಭಕ್ತಜನಾತ್ಮದಾ ನಂದೋದಯಂ ಮಂತ್ರಂ || ೪೫ ||

ಪೀನ ಪಂಚಾಕ್ಷರಿಯ ನಿರ್ಜರ
ಧೇನುಭಕ್ತ್ಯದ್ಧ್ಯಾನದಲ್ಲೀ
ಜ್ಞಾನದಿವ್ಯಾಂಕುರವ ಸವಿದಾನಂದಜಲವೀಂಟ ||
ಮೌನ ಸಮತಾಚ್ಛಾಯೆಯಲ್ಲಿ ಮ
ಹಾನುಭಾವ ಸ್ತನವುತೊರೆಯೆ ನ
ವೀನ ಮೋಕ್ಷಾಖ್ಯಾಮೃತವ ಕರೆದೆರೆದು ಸಲಹುವುದು || ೪೬ ||

---

* ಪಾ. ಸೋಪಾನಂ

ಸಾಧ್ಯಮಲ್ಲದ ಪದಗಳೆಲ್ಲಂ
ಸಾಧ್ಯಮಕ್ಕುಮಭೇದ್ಯಮೆಲ್ಲಂ
ಭೇದ್ಯಮಕ್ಕುಂ ಕೋಟಿವಿದ್ಯಾಮಂತ್ರ ಜನನಕ್ಕೆ ||
ವೇದ್ಯದಾಲಯಮಾದ ಕಾರಣ
ಮಾದ್ಯಮಲಲಿಂಗಾರ್ಚಕಂ ಸಲೆ
ಹೃದ್ಯಮಂತ್ರ ಬ್ರಹ್ಮವಿದ್ಯವ ಸಾಧಿಸುವುದೊಲಿದು || ೪೭ ||

ನಾದ ಮೂಲ ಶ್ರುತಿಗಳೆಲೆ ಯುಪ
ವೇದಶಾಖೆ ಪುರಾಣ ಪುಷ್ಪಗ
ಳಾದವಾಗಮಫಳವು ಪಂಚಾಕ್ಷರಿ ಮಧುರ ರಸವು ||
ಮೋದಭಕ್ತಿಯ ಜಿಹ್ವೆಯಿಂ ಸವಿ
ದೈದಿ ನಿಜತೃಪ್ತಿಯನಿತರ ಬಹು
ವಾದ ವಿದ್ಯೆಗಳೆಂಬ ಸಸಿಯಂ ಸಲಹಲೇತಕ್ಕೆ || ೪೮ ||

ಇಂತಖಿಳಸಿದ್ಧಿ ಪ್ರದಾಸಿಯ
ನಂತಮಂತ್ರ ಸುಜನ್ಮಭೂಮಿಕೆ
ಮಂತ್ರಮಂ ಶಿವಲಿಂಗಪೂಜಾಸಕ್ತ ಸದ್ಭಕ್ತ ||
ಮುಂತೆ ಚಪಲತ್ವವನು ಬಿಟ್ಟು ನಿ
ತಾಂತ ಬಾಹ್ಯಾಭ್ಯಂತರದೊಳಂ
ಸಂತತಂ ಸಂಸ್ಮರಿಸಿ ಸುಖಿಮಿಹುದೆಂದ ದೇಶಿಕನು || ೪೯ ||

ಇದು ಸಮಸ್ತ ಶಿವಾನುಭಾವರ
ಪದಪಯೋರುಹಗಂಧ ಮದಷ
ಟ್ಪದನು ಷಟ್‌ಸ್ಥಲ ಸಾರ್ವಭೌಮಂ ಚೆನ್ನವೃಷಭೇಂದ್ರಂ
ವಿದಿತಮಾಗಿ ನಿರೂಪಿಸಿದ ಸ
ಮ್ಮುದ ಮಹಾಕ್ಷೇತ್ರಜ್ಞ ಸುಮನಃ
ಕದನದೊಳು ಮಂತ್ರಸ್ಮರಣೆಗೆ ಚತುರ್ದಶ ಸ್ಥಲವು ||

ಇತಿ ಕ್ಷೇತ್ರಜ್ಞ ಸುಮನೋವಾದೇ ಶ್ರೀಮನ್ಮಹಾಮಂತ್ರ ಸ್ಮರಣ ವಿವರಣಂ
ಚತುರ್ದಶ ಪ್ರಕರಣಂ|| ಅಂತುಸ್ಥಲ ಪದಿನಾಲ್ಕಕ್ಕಂ ಪದನು
೭೭೧ ( ೭೧೨+೪೯ )ಕ್ಕಂ ಸಮಾಪ್ತಂಮಂಗಳ ಮಹಾ ಶ್ರೀ ಶ್ರೀ ಶ್ರೀ

ಶ್ರೀಗುರು ಬಸವಲಿಂಗಾಯ ನಮಃ

# ಹದಿನೈದನೆಯ ಪ್ರಕರಣಂ

## ಭಕ್ತಿ ಸ್ಥಲಂ

ವಿತ್ತದೇಹಪ್ರಾಣಮಂ ಸಂ
ವಿತ್ತಿಪಿತ ಗುರುಲಿಂಗಜಂಗಮ
ಕಿತ್ತು ಸಮರಸಭಾವಕನೆ ಭಕ್ತಿಸ್ಥಲಾನ್ವಿತನು ‖ ಪಲ್ಲವ ‖

ವಿಕ್ರಯ ಕ್ರಯರಹಿತ ಹಿತ ಸ
ವ್ಯಕ್ರಮಾಕ್ರಮದಹನ ದಾಹನ ಕ್ರ
ತುಕ್ರತುಭುಜ ಭುಜಂಗಮ ಸಕ್ರಸಕ್ರಾದಿ ‖ *
ಚಕ್ರಚಕ್ರಧರಾಧರಾನತ
ವಿಕ್ರಮಕ್ರಮ ಭಾವಭಾವಿತ
* ವಕ್ರವಕ್ರಾಪಾಹಿ ಮಾಂ ಮಹಿಮಾಕೃಪಾಕಾರ ‖ ೧ ‖

ಪಾರಮಾರ್ಥಾಚಾರಲಿಂಗದೊ
ಳಾರಮಾಕರ ಲಿಂಗಪಂಚಕ
ಸಾರಮುದ ಭಕ್ತಾಂಗದಲ್ಲಿ ಮಹಾಂಗಪಂಚಕವು ‖
ಸಿರಿಯೆ ಮೈದೋರಿಪ್ಪವೆಂದು ವಿ
ಚಾರಮುಖದಿಂ ತಿಳಿದು ವಿಮಲಾ
ಚಾರ ಮಧ್ಯಪ್ರಾಣಿಯಾಗಿರೆ ಭಕ್ತನೆನಿಸುವನು ‖ ೨ ‖

---

* ೧. ಪಾ. ಸತ್ರ ಸತ್ರಾದಿ— ೨. ವಕ್ತ್ರ ವಕ್ರಾ

ಘನಕೆ ಘನ ನಿತ್ಯಾಲಘು ಸುಪೂ
ರ್ಣನೆ ಗುರು ವಿಲಯಗಮನ ಕಾರಣ
ಘನಮದು ಪರಂಜ್ಯೋತಿ ಚಿತ್ತೇಚರವು ಶತಗುಣಕೆ ||
ಅನುಪಮಾನಂದಮೆ ಪ್ರಸಾದ
ಘನವು ಗುರುಚರ ಶೇಷಮೊ ನಾ
ಲ್ಕನು ವಿವರ ಸಮರಸದ ಚಿತ್ಪಾದೋದಕಮೆ ಭಕ್ತ ||೩||

ದೇಹಮಿಲ್ಲದ ದೇಹಿ ಕರಣಸ
ಮೂಹಮಿಲ್ಲದ ಜೀವ ಜೀವನ
ಮೋಹಮಿಲ್ಲದ ಮೋಹಿ ಶಿವತತ್ವಾನುಭವಭಾವಿ ||
ಸೋಹಮಿಲ್ಲದ ಸೋಹಿಘನದಾ
ಸೋಹಿ ಭಕ್ತನಿಯುಕ್ತ ಜಂಗಮ
ಕಾಹ ಕರ್ವಿನ ಮೇಲೆ ಜೇನಿಕ್ಕಿದವೊಲೊಪ್ಪಿದವು || ೪ ||

ಪಕ್ಷಮಾದೊಡೆ ಭಕ್ತ ಜಂಗಮ
ಕಿಕ್ಷುದಂಡದ ಮೇಲಮುಲಮಧು
ಮಕ್ಷಿಕಾಜ್ಯದ ಕುಂಭಮಿರೆ ವೇಧಿಸುವುದೇಪರಿಯು ||
ಲಕ್ಷ ಮಿರ್ವರ ನಡುವೆ ಧನ ಜಲ
ಜಾಕ್ಷಿ ಭೂಮಿಗಳೆಂಬ ಮೂರು ವಿ
ಪಕ್ಷವಹಿಸಿ ಗುರಿದ್ದು ಕಾಡುವುದಾಗಿ ಸಮನಿಸದು || ೫ ||

ಮಾಯೆ ವಿಡಿದುಂ ಪ್ರಾಣಮಿಹುದು ತ
ದಾಯು ವಿಡಿದುಂ ಜ್ಞಾನಮಿಹುದಾ
ನ್ಯಾಯಮಾರ್ಗಜ್ಞಾನ ವಿಡಿದಿಹುದಾದಿ ಜಂಗಮವು ||
ಆಯತ ಜ್ಞಾನಾಸ್ತ್ರದಿಂ ದು–
ರ್ಮಾಯೆಯ ಸಿಗುರಕೀಸು ತಿರ್ವರು
ಕಾಯ್ಕುಜೀವನ ಯೋಗದಂತೆ ವಿರಾಜಿಸುತ್ತಿಹರು ||೬||

ಫಲಪದಂಗಳನೆಳಸಿ ಮಾಡುವ
ನೊಲಿದು ಜೀವನು ವಾಯ ಕಲೆವವ
ನೆಲೆ ಚರಕ್ಷ್ನಮೆಯಲ್ಲಿ ಮುಳುಗದ ಸರ್ವಸೂತಕಿಗೆ ||
ಸಲೆ ಯಥಾ ಪರಿಣಾಮಿಯಲ್ಲದ
ನಿಲವನರಿಯದ ನಿಜದ ಹಮ್ಮಿಂ
ಧುಲಿವ ಭೂತ ಪ್ರಾಣಿಗೆಂತಹುದುಭಯ ಸಂಬಂಧಂ || ೭ ||

ದೇಹರಹಿತಾಚಾರನೇ ಚರ
ದೇಹಿರಹಿತ ವಿಚಾರಿಭಕ್ತಂ
ಸಹಿತದಾಚಾರಂ ವಿಚಾರಂ ಸ್ವಾನುಭವದರಿವು ||
ದೇಹ ದೇಹಿ ಗುಣಂಗಳೆಂದೀ
ದೇಹ ಚೈತನ್ಯಮೆ ಶಿವನು ಮನ
ಕಾಹ ಚೈತನ್ಯಮೆ ಚರಂ ಶಿವಶಕ್ತಿಯೋಗದೊಲು || ೮ ||

ಸಿಡಿಲು ಮಿಂಚಿನ ಬೆಳಗನೊಂದ ರೊ
ಳಿಡಿದು ಬಂಧಿಸಬಹುದೆ ಸಂತತ
ಮೊಡಲಸುಗಳಿಲ್ಲದರಿಗರಿವಾಚಾರ ಸಂತತಮೆ ||
ಬಿಡದೆ ಸಂಸಾರಾದಿ ವಿಷಯವ
ಜಡನುಪಾಧಿಕಜೀವಿಯುಭಯದ
ಗಡಣಮಂ ಬರಿಮಾತಿನಿಂ ಬಣ್ಣಿಸಿದೊಡೆಂತಹುದು || ೯ ||

ಭಕ್ತಿನಿಧಿ ಭಕ್ತಿಪ್ರವರ್ಧನ
ಭಕ್ತಿಕಾರಣ ಭಕ್ತಿರೂಪಕ
ಭಕ್ತನೆನೆ ಸಂಸಾರವಿಷಯವಿಮುಕ್ತ ವಾಚಕವು ||
ಮುಕ್ತಿದೇಹ ಪ್ರಾಣಭಾವ ವಿ
ರಕ್ತಮಾನಸನೆನಲು ಚರಮೆಂ
ಬುಕ್ತಿಯುಗ್ಮವು ಮಾರುತಾಂಬರದಂತಭೇದವಲಾ || ೧೦ ||

ಕನಸಿನೊಳ್ಕಂಡೆಳ್ದು ದಿಟವೆಂ
ದನಿಸರೊಳ್ಗುಡಿಗಟ್ಟಿ ನಲಿವ
ರ್ಮನೆಗೆ ಜಂಗಮುದೃಷ್ಟದಿಂ ಬರೆ ಕೆಟ್ಟೆವೇಗೇಯ್ವಂ ॥
ಮನೆಯೊಳೇನಿಲ್ಲೇನ ಬೇಳ್ಪನೊ
ಎನುತೆ ಮುಸುಡಂ ಕೆಚ್ಚಗಾಗಿಸಿ
ಕನಲುವಂಗೆಂತಹುದು ತತ್ತ್ರಿವಿಧಾನುಭವಶಕ್ತಿ ॥ ೧೧ ॥

ಲಿಂಗನಿಷ್ಠಾಪರನು ಜಂಗಮ
ಸಂಗತಾನುಭವೈಕಮಾನಸ
ತುಂಗವಿಕ್ರಮ ಭಕ್ತಿಮಹಿಳಾ ಪ್ರಾಣವಲ್ಲಭನು ॥
ಲಿಂಗ ಚರಲಿಂಗ ಪ್ರಸಾದ ಸು
ರಂಗಸಂಸಾರ ಪ್ರಪಂಚಾ
ಸಂಗ ನಿರ್ವಂಚಕನು ಪರಿಪೂರ್ಣಾಂಗನೆನಿಸಿಹನು ॥ ೧೨ ॥

ವಿನುತ ಚಿಂತಾಮಣಿಯ ಪುತ್ಥಳಿ
ನೆನಸು ನಡೆಗಲಿತಂತೆ ಬರೆ ಕಂ
ಡನಿಸರೊಳು ತನು ಮನಸುಪುಳಕಿತಮಾಗಿಯಶ್ರುಜಲ ॥
ಕೊನರ್ದು ಮನಮನ ಬೆರಸೆಯುವರೊ
ಳ್ಪಿನಯ ಭಕ್ತಿಯ ಮಾಡದಿರಲವ
ನನಘ ಪುಣ್ಯವ ಕೊಂಡು ದೋಷವ ಕೊಟ್ಟುಪೋಗುವನು ॥ ೧೩ ॥

ದಯಮುದಕ್ಷಮೆಭಜನೆ ವಿಜಿತೇಂ
ದ್ರಿಯ ಸುವಾಕ್ಯಪ್ರಜ್ಞ ಶಾಂತ್ಯತಿ
ಶಯದ ಧರ್ಮದ್ವಂದ್ವ ಕರ್ಮತ್ಯಾಗ ಗುರುಸೇವೆ ॥
ಭಯವಿನಯ ಸರ್ವಾರ್ಥ ಸಂಗ್ರಹ
ನಯಃಗುಣಾತ್ಮವಿಶುದ್ಧಸಜ್ಜನ
ನಿಯತ ಸದ್ಭಾವಂಗಳಿಂ ಮಾಡುವನು ಯೋಗಪರ ॥ ೧೪ ॥

ದ್ವೇಷ ಕುತ್ಸಿತ ಕುಟಿಲ ದುರ್ಗಣ
ದೋಷವರ್ಧನ ಚಪಲಹೀನ ವಿ
ಶೇಷಪಂಕ್ತಿವಿಭೇದ ಪಕ್ಷಾಪಕ್ಷ ನಿಜಶೂನ್ಯ ||
ದೂಷಣಾಮಿಷ ಗರ್ವಶಠದು
ರ್ಭ್ಯಾಷಣಾಶಾಕ್ಷುದ್ರ ದಂಬಕ
ವೇಷ ಚಾರಕ ಲುಬ್ಧ ಕಪಟಾನ್ವಿತಗೆ ನಿಜವಹುದೇ || ೧೫ ||

ಈ ಮಹಿತ ಗುರುಲಿಂಗ ಜಂಗಮ
ಸೀಮೆಯಿಂ ದುರ್ಗುಣವು ಕೆಟ್ಟಭಿ
ರಾಮ ಸಮರಸವಾಗಿ ವಾಙ್ಮಾನಸ ಕರಣದಲ್ಲಿ ||
ಆ ಮನುಧ್ಯಾನಾರ್ಚನೆಗಳಂ
ಕಾಮಮಿಹಪರದುಃಖಮಳಿದವ
ನೇ ಮುಮುಕ್ಷುವದಾಗಿ ಮಾಡುವ ನಿಜ ಸುಖಾನ್ವಿತನು || ೧೬ ||

ವ್ಯವಹೃತಿಯ ಮಾಳ್ಪಲ್ಲಿ ಲಾಭಂ
ಭವಿಸದಿರೆ ಮಾಡುವರೆ ತ್ರಿವಿಧಕೆ
ತ್ರಿವಿಧಮಂ ವಿಖ್ಯಾತಿಲಾಭಕೆ ಕೊಟ್ಟು ತಾಂ ಮೊದಲು ||
ಸವೆದು ಲಾಭವನರಸುವವನಂ
ತವಿರತ ಸ್ತುತಿನಿಂದೆಯಿಲ್ಲದೆ
ವಿವರದಿಂ ಮಾಡಲ್ಪರಾಪರಮುಕ್ತನಹುದವನು || ೧೭ ||

ತನುವಿನೊಳು ನಿರ್ಮೋಹಿ ಮನದೊ
ಳ್ಘನದರಿವು ಧನಮೇ ತ್ರಿಲಿಂಗಾ
ರ್ಚನೆಗೆ ಸವೆದ ವರಪ್ರಸಾದಮನನುಭವಿಸಿ ಮುಕ್ತಿ ||
ವನಿತೆಯ ಪ್ರಾಣೇಶನಾಗಿರ
ದನುಪಮಾನಂದೈಕ ಭಕ್ತಿಯು
ವನಧಿ ಮೇಲ್ಪರಿದೊತ್ತರಿಸಿತೇಂ ಕಾಡುತೊಪ್ಪಿಹನು || ೧೮ ||

ಮನವನೊಪ್ಪಿಸಿದಲ್ಲಿ ಸತಿಯಂ
ನೆನೆದರಿಂದುಮ್ಮಳಿಸಲೇತಕೆ
ತನುವನೊಪ್ಪಿಸಿದಲ್ಲಿ ತರಿದೊಡೆಸತ್ಯವೆನಬೇಕು ||
ಧನವನೊಪ್ಪಿಸಿದಲ್ಲಿ ನಿಷ್ಠುರ
ದನುವು ಬಂದೊಡೆ ತಾಳಬೇಕಿನಿ
ತಿನಿತು ನುಡಿಯೊಳು ಕಂಡೆನಲ್ಲದೆ ಕಾರ್ಯದಲ್ಲಿಲ್ಲ || ೧೯ ||

ಮನದ ಸೌಖ್ಯಮನರಿಯನಾಗಿ ಸು
ಮನವೆ ಶಿವನೆಂದರಿದ ನಿಚ್ಚಟ
ಧನದ ಸೌಖ್ಯಮನರಿಯನಾಗಿಯೆ ಧನವೆ ಜಂಗಮವು ||
ತನುವ ಸೌಖ್ಯಮನರಿಯನಾಗಿಯೆ
ತನುವೆ ವಿಮಲತರ ಪ್ರಸಾದಂ
ಘನಮಹೋದಯನಾಗಿ ಪರಿಪೂರ್ಣಸ್ವರೂಪಕನು || ೨೦ ||

ಮೋಕ್ಷಕಾಮಗೆ ಸುಪ್ರಸಾದಂ
ಪಕ್ಷಪರವೆಂಬವಗೆ ಜಂಗಮ
ವೀಕ್ಷಿಸುತೆ ಸಂಯೋಗಿಸಿಹೆನೆಂಬವಗೆ ಶಿವಲಿಂಗ ||
ಅಕ್ಷಯದ ಪರತತ್ವಮುಂಟೆ
ನ್ನೀಕ್ಷಿತಿಯೊಳೆಂಬವಗೆ ಗುರುವೀ
ಲಕ್ಷಣ ಚತುರ್ವಿಧವು ಸಮರಸವಪ್ಪುದೆಂತಯ್ಯ || ೨೧ ||

ತ್ರಿವಿಧಲಿಂಗಗಳೊಂದೆ ಎಂದೆಂ
ಬವನು ಸಮ್ಯಕ್‌ಜ್ಞಾನಿ ವಿಶ್ವಾ
ಸವೆ ಸುಭಕ್ತಿ ತ್ರಿವಿಧ ನಿರ್ವಂಚನೆಯೆ ದಾಸೋಹಂ ||
ತ್ರಿವಿಧಲಿಂಗಮಹಾ ಪ್ರಸಾದಮೆ
ಶಿವನ ನಿಜಪದವೆಂದು ತಿಳಿದಿಹ
ವಿವಿಧ ನಿಷ್ಠಾವರ್ತನಂ ಭವತಮವಿಕರ್ತನನು || ೨೨ ||

ಕಾಯಪಂಚಕ ಜೀವಪಂಚಕ
ಕಾಯ ಜೀವನ ಕಳವಳಗಳಿಂ
ಸಾಯದಳಲುವ ಮೂಢನಂದಂದಿನ ಮಹಾರ್ಘವನು ||
ಬೀಯಮೆಂದೀ ತ್ರಿವಿಧಲಿಂಗ
ಕ್ಕೀಯದುಮ್ಮಳಿಪನೃತಭಾಷಾ
ನ್ಯಾಯಮಾರ್ಗಜ್ಞಾನಹೀನಂಗಹುದೆ ನಿಜಭಕ್ತಿ || ೨೩ ||

ಅವಿಕಲಂ ಜಾತಸ್ಯ ಮರಣಂ
ಧೃವಮಿದೆಂಬುದನರಿದು ಜೀವ ತ
ನುವಿನ ವಿಕೃತಿಗಳಡಗಿಯೊದಗಿದ ಧನಮನಾಗಾಗ ||
ಸವೆದು ಸದ್ಗುರುಲಿಂಗ ಜಂಗಮ
ನಿವಹಕಾತ್ಮಜ ಭಾಮನೀ ಬಾಂ
ಧವರಿಗೆನ್ನಪರಿವ ಹೊಸಲೊಳಗೆ ಹಾಂಸೆ ನೆಲಸುವುದೆ || ೨೪ ||

ಭೂತಹಿತಕಂ ಖ್ಯಾತಿಲಾಭ ಗು
ಣಾತಿಶಯಕಂ ನಲಿದು ಮಾಡುವ
ನೀತಿಯಲ್ಲದೆ ಭಕ್ತಿ ಮರ್ಮವೆಯಂತರಂಗದೊಳು ||
ಪಾತಕಾಸ್ಥಿರವಾಕ್ಯಮನೃತಂ
ವೀತಕರುಣಂ ಪಂಕ್ತಿ ಭೇದಂ
ಕೌತುಕೋದಾಸೀನ ವಂಚನೆ ಕೆಡದೆ ನಿಜವಹುದೆ || ೨೫ ||

ಸುಚಿದಖರ್ವಾನಂದಭಕ್ತಿಯೊ
ಳಚಲರಂ ಕಂಡೇಳ್ದಿದಿರ್ವಂ
ದು ಚರಣಯುಗಕ್ಕೆರಗಿಯವರೊಂದಾಗಿ ತಿರುಗಿ ಪ್ರಿಯ ||
ವಚನಮಂ ನುಡಿದಾಸನವನು ವಿ
ರಚಿಸಿಯರ್ಪಿಸಿಯನ್ನಪಾನಮ
—ನುಚಿತವಿತ್ತವರ ಪ್ರಸಾದದ ಸೇವನೆಯೊಳಿಹನು || ೨೬ ||

ಮಾಡಿ ಫಲವೇನಯ್ಯ ಭವಿಗಳ
ಕೂಡೆ ಗಮನಾಸನಶಯನಗಳ
ನೋಡೆ ಸಹಭೋಜನವು ಸಂಭಾಷಣವು ಸಂಸರ್ಗಂ ||
ನಾಡೆ ಪಾಕಂ ಭಕ್ತಿಯವರೊಡ
ನಾಡುತಿನಿತುಂ ಮಾಳ್ಪನರಕದ
ಪೀಡೆಗಳಿಗೆಂತಹುದು ಚರಲಿಂಗ ಪ್ರಸಾದಸುಖ ||೨೭||

ಉತ್ತಮ ವ್ರತ ಶೀಲ ಷಡ್ವಿಧ
ಮುತ್ತರಾಚಾರಾದಿ ವೇಷಂ
ಬೊತ್ತು ಗುರುಬೋಧೆಯೊಳರಿದು ಭವಿಭಕ್ತಭೇದವನು ||
ಚಿತ್ತದೊಳು ನಿಶ್ಚಯಿಸಿ ಬಳಿಕು
ನ್ಮತ್ತಭವಿಸಂಸರ್ಗಮುಖ್ಯಾ
ಯತ್ತದೋಷಕ್ರಿಯೆಯುಳಿದು ಶುದ್ಧಾತ್ಮನಾಗಿಹನು ||೨೮||

ವೀತಕಲ್ಮಷ ಭಕ್ತಿಮಾರ್ಗಾ *
ನೀತ ವ್ಯರ್ಥಾಲಾಪಿ ಕುಟಿಲಾ
ನ್ವಿತನಿಗಂ ಸವಿಕಾರಿ ಧೂರ್ತಾವೇಶಿ ಸರ್ವತ್ರ ||
ದ್ಯೂತ ವಿಷಯ ಧ್ಯಾನಪೂಜಾ
ಪೂತ ಸಮ್ಯಕ್ ಜ್ಞಾನವಿಲ್ಲದ
ಪಾತಕನದಿಹದಲ್ಲಿ ದೂಷಕ ಪರದೊಳಂ ನರಕ ||೨೯||

ದಗ್ಧಪಟವದ್ರೂಪನಾಗಿ
ಸ್ನಿಗ್ಧಸದ್ಗುಣಾನಂದಮಯ ಸ
ಮ್ಯಗ್ದಯಾಂಭೋರಾಶಿ ಗುರುಕಾರುಣ್ಯದಿಂ ಸತತ ||
ಮುಗ್ಧನಾಗಿ ಸವಿಷಯದಲ್ಲಿ ವಿ
ದಗ್ಧ ಶರಣಾನುಭವದಿಂ ಸಂ
ದಿಗ್ಧ ಭಕ್ತಿತ್ರಯ ವಿಲೋಲ ಮನಸ್ಕನಾಗಿಹನು ||೩೦||

---

* ಪಾ. ಮಾರ್ಗವಿ। ರಕ್ತಮಿಥ್ಯಾಲಾಪಿ

ನಡೆಯದಿಹ ನುಡಿಗಡಣವಿರಿಯದ
ಕಡುಗಲಿಯ ಸೊಬಗಮುಳಚಿತ್ರದ
ಮಡದಿಯವಯವ ಸಿಂಗರಂ ದಯೆಯಿಲ್ಲದನ ಧರ್ಮಂ ||
ಕುಡದನರನವಗುಣವುಭಯವಳ
ವಡದ ಭಕ್ತಿಗಳೇಂ ಪ್ರಯೋಜನ
ಕೆಡುವುದಾ ಘಟ ಜಲದೊಳೆಣ್ಣೆಯ ನೆರೆದ ತೆರನಂತೆ || ೩೧ ||

ಓವಿಕಾಯಮಕಾಯಮಾದುದು
ಜೀವಮೇ ನಿರ್ಜೀವಮಾದುದು
ಭಾವಮೇ ನಿರ್ಭಾವಮಾಗಿ ಸುಮನವೆ ಘನದಲ್ಲಿ ||
ತೀವಿ ನಿಂದುದು ಶರಣಮಹದನು
ಭಾವದಿಂದಳಿದಖಿಳ ವಿಕೃತಿ ನಿ
ರಾವಲಂಬ ತ್ರಿವಿಧಭಕ್ತಿ ಪ್ರಾಣಮಾಗಿಹನು || ೩೨ ||

ಅಖಿಲ ಕರಣೇಂದ್ರಿಯ ಸಹ ಬಹಿ
ರ್ಮುಖನದಾಗಿಯೆ ವಿಷಯಸಂಕುಳ
ಸುಖದೊಳುನ್ಮತ್ತಾತ್ಮನಾಗಿರ್ದಾ ಮಹಾಘನದ ||
ಮುಖಮನರಿಯದೆ ದೇಹ ಸತಿಸುತ
ಸಖರಿಗೋಸುಗ ಕುದಿದು ಕಾಮವಿ
ಶಿಖಕೃಶಾನುಗೆ ಸಿಲ್ಕಿ ನಿರ್ಲೇಪತ್ವವೆಹಗಹುದು || ೩೩ ||

ಮಕ್ಕಳಂಗನೆಗೆನ್ನದೆ ತ್ರಿವಿ
ಧಕ್ಕೆ ಸಂದುದು ವಿತ್ತಮೇವುನ
ದಕ್ಕರಿಂ ಸಲೆ ಶರಣಾಗತಿವೊಕ್ಕುಂ ಮಹಾಘನಕೆ ||
ಮಿಕ್ಕ ಚಿಂತೆಯನಳಿದುದಂಗವಿ
ದೊಕ್ಕತ ತ್ರಿವಿಧಪ್ರಸಾದನು
ನುಕ್ಕುತವಧಾನದೊಳು ಸವಿದು ವಿಶುದ್ಧಮಾಗಿಹುದು || ೩೪ ||

ಕಾರ್ಯಕಾರಣವಿಲ್ಲ ಮಿಥ್ಯಾ
ತುರ್ಯ ಸಂಭಾಷಣೆಗಳಿಂದೇಂ
ಕಾರ್ಯವಾ ಪಂಚೇಂದ್ರಿಯಗಳುಚ್ಛಿಷ್ಟಮಂಕೊಂಡು ||
ವೀರ್ಯಜನಿತಾಂಗಂ ಪ್ರಸಾದ
ಸ್ಥೈರ್ಯವೆಂದೊಡೆ ಮೆಚ್ಚುವರೆ ಗಾಂ
ಭೀರ್ಯ ಶರಣರು ಭಕ್ತಿಮಾರ್ಗದ ಮರ್ಮವದು ಬೇರೆ ||೩೫||

ವಿನುತಪಂಚೇಂದ್ರಿಯಕೆ ವಿಷಯಕೆ
ಮನಕೆ ಮರಹಿಗೆ ಭಾವಕಂಭ್ರಮೆ
ಗನುಪಮಪ್ರಾಣಕ್ಕೆ ಪರಿಣಾಮಕ್ಕೆ ಗುರೂತ್ತಮನು ||
ಅನಘ ಲಿಂಗಾಚಾರದಾಜ್ಞೆಯ
ನನುವಿನಾಜ್ಞಾಪಿಸಿದ ಕಾರಣ
ಮೆನಗೆ ಬೇರುಪಭೋಗವಿಲ್ಲಾಗಿ ಪ್ರಸಾದಮಯಂ ||೩೬||

ಪಂಚವಿಂಶತಿ ತತ್ವದೇಹದ
ಸಂಚಿತ ಪ್ರಾರಬ್ಧವಳಿಯದೆ
ಮುಂಚುತಿಹ ಪಂಚೇಂದ್ರಿಯಂಗಳ ವಿಷಯನಿವಹದೊಳು ||
ಸಂಚರಿಸಿ ಲಿಂಗಪ್ರಸಾದದ
ಸಂಚಮೆನಗೆಂಬಾಗಮಪ್ರಾ
ಪಂಚಿಕಂಗೆ ಮಹಾಪ್ರಸಾದ ವಿಭೋಗವೆಂತಹುದು ||೩೭||

ಅಂಗಮಂ ಕರದಿಷ್ಟಕರ್ಪಿಸಿ
ಯಂಗಸಹಿತಂ ಮನವನಾಚಿ
ಲ್ಲಿಂಗಕರ್ಪಿಸಿ ಪಂಚಕೇಂದ್ರಿಯ ವಿಷಯ ಸಂಗತಿಯಂ ||
ಲಿಂಗ ಪಂಚೇಂದ್ರಿಯಕೆ ಸಲಿಸಿ ನಿ
ಜಾಂಗ ತಚ್ಛೇಷಾನುಭವದಿಂ
ಪಿಂಗಿದುವು ಕರ್ಮತ್ರಯಂಗಳು ಬಿಟ್ಟ ಸತಿಯಂತೆ ||೩೮||

ನಡೆಯದಿಹ ನುಡಿಗಡಣವಿರಿಯದ
ಕಡುಗಲಿಯ ಸೊಬಗಮಳಚಿತ್ರದ
ಮಡದಿಯವಯವ ಸಿಂಗರಂ ದಯೆಯಿಲ್ಲದನ ಧರ್ಮಂ ||
ಕುಡದನರನವಗುಣವುಭಯವಳ
ವಡದ ಭಕ್ತಿಗಳೇಂ ಪ್ರಯೋಜನ
ಕೆಡುವುದಾ ಘಟ ಜಲದೊಳೆಣ್ಣೆಯ ನೆರೆದ ತೆರನಂತೆ || ೩೧ ||

ಓವಿಕಾಯಮಕಾಯಮಾದುದು
ಜೀವಮೇ ನಿರ್ಜೀವಮಾದುದು
ಭಾವಮೇ ನಿರ್ಭಾವಮಾಗಿ ಸುಮನವೆ ಘನದಲ್ಲಿ ||
ತೀವಿ ನಿಂದುದು ಶರಣಮುಹದನು
ಭಾವದಿಂದಳಿದಖಿಳ ವಿಕೃತಿ ನಿ
ರಾವಲಂಬ ತ್ರಿವಿಧಭಕ್ತಿ ಪ್ರಾಣಮಾಗಿಹನು || ೩೨ ||

ಅಖಿಲ ಕರಣೇಂದ್ರಿಯ ಸಹ ಬಹಿ
ರ್ಮುಖನದಾಗಿಯೆ ವಿಷಯಸಂಕುಳ
ಸುಖದೊಳುನ್ಮತ್ತಾತ್ಮನಾಗಿರ್ದಾ ಮಹಾಘನದ ||
ಮುಖಮನರಿಯದೆ ದೇಹ ಸತಿಸುತ
ಸಖರಿಗೋಸುಗ ಕುದಿದು ಕಾಮವಿ
ಶಿಖಿಕೃಶಾನುಗೆ ಸಿಲ್ಕಿ ನಿರ್ಲೇಪತ್ವವೆಹಗಹುದು || ೩೩ ||

ಮಕ್ಕಳಂಗನೆಗೆನ್ನದೆ ತ್ರಿವಿ
ಧಕ್ಕೆ ಸಂದುದು ವಿತ್ತಮೇಮನ
ದಕ್ಕರಿಂ ಸಲೆ ಶರಣುಗತಿವೊಕ್ಕುಂ ಮಹಾಘನಕೆ ||
ಮಿಕ್ಕ ಚಿಂತೆಯನಳಿದುದಂಗವಿ
ದೊಕ್ಕತ ತ್ರಿವಿಧಪ್ರಸಾದವ
ನುಕ್ಕುತವಧಾನದೊಳು ಸವಿದು ವಿಶುದ್ಧಮಾಗಿಹುದು || ೩೪ ||

ಕಾರ್ಯಕಾರಣಮಿಲ್ಲ ಮಿಥ್ಯಾ
ತುರ್ಯ ಸಂಭಾಷಣೆಗಳಿಂದೇಂ
ಕಾರ್ಯವಾ ಪಂಚೇಂದ್ರಿಯಗಳುಚ್ಛಿಷ್ಟಮಂಕೊಂಡು ||
ವೀರ್ಯಜನಿತಾಂಗಂ ಪ್ರಸಾದ
ಸ್ಥೈರ್ಯವೆಂದೊಡೆ ಮೆಚ್ಚುವರೆ ಗಾಂ
ಭೀರ್ಯ ಶರಣರು ಭಕ್ತಿಮಾರ್ಗದ ಮರ್ಮವದು ಬೇರೆ || ೩೫ ||

ವಿನುತಪಂಚೇಂದ್ರಿಯಕೆ ವಿಷಯಕೆ
ಮನಕೆ ಮರಹಿಗೆ ಭಾವಕಂಭ್ರಮೆ
ಗನುಪಮಪ್ರಾಣಕ್ಕೆ ಪರಿಣಾಮಕ್ಕೆ ಗುರೂತ್ತಮನು ||
ಅನಘ ಲಿಂಗಾಚಾರದಾಜ್ಞೆಯ
ನನುವಿನಾಜ್ಞಾಪಿಸಿದ ಕಾರಣ
ಮೆನಗೆ ಬೇರುಪಭೋಗವಿಲ್ಲಾಗಿ ಪ್ರಸಾದಮಯಂ || ೩೬ ||

ಪಂಚವಿಂಶತಿ ತತ್ವದೇಹದ
ಸಂಚಿತ ಪ್ರಾರಬ್ಧವಳಿಯದೆ
ಮುಂಚುತಿಹ ಪಂಚೇಂದ್ರಿಯಂಗಳ ವಿಷಯನಿವಹದೊಳು ||
ಸಂಚರಿಸಿ ಲಿಂಗಪ್ರಸಾದದ
ಸಂಚವೆನಗೆಂಬಾಗಮಪ್ರಾ
ಪಂಚಿಕಂಗೆ ಮಹಾಪ್ರಸಾದ ವಿಭೋಗವೆಂತಹುದು || ೩೭ ||

ಅಂಗಮಂ ಕರದಿಷ್ಟಕರ್ಪಿಸಿ
ಯಂಗಸಹಿತಂ ಮನವನಾಚಿ
ಲ್ಲಿಂಗಕರ್ಪಿಸಿ ಪಂಚಕೇಂದ್ರಿಯ ವಿಷಯ ಸಂಗತಿಯಂ ||
ಲಿಂಗ ಪಂಚೇಂದ್ರಿಯಕೆ ಸಲಿಸಿ ನಿ
ಜಾಂಗ ತಚ್ಛೇಷಾನುಭವದಿಂ
ಪಿಂಗಿದುವು ಕರ್ಮತ್ರಯಂಗಳು ಬಿಟ್ಟ ಸತಿಯಂತೆ || ೩೮ ||

ಮೊದಲ ಜನ್ಮದ ಭುಕ್ತಿಹೋಯ್ತಾ
ಗೊದಗದಿನ್ನದ ಜನ್ಮ ಭುಕ್ತಿಯು
ದುದಿಸದಾಗಿಯೆ ಬಾರದಿಂತೆರ (ದಿತ್ತೆರ) ಡಿಲ್ಲವಾಗೀಗ ||
ವಿದಿತವಿಷ್ಟಾನಿಷ್ಟ ಮಿಶ್ರಗು
ಣದ ಮಹಾಪ್ರಾರಬ್ಧಭೋಗವೆ
ಕದಲದುಂಡಲ್ಲದೆಯು ಶ್ರುತ್ಯನುಭಾವಸಿದ್ಧಮಿದು || ೩೯ ||

ಶುದ್ಧ ಸಿದ್ಧ ಮಹಾಪ್ರಸಿದ್ಧ ವಿ
ಶುದ್ಧ ತತ್ವಮಯ ಪ್ರಸಾದ ನಿ
ಬದ್ಧ ಬೋಧಾನಂದಪಾರಾವಾರ ಸದ್ರೂಪ ||
ಸಿದ್ಧಿ ಕಾಮುಳಿನ ತ್ರಿಲಿಂಗ ಸ
ಮುದ್ಧರಣ ಪಾದೋದಕ ತ್ರಿವಿ
ಧೋದ್ಧತಾನುಭವದೊಳು ಕರ್ಮತ್ರಯಗಳಳಿದಿಹವು || ೪೦ ||

ದೇಹಧರ್ಮವಿದಾರ ವಶವಿೂ
ದೇಹದ ಪ್ರಾರಬ್ಧಭೋಗಂ
ಹೋಹುದೇ ಉಂಡಲ್ಲದೆಯೆ ಬಾಹ್ಯಾಂತರಂಗದೊಳು ||
ಮೋಹಿಕೊಂಡಿಹುದದು ಬರಿದೆನೀಂ
ಬಾಹಿರಂಗದೊಳುಂಡು ಶೇಷಮ
ನಾಹ ತನು ಧರ್ಮವನು ಜಯಿಸಿದೆನೆಂಬುದೆಂತಯ್ಯ || ೪೧ ||

ಪ್ರಾಣಲಿಂಗೈಕ್ಯಾನುಭಾವಧು
ರೀಣ ತತ್ವತ್ರಯವಿದಿಷ್ಟ
ಪ್ರಾಣಮುಭಯಾರಾಧನಾ ಪರತತ್ಪ್ರಸಾದಸುಖ ||
ಪ್ರಾಣಪದನಖಿಳ ಪ್ರಪಂಚ
ಕ್ಷೀಣ ಸಕಲಂಕಾತ್ಮ ಚರಸಂ
ತ್ರಾಣಿಗೀ ಪ್ರಾರಬ್ಧಮಿಲ್ಲೆಂದರಿದು ನಿಶ್ಚಯಿಸು || ೪೨ ||

ಸ್ತ್ರೀಯ ಬಾಹ್ಯಾಭ್ಯಂತರಂಗದೊ
ಳಾಯತ ಸ್ವಾಯತಗಳಾದೊಡೆ
ಕಾಯದೊಳಿಚ್ಛೆ ಬಳಿಕಿನೆಲ್ಲಿಯವಂತರಂಗದೊಳು ||
ಸಾಯದನಿಮಿಷನಾಗಿ ಕರಣೋ
ಪಾಯ ವಿಷಯೇಂದ್ರಿಯ ವಿಕೃತಿ ಸಮು
ದಾಯ ಸಮ್ಮತವಾಗದೆಲ್ಲಿಯದಾಪ್ರಸಾದಸುಖ ||೪೩||

ಇಲ್ಲಿ ಕಾಯವುಕಾಯಗುಣ ಮಳಿ
ದಲ್ಲಿ ಸೋಂಕೆ ಪವಿತ್ರಮಿಹುದಿ
ರ್ದಲ್ಲಿ ಪದ ಪದಮಿರೆ ಮನಂ ಮನಮಿರೆ ಕರಂ ಕರವಿ ||
ರ್ದಲ್ಲಿ ಜಿಹ್ವೆ ಸುಜಿಹ್ವೆ ರುಚಿ ರುಚಿ
ಯಲ್ಲಿಯರಿವರಿವಿನೊಳು ಶಿವ ಶಿವ
ನಲ್ಲಿಯರ್ಪಿತಮರ್ಪಿತದಿ ಪ್ರಸಾದ ಪರಿಣಾಮ ||೪೪||

ಇನಿತು ನೆಲಸಿಹವಗಲದುರು ವಿಷ
ವನು ಬಿಡುವುದಕೆ ಮುನ್ನ ಪಿಡಿಯ
ಲ್ಕೊಮ್ಮನೆ ನಡವುದಕೆ ಮುನ್ನ ಕಟ್ಟಲು ಸರ್ವ ಶಸ್ತ್ರಗಳು ||
ಕನಲಿ ತಾವೇಗೆಯ್ದಪವು ಮನ
ವನು ವಿಕಾರಿಸುವದಕೆ ಮುನ್ನವೆ
ಘನದೊಳೈಕ್ಯವ ಮಾಡಲಿಂದ್ರಿಯವೇನ ಮಾಡುವವು ||೪೫||

ವಿನುತ ನಿತ್ಯಾನಂದ ತತ್ವದೊ
ಳನಘ ಮನ ಮನ ಲೀನವಾದೊಡೆ
ತನುಗುಣಂಗಳಿವೇತಕಿಹವಿನ್ನಂತರಂಗದೊಳು ||
ಕನಲುವಂತಃಕರಣಗಳು ಚಿ
ದ್ಘನದೊಳನಿಮಿಷಮಾಗಲಿಲ್ಲದೆ
ನಿನಗೆ ನೀನನುಭಾವಿಯೆಂದೆನಲಾರುಮೆಚ್ಚುವರು ||೪೬||

ಒಡಲೊಳಿರ್ದಾಧಾರಮಾಗಿಂ
ತೊಡಲ ಸೋಂಕದೆಯೊಡಲ ಬೆಳಗುವ
ಸಡಗರಂ ಬೆಳಗಿಂಗೆ ಬೆಳಗಹ ಪರಮಚೈತನ್ಯ ||
ಮೃಡ ಮಹದ್ಗುರು ಕರುಣದಿಂ ಭುಜ
ಪಡೆದ ಕಾರಣದೀ ಪ್ರಪಂಚಂ
ತೊಡೆದು ತನುಮನಮುಭಯದೊಳ್ಪರಿಪೂರ್ಣಮಾಗಿಹುದು || ೪೭ ||

ನಿಯತ ದೇಹಮೆ ಲಿಂಗಮೆನಲದು
ಲಯಕೊಳಗು ಮನ ಲಿಂಗಮೆಂದೊಡೆ
ಬಯಲ ಸಂಸಾರಕ್ಕೆ ಬೀಜಂ ಕಾಯಕರದಲ್ಲಿ ||
ಕಾಯ ಕುರುಹುಂ ಮನದ ಕರದೊಳು
ಭಯ ಮಹಾಸಂಸಾರಮಿರಲ
ವ್ಯಯ ಪರೋಕ್ಷ ಪ್ರಾಣಲಿಂಗಮುದೆಲ್ಲಿಯದು ಜಡನೇ || ೪೮ ||

ಸ್ವಾನುಭವ ಬೋಧೆಯನು ನೆಮ್ಮಿ ನ
ವೀನನಾದಾ ಚಿಂತನಿರವ ನಿ
ಧಾನಿಸರಿಯಲ್ ಪ್ರಾಣಲಿಂಗಂ ಬಿಂದುವಿನ ಸಂಗಾ ||
ನೂನ ಭಾವಾದ್ಯಂತ ವರಿದುದೆ
ಮಾನಿತೇಷ್ಟಮಿದಲ್ಲವಹುದೆಂ
ಬೀ ನುಡಿಯ ಮುಟ್ಟಿಲ್ಲವೆಂಬುದು ನಿನ್ನ ಸಂಕಲ್ಪ || ೪೯ ||

ನಾದ ಸಂಗ ವಿನೋದ ಬಿಂದು ವಿ
ನಾದ ಸಂಗಂ ಬದ್ಧ ಕರ್ಮಂ
ನಾದ ಮೂರ್ತಿಯ ಸಂಗಮೇ ದೇಹಂದ್ವಯಾದ್ವಯದಿ ||
ಆದ ಸಂಗಮೆ ಪರಿಭವಂ ನಭ
ವೈದೆ ಪೊರಗೊಳಗಿಂತೆ ಚರಿಪುದೆ
ವೇಧಿಸುವದೇ ನಿನಗೆ ಪೂರ್ಣಬ್ರಹ್ಮ ಸಂಧಾನಂ || ೫೦ ||

ನಾದಬಿಂದು ಕಳಾಗ್ರ ತತ್ವಾ
ನಾದಿ ಶಾಂಭವ ಮೂರ್ತಿ ಗುರುಕರು
ಣೋದಯಾನಂದೈಕ-ಬೋಧಾ ರಸಪಯೋರಾಶಿ ||
ವೇದಿತಾಮಳ ಲಿಂಗಸಂಗಾ
ಮೋದ ಬಾಹ್ಯಾಭ್ಯಂತರಂಗಾ
ಭೇದ ಪರಿಪೂರ್ಣ ಸ್ವರೂಪಕವೆನೆ ವಿರಾಜಿಪುದು || ೩೮ ||

ತನ್ನ ತಾನಾರೆಂದು ತಿಳಿಯಲು
ತನ್ನ ನಿಜ ತನ್ನಲ್ಲಿ ನಿಶ್ಚಯ
ಭಿನ್ನವಿಟ್ಟೇ ಪ್ರಾಣಲಿಂಗಮನರಸಿಕಾಣ್ಬನಕ ||
ಇನ್ನು ದೋಷಮದೆಂಬ ಮಾಯೆಯೆ
ನಿನ್ನ ಮುಂದಿದಿರಿಟ್ಟು ಬಗೆದೋ
ರ‍್ಪನ್ನೆವರ ಮರಿಯಲ್ಕೆ ಪರಿಪೂರ್ಣತ್ವವೆಲ್ಲಿಯದು || ೩೨ ||

ದೃಶ್ಯಗಾಣ್ಬಾದೃಷ್ಟನಾರೋ
ದೃಶ್ಯ ದೃಷ್ಟಗಳರಿವ ನರಿದವ
ದೃಶ್ಯ ನಲ್ಲಾದೃಷ್ಟ ನಲ್ಲು ನಿಜೋದಯಾನಂದ ||
ದೃಶ್ಯ ಭಾವ ದೃಶೀಮಯೇಂದ್ರಿಯ
ದೃಶ್ಯ ಚಿನ್ಮಾತ್ರಾದಿ ದರ್ಶನ
ದೃಶ್ಯ ಸತ್ಕ್ರಿಯೆ ಯಿಲ್ಲದಿಹ ಸನ್ಮಾತ್ರನೆಂದರಿಯೈ || ೩೩ ||

ತಾನೆ ದೃಷ್ಟಂ ದೇಹವೆಂದೆನೆ
ಹೀನ ದೃಶ್ಯ ಭ್ರಾಂತುನಿಶ್ಚಯ
ತಾನೆ ಇಂದ್ರಿಯವೆನಲು ದರ್ಶನ ದೋಷ ವಿಭ್ರಾಂತಿ ||
ತಾನೆ ಪುಸಿ ಜಡಜೀವನೆಂದೆನೆ
ಹೀನ ಮಾಯಾ ಭ್ರಾಂತಿ ಬೊಮ್ಮವೆ
ತಾನೆಯೆಂದೆನಲರಿವಿನ ಭ್ರಾಂತೈಸೆ ನಿಜಮಲ್ಲು || ೩೪ ||

ತೋರ್ಪುದೆಲ್ಲವ ಕಾಣ್ಬವನು ತಾಂ
ತೋರ್ಪನೇ ಅವರಂತವಿವನೊಲು
ತೋರ್ಪುವೇ ಈ ತೋರ್ಪ ತೋರ್ಕೆಯೆ ಮಿಥ್ಯಮೆಂದೆನಿಸಿ ||
ತೋರ್ಪುದೇನುವ ಕಾಣದೆಯೆ ನಿಜ
ದರ್ಪಣಪ್ರತಿಬಿಂಬದಂತೊಲಿ
ದಿರ್ಪನಾಗಿಯೆ ಸಚ್ಚಿದಾನಂದೈಕ ರಸಮಯನು || ೫೫ ||

ನೆನಸು ತನ್ನಿಂ ತನ್ನ ನೋಡೆಲು
ತನಗೆ ತಾಂ ಪ್ರತ್ಯಕ್ಷನಾಗಲು
ಘನದೊಳಾ ಪ್ರತ್ಯಕ್ಷಮೆಂಬುದೆ ಭ್ರಾಂತು ಕೇಳ್ಮರುಳೆ ||
ತನಗೆ ತಾ ನೆರವಿಲ್ಲವಾಗಿಂ
ತೆನಗನನ್ಯ ನನನ್ಯನಾನೆಂ
ದೆನುತೆ ಪೂರ್ಣಬ್ರಹ್ಮವಾನೆನಲತಿಶಯ ಭ್ರಾಂತು || ೫೬ ||

ಹುಲ್ಲ ಸರವಿಯ ಸರ್ಪನೆಂದರಿ
ತಲ್ಲಿ ತನುಕರಣಾದಿ ನಾನೆಂ
ದಿಲ್ಲಿ ಬಗೆದಾತನು ಭ್ರಮೆಯಿಂ ತಾನೆಯುಂ ತನಗೆ ||
ಇಲ್ಲದಿಹ ಸಂಸಾರ ದುಃಖದ
ಮಲ್ಲಣಕ್ಕೊಳಗಾದರಾಭ್ರಮೆ
ಯಿಲ್ಲವೆಯ ಮಾಗರಿದರಿವೆ ನಾನೆಂದು ನಿಶ್ಚಯಿಸು || ೫೭ ||

ಪುತ್ರ ಸತಿ ಜೀವೋಪ ಜೀವಕೆ
ಶತ್ರುಮಿತ್ರಾಹಂತೆ ನಿಂದಾ
ಸ್ತೋತ್ರ ಮಾನಾಮಾನ ಕರಣ ವಿಕಾರ ಸುಖದುಃಖ ||
ಗಾತ್ರಮುಳ್ಳನಕಾರಿಗಾದೊಡೆ
ಮಿತ್ರ ರಾಗದ್ವೇಷ ವಡಗವು
ಚಿತ್ರದೃಷ್ಟ (ದೃಶ್ಯ) ತ್ವಾದಹಂ ಮಮ ಎಂದು ದಾಗಿಂತು || ೫೮ ||

ಕಾಯ ಕಾಮ ಕ್ರೋಧಗಳೆ ದು
ರ್ಮ್ಮಾಯೆ ಈ ಮಾಯೆಯನು ಜಯಿಸುವು
ಪಾಯವರಿಯದೆ ಬರಿದೆ ಸೋಹಂ ಬ್ರಹ್ಮಮೆಂಬುದಿದು ॥
ನ್ಯಾಯ ಮಲ್ತೀ ಭ್ರಾಂತ ನಳಿದೊಡೆ
ಮಾಯೆ ಯಳಿವುದು ಮಾಯೆಯಳಿಯಲು
ಸೋಯಮಾತ್ಮಬ್ರಹ್ಮ ಪರಮಾನಂದ ದಲ್ಲಿಹುದು ॥ ೫೯ ॥

ನಿರವಯವ ಪರಿಪೂರ್ಣ ನಿರ್ಗುಣ
ಪರಮನವ್ಯಯನಾಗಿ ತಾನೆಂ
ಬುರುವ ಕರ್ಮಮದಿಲ್ಲ ನಾ ಎಂಬಧಿಕ ಮಂತ್ರಾಳಿ ॥
ಸರಿದು ಲಯಿಸಿದುವೆನ್ನ ದೆನ್ನದೆ
ನಿರುತವಾನೆನ್ನದೆ ವಿಚಾರ
ಸ್ಫುರಿತ ನಿಜಮಾದಲ್ಲಿ ಭ್ರಾಂತು ನಿರಾಶ್ರಯದೊಳಿಹುದು ॥ ೬೦ ॥

ನಿರುತ ನಿತ್ಯಾನಂದ ತತ್ವ
ಸ್ಫುರಿತ ಪರಿಪೂರ್ಣ ಸ್ವರೂಪಾ
ವಿರಳ ನಿಜದೊಳು ಮೋಹಿಕೊಂಡಿರಲೊಲ್ಲದೆಯೆ ಬರಿದೆ ॥
ಪರಮ ಜೀವ ಬ್ರಹ್ಮರೈಕ್ಯೋ
ತ್ಕರುಷವೆಂಬ ವಿಚಾರ ಜಾಲೋ
ತ್ಕರದ ತೊಡಕಿಗೆ ಸಿಲ್ಕಿ ಕೆಡಬೇಡರಿದುಕೋ ನಿಜವ ॥ ೬೧ ॥

ಕರಣ ತನು ಧರ್ಮವನು ಗುರುವಿಂ
ದರಿಯೆ ಪರಮಾನಂದ ಮೆಂದೆಂ
ದರರೆ ಸೋಹಂ ಭಾವದಲ್ಲಿಹುದಿಲ್ಲ ನಿಂದವಗೆ ॥
ನಿರುತ ದೇಹೋಹಂ ಮಮತ್ವೋ
ತ್ಕರುಷ ಮಾಯಾಭ್ರಾಂತ ನಿಶ್ಚಲ
ವೆರಸಿ ನಿಜ ಪೂರ್ಣೋದಯ ದೋಳಿಹುದಿದನು ವಿವರಿಪುದು ॥ ೬೨ ॥

ಸುನಯನ ಸ್ತನ ಕೂರ್ಮನಾಪ್ಯಾ
ಯನವಮದುಂಬ ವಿಭೇದಮಂ ಬ
ಲ್ಲನಘ ನಾವನಿದರಿಯಬಾರದು ನಿರುಪಮಾನಂದ ||
ಘನಮನರಿದ ಮಹಂತ ನಿಶ್ಚಲ
ಜನಿತವಿಲ್ಲದ ವಿಜಯ ನಿನ್ನಿರ
ವೆನಗೆ ತಿಳಿವಂತೀ ಸಮಂಜಸವಾಗಿ ಪೇಳುವದು ||೬೩||

ಒಂದಿ ಪೇಳ್ದುದನರಿದು ಪೇಳ್ವೊಡೆ
ದೊಂದು ಶಬ್ದಮದಾಯ್ತು ತೋರ್ದುದ
ನಿಂದು ಪಿಡಿಯಲದೊಂದು ರೂಪಕಮಾದುದಿಂತೆರಡು ||
ಬಂದ ನಚ್ಚಿನ ಮಚ್ಚು ನಿಶ್ಚಯ
ವೊಂದವವೆ ನಿಜಮಲ್ತುವಾಗಾ
ನಂದ ಸಹಜ ಪ್ರಾಣಲಿಂಗದ ನಿಲವಗೋಚರವು ||೬೪||

ನಿತ್ಯ ನಿರ್ಮಳ ನಿರ್ವಿಕಾರಾ
ಚಿಂತ್ಯ ತತ್ವಾತೀತ ಭಾವ
ಪ್ರತ್ಯಯಾನಂದೈಕ ಪರಿಪೂರ್ಣಾನುಭವರೂಪ ||
ಕೃತ್ಯಕಾರಣ ವಿಫಲ ಸ್ವಯ
ಸತ್ಯ ಸಚ್ಚಿದ್ರೂಪ ಸನ್ನುತ
ಮತ್ಯತೀತ ಪ್ರಾಣಲಿಂಗಂ ವೇದ್ಯಮೆಂತಹುದು ||೬೫||

ತತ್ವವಿಧ ತಾತ್ಪರ್ಯಕನ್ಯಕೆ
ಯುತ್ತಮಾಂಗ ಘಟಾಂತರದೊಳು ದಿ
ಸಿತ್ತು ಬಹುವಿಧ ಬಿಂಬವಡಗದೆ ಮೂರ್ತಿಗೊಂಡಿಹುದು ||
ವೃತ್ತ ಮಧ್ಯಮ ಶುದ್ಧ ಪಂಚಮ
ವೆತ್ತ ಚೌಕಾನಂದ ಧವಳ ಮ
ಚಿತ್ತಿನಾಸರದಲ್ಲಿ ಬೆಳಗಿಗೆ ಬೆಳಗದಾಗಿಹುದು ||೬೬||

ಆ ಪ್ರಕಾಶೋತ್ಕೃಷ್ಟರಂಜನೆ
ಯಾ ಪ್ರವಾಹಮೆ ಮಿಗಿಲೆನಿಸಿ ಬಂ
ದ ಪ್ರಮಾಣತ್ವಮೇತತ್‌ಪದಮಾದುದದು ಮೀರಿ ||
ಸುಪ್ರಸಿದ್ಧ ತ್ವಮಸಿಯೆನಿಸಿ ನಿ
ಜ ಪ್ರದಾನಿಮಿಷೈಕ್ಯ ಸಂಗಮ
ತತ್ಪ್ರಮೋದಾನಂದ ಶರಣ ಕರಾಂಬುಜದೊಳಿಹುದು || ೬೭ ||

ಲಿಂಗರೂಪ ನಿಜೋದಯಾಸಂ
ದಾಂಗ ತೂರ್ಯಾವಸ್ಥೆಯಂ ಸ್ತೋ
ತ್ರಂಗಳಿಂದಾಡುತ್ತೆ ಪಾಡುತೆ ರೂಪಿಸಿದನೊಲಿದ ||
ಲಿಂಗಕಂ ಜ್ಞಾನೋಪಚಾರದ
ಸಂಗಮುಳ್ಳನಕಂ ಬಯಲೆ ಬಲಿ
ದಂಗಮಾಗಿ ಸ್ವತಂತ್ರಾ ಚರಿತಾತ್ಮನಾಗಿಹನು || ೬೮ ||

ತನು ಮನಃ ಪ್ರಾಣೇಂದ್ರಿಯ ವಿಷಯ
ವಿನುತಭಾವಾ ಭಾವ ಕರಣ ಪ
ವನ ನಿಕಾಯದೊಳಮಲ ಚಿದ್ಘನಲಿಂಗ ಸಮರಸಮಂ ||
ಅನುಕರಿಸಿ ಕೂಡಿದ್ದ ಬಳಿಕುಳಿ
ದನಿತು ಬಾಹ್ಯಕ್ರಿಯೆಗಳಿಂ ಮಹ
ದನುಪಮ ಬ್ರಹ್ಮವನು ಸಾಧಿಪೆನೆಂಬುದೆಂತಯ್ಯ || ೬೯ ||

ನಾಮರೂಪ ಕ್ರಿಯೆಗಳಳಿದಭಿ
ರಾಮಗುಣ ಸಂಪನ್ನನಾಗಿ ಸು
ನೇಮ ಕೃತ್ಯಾಕೃತ್ಯಮಂ ಮಾಳ್ಪನಕ ಕಡವರಕೆ ||
ಪ್ರೇಮದೊಂದಂ ಕುರುಹನೆಟ್ಟಂ
ತೈಮರವ ನುಂಗೆಚ್ಚರಾಗಿ
ಪರ್ಣಮಹಿತ ಲಿಂಗಕ್ಕೆ ಸರ್ವಕ್ರಿಯೆಗಳಿರಬೇಕು || ೭೦ ||

ತನುವೆ ಕರ್ಮವ ನುಂಬನಕ ಜೀ
ವನು ಭವಕ್ಕೆಡೆಯಾಡುವುದೆ ದಿಟ
ಮನಘತತ್ವ ವಿಮರ್ಶನದೊಳಾಪೂರ್ವ ಭಾಗೆಯನು ||
ಅನುಸರಿಸಿ ಮೇಲಾದ ತತ್ವದೊ
ಳನುನಯಂ ಮಿಗೆ ಮನವು ಸಿಲ್ಕಿರೆ
ಘನ ಮಹೋದಯದಿರವನರಿದುದೆ ಹೊರಗೆಬಳಸುವರೆ || ೭೧ ||

ಮಿಸುನಿಬಣ್ಣಂ ರಸವು ವಹ್ನಿಯೊ
ಳೊಸರಿ ಕಾರ್ಯಂ ಪೂರ್ಣಮಾಗ
ಲ್ಮಿಸುನಿ ರಸಬಣ್ಣಗಳಭಿನ್ನದೆ ಕುಂಭಮಾದಂತೆ ||
ಲಸಿತ ಪೂರ್ವಕ್ರಿಯೆಯುಳಿದು ಲ
ಕ್ಷಿಸುವ ಚಿತ್ತಂ ಲಿಂಗದೇಹಗ
ಳೊಸೆದು ಮೂರೊಂದಾಗುವಿನೆಗಂ ಭಜಿಪುದಾಕ್ರಿಯೆಯಂ || ೭೨ ||

ಲಲಿತ ಮನ್ಯೋನ್ಯಕ್ರಿಯಾಸಂ
ಕಲಿತ ಭಾವದೊಳರ್ಚಿಪುದೆ ನಿಜ
ಮಿಲಿತ ಶಿವತತ್ವಾನುಭವ ಮಿದನುಳಿದು ತ್ರಿವಿಮಲಾ ||
ಫಲಿತ ವಿಕೃತ ಮನಸ್ಕನಾಗು
ಜ್ವಲಿತ ಪೂಜ್ಯಾಪೂಜಕ ವ್ಯಾ
ಕುಲಿತರೆಂಬ ಕುದಂಬ ಹೃದಯರ್ಗಹುದೆ ಮಹದರಿವು || ೭೩ ||

ಜೀವನಿಂ ತತ್ಕಾಯದಿಂ ತೋ
ರ್ಪುವರ್ುವಿವಲ್ತು ವಿಕಾರಮಂತ
ರ್ಭಾವ ಮನದಿಂದುದಯುಮಖಿಳ ಗುಣಂಗಳೆಂದರಿದು ||
ಜೀವಕಾಯದ ಭೇದಮಂ ತಿಳಿ
ದಾ ವಿಕಾರಮನಳಿದು ಮಹದನು
ಭಾವಿಯಾಗರಿವಾ ಮಹಾಲಿಂಗದೊಳು ನಿಜಮಾಯ್ತು || ೭೪ ||

ದೇಹಿಗಿಂದ್ರಿಯಮಿಲ್ಲ ಕರಣಸ
ಮೂಹ ಮಿಲ್ಲಂಗಕ್ಕದೆಂತೆನೆ
ದೇಹ ದೇಹಿಗಳಿರ್ವರಂ ಬೆಂಬಳಿವಿಡಿದು ಬಿಡದೆ ||
ದೇಹ ಕರಣೇಂದ್ರಿಯ ಗುಣಂಗಳು
ದೇಹಿಯಿಂ ಸಂಚಾರಿಪುವು ನಿಜ
ಮೋಹಿ ಮನಕೆ ವಿಕಾರಮಿಲ್ಲ ಶಿವಾನುಭವ ಮತದಿ || ೭೫ ||

ಕಾಯಸಂಗದಿನಾತ್ಮನುದಿಪನೊ
ಕಾಯಮುದಿಪದೊ ಜೀವ ಸಂಗದೆ
ಕಾಯ ಜೀವರ ಯೋಗದಿಂ ಸಂಸಾರವೋ ಜೀವ ||
ಕಾಯಃಮಿವು ಬೇರೆಂದೊಡರಿಯೆವು
ಕಾಯಮೇ ಸಾಕಾರ ಮಾತ್ಮನೆ
ವಾಯುವೆಂದೊಡೆ ಮಾರುತಾಂಬರದಂತೆ ಭೇದವಲಾ || ೭೬ ||

ನನ್ನಿ ರತ್ನಂ ತನ್ನ ಬೆಳಗಿಂ
ತನ್ನ ಜರ್ಝರಿತವನು ಕೊಂಡಂ
ತಿನ್ನು ವಸ್ತುವನು ವಸ್ತುಕದೊಳು ವಿಸ್ತರಿಸಲಾಗಿ ||
ಮುನ್ನ ಪರಮಂ ಜೀವನಾದಿರ-
ವಂ ನಿಧಾನಿಸಿ ಭಿನ್ನವಳಿದಾ
ಸನ್ನದೇಹ ಪ್ರಾಣ ಸಂವಿದ್ವಸ್ತುವಾಗಿಹನು || ೭೭ ||

ಓವಿ ಕಾಯಮೆ ವಸ್ತುವೆಂದೊಡೆ
ಸಾವಿಗೊಳಗಾಗಿಹುದು ಮತ್ತಾ
ಜೀವನೇ ವಸ್ತ್ವಾತ್ಮನೆನೆ ಸಂಸಾರ ಕಾರಣನು ||
ಭಾವದರಿವೇ ವಸ್ತುವೆಂದೊಡೆ
ಜೀವ ದೇಹದ ಲಕ್ಷಮಿಲ್ಲದೆ
ಭಾವಿಸರಿಯದು ಸಂದು ಬಿಡದೆ ನಿಜೈಕ್ಯನಹುದೆಹಗೆ || ೭೮ ||

ಆ ಮಹಾಘನ ಸಾರಪಂಜರ
ಧಾಮದಲ್ಲಿ ಕೃಶಾನು ಕೀರನ
ಹೋಮಧುರ ವಚವನು ವಚನಿಸಿದಂತೆ ತನುಕರಣ ||
ಸ್ತೋಮ ಕಬಳೀಕೃತ ಪರಾತ್ಮನ
ನಾಮಯ ಶಿವೈಕ್ಯಾನುಭಾವ
ಪ್ರೇಮಿಯಾಗಿ ನಿಜೋದಯಾನಂದಾಶ್ರಯದೊಳಿಹನು || ೪೯ ||

ಶುದ್ಧ ಪೂರ್ಣಾನಂದ ಧವಳಿಮ
ಶುದ್ಧ ಬಿಂದ್ವಾತ್ಮಕ ಸದೋದಿತ
ಶುದ್ಧ ಸಿದ್ಧ ಮಹಾಪ್ರಸಿದ್ಧಾ ನಿಮಿಷ ಸಂಗಮದು ||
ಶುದ್ಧ ವಿದ್ಯಾನಾದ ಬಿಂದು ಕ
ಲೋದ್ಧರಾಸನದಲ್ಲಿ ಸುಚಿದನು
ಬದ್ಧ ಲಿಂಗದೊಳೈಕ್ಯ ನೆಂತಹೆ ತನುಗುಣಂಕೆಡದೆ || ೫೦ ||

ಗಾತ್ರ ಜೀವ ಪ್ರಾಣ ಕರಣ ಸು
ನೇತ್ರ ಮುಖ್ಯೇಂದ್ರಿಯ ಗುಣಾಳಿ ಪ
ವಿತ್ರ ಚರಲಿಂಗ ಪ್ರಸಾದದಿನಮಲ ಕರ್ಪೂರ ||
ಚಿತ್ರ ಮಂದಿರ ಮುರಿಯಲಲ್ಲಿಯ
ಚಿತ್ರವಲ್ಲಿಯೆ ಲಯಿಸಿದಂತ
ನ್ಯತ್ರ ರಹಿತಾನಂದ ಪರವಶ ಹೃದಯನಾಗಿಹನು || ೫೧ ||

ಅಳಿವುಳಿವ ತಿಳಿದುಳಿದು
ಕಳವಳವಳಿದು ಕುಳಗಳನೆಳಸಿ
ಬೆಳಸಿಯೆ ಬಳಸಲೇಂ ಪೆಣನೆವೆಯ ಹಳವ ಹೊಳವಳಿಗಳುಂಟೆ ||
ಚಳಿತ ಮತ್ತಾತ್ಮಕನು ಚಿತ್ತದ
ನಳನಳದ ಶಬ್ದಗಳ ತಿಳಿವನೆ
ಕಳೆ ದುಳುಮೆಯಾದವಗೆ ಬಳಿಕೀ ಕ್ರಿಯೆಗಳಿಂದೇನು || ೫೨ ||

ನಿಧನ ರಹಿತ ತರಂಗಿಣಿಯೆ ವಾ
ರಿಧಿಯ ಬೆರದುಂ ಚರಿಸವೋಲು ಬಹು
ವಿಧ ಗುಣಂ ಬ್ರಹ್ಮೈಕ್ಯ ಮಾಗಬ್ಜೇಕ್ಷಣೇಂದ್ರಾದಿ ||
ವಿಧಿಗಳೈಶ್ವರ್ಯವನು ತೃಣಮೆಂ
ದಧಿಕ ಭಕ್ತಿ ಜ್ಞಾನ ಸುತಪೋ
ವಿಧಿ ಜಪಸ್ಮೃತಿ ಪಂಚಯಜ್ಞಮ ನಿಕ್ಕಿ ರಾಜಪನು || ೮೩ ||

ಅಕ್ಷಯಾಕ್ಷರ ಭಾವ ವೀಕ್ಷಿಸೆ
ಲಕ್ಷ ನಿರ್ಲಕ್ಷ ಸ್ವರೂಪಿಂ
ಲಕ್ಷಣಾಂಕಿತ ವಾಚ್ಯವಾಚಕ ಮೆನಿಸಿ ತೋರ್ಪಂತೆ ||
ಅಕ್ಷ ಜೀವಾಂಗೇಂದ್ರಿಯಗಳ
ಧ್ಯಕ್ಷ ಚರಲಿಂಗ ಪ್ರಸಾದದಿ
ನಾಕ್ಷಣಂ ರೂಪಳಿದು ರೂಪಾಗಿಯೆ ವಿರಾಜಿಪನು || ೮೪ ||

ವ್ಯಕ್ತ ಲಿಂಗಾರ್ಪಿತಗಳಾದ
ವ್ಯಕ್ತ ಸರ್ವಾಚಾರ ಸಂಪದ
ಯುಕ್ತ ಸುನಿಜೋದ್ಧರಣ ಸರ್ವ ವಿರಕ್ತ ಮಾನಸನೆ ||
ಭಕ್ತ ನೀತನೆ ಮುಂದೆ ಮಾಳ್ಪ ಗು
ರೂಕ್ತಿ ಮಾರ್ಗಜ್ಞಾನ ನಿಷ್ಠಾ
ಶಕ್ತಿ ಲಿಂಗಾಚಾರದಿಂ ಮಾಹೇಶ್ವರಾಹ್ವಯನು || ೮೫ ||

ಇದು ಸಮಸ್ತ ಶಿವಾನು ಭಾವರ
ಪದ ಪಯೋರುಹ ಗಂಧ ಮದ ಷ
ಟ್ಪದನು ಷಟ್‌ಸ್ಥಲ ಸಾರ್ವಭೌಮಂ ಚೆನ್ನವೃಷಬೇದ್ರಂ ||
ವಿದಿತಮಾಗಿ ನಿರೂಪಿಸಿದ ಸ
ಮ್ಮುದ ಮಹಾಕ್ಷೇತ್ರಜ್ಞ ಸುಮನಃ
ಕದನದೊಳು ಭಕ್ತಿಸ್ಥಳಕೆ ಪಂಚಾದಶ ಸ್ಥಳವು ||

ಇತಿ ಕ್ಷೇತ್ರಜ್ಞ ಸುಮನೋವಾದೇ ಭಕ್ತಾಚರಣ ವಿವರಣಂ ಪಂಚಾದಶ
ಪ್ರಕರಣಂ ಅಂತು ಸ್ಥಳ ಪದಿನೈದಕ್ಕಂ ಪದಂ ೮೪೬ ( ೭೬೧+೮೫ ) ಕ್ಕಂ
ಸಮಾಪ್ತಂ. ಮಂಗಳ ಮಹಾ ಶ್ರೀ ಶ್ರೀ ಶ್ರೀ

ಶ್ರೀಗುರು ಬಸವಲಿಂಗಾಯ ನಮಃ

# ಹದಿನಾರನೆಯ ಪ್ರಕರಣಂ

## ಮಾಹೇಶ್ವರ ಸ್ಥಲಂ

### ಪರಿವರ್ಧಿನಿ ಷಟ್ಪದಿ.

ಗುರುಪದಪದ್ಮಾರಾಧನೆಯಲ್ಲೀ
ಶ್ವರ ಪೂಜನೆಯೊಳು ಜಂಗಮ ಭಕ್ತಿಯ
ಪರಿಚರಣದೊಳು ಪ್ರಸಾದದ ನಿಷ್ಠೆಯೊಳಿರೆ ಮಹೇಶ್ವರನು ||ಪಲ್ಲವ||

ಅರ್ಜಿತ ದುಃಪ್ರಾರಬ್ಧಾನುಭವ ವಿ
ವರ್ಜಿತ ದಂಡಧರಸ್ಮರ ಮಾಯಾ
ಗರ್ಜಿತ ಷಡ್ವರ್ಗೋನ್ಮದಕುಂಜರಭರ್ಜಿತಮೃಗರಾಜ ||
ನಿರ್ಜಿತಸರ್ವೇಂದ್ರಿಯ ಪರಮಾನಂ
ದೋರ್ಜಿತ ಭಕ್ತಿಗತಪ್ರಳಯೋದಯ
ತರ್ಜಿತ ಸಕಲಕರಣನಿರ್ಮುಕ್ತ ಸ್ವರ್ಜಿತರಾಲಿಪುದು ||೧||

ಲಕ್ಷಣದೋಂಕಾರಮೆ ತನು ಪರಮಾ
ತ್ಮಾಕ್ಷಯ ಘನಲಿಂಗಮೆ ಜೀವನಾಖಿ
ಲಾಕ್ಷರಮೇ ಪಂಚೇಂದ್ರಿಯ ಸಸ್ವರನಾದಮೆ ಕಾರಣವು ||
ಈಕ್ಷಿಸಿ ವಿಕಲಾಕ್ಷರಯುತ ಬಿಂದುವೆ
ಸೂಕ್ಷ್ಮಾಂಗ ವ್ಯಾಪಕವರ್ಣಾನ್ವಿತ
ಲಕ್ಷಿತ ಕಳೆಯೆ ಸ್ಥೂಲಶರೀರ ಮಹೇಶ್ವರನವಯವವು ||೨||

ಸಂತತ ಹೃನ್ನಾದವೆ ಮುಖಮಂಡಲ
ಧಾಂತಂ ಭಾಂತಂಗಳೆ ಭುಜಯುಗ್ಮಂ
ವಾಂತವೆ ತನು ಲಾಂತಂ ರಾಂತಂಗಳೆ ಪದಕಮಲದ್ವಯವು ||
ಮುಂತೆ ಶಿರೋವಕ್ತ್ರಮೆ ಶಿವಲಿಂಗ ನಿ
ತಾಂತಂಗಳಂ ನಾಭಿಗಳೆ ಜಂಗಮ
ವಿಂತಿಲ್ಲಿಂ ಪದಪರ್ಯಂತಂ ಗುರು ಘನಲಿಂಗಾತ್ಮಕನೂ || ೩ ||

ಮಾನ್ಯಂ ಚಿತ್ತು ಶಿವಾರ್ಥಕರಣದೊಳು
ಧನ್ಯವೆನಿಸಿ ಸಂತೋಷಹೃದಯನಾ
ಗನ್ಯಮನರಿಯದೆ ನಿಶ್ಚಿಂತನಾಗನವರತಂ ನಿಷ್ಠಾ ||
ಕನ್ಯೆಯ ಕೈವಿಡಿದನಘ ಮಹಾ ಚೈ
ತನ್ಯ ಶ್ರೀಗುರು ಪಾದಾಂಬುಜಮನ
ನನ್ಯತೆಯಿಂ ಪೂಜಿಸಿ ವಿತ್ತಪ್ರಾಣಾಂಗಮ ನರ್ಪಿಸುವಾ || ೪ ||

ಕಾಯದ ಕಳವಳವಳಿಯದು ಮನಸಿನ
ಪೇಯದ ಶೋಕ ವಿಮೋಹಗಳಡಗವು
ಮಾಯಾಭ್ರಾಂತಿ ಪ್ರಾಣಕ್ಷುತ್ ತೃಷೆಯರಿಯದೆ ನೀಂ ಬರಿದೆ ||
ಕಾಯಕ ವಾಚಕ ಮಾನಸದಿಂ ಧನ
ಕಾಯ ಪ್ರಾಣಂಗಳನರ್ಪಿಸಿ ನಿ
ತ್ಯಾಯತ ಗುರುವಂ ಪೂಜಿಪೆನೆಂಬೀ ಭ್ರಾಂತಾವಾಯವಿದೇಂ || ೫ ||

ನಿಯತ ಗುರುವಿನಿಂ ಜನನಂ ಶಿವನೊಳು
ಲಯವಮಾ ಗುರುಭಕ್ತಿಯೊಳಾನಂದಂ
ಸ್ವಯಲಿಂಗ ತ್ರಯದೊಳು ಮೋಹಂ ತೀರ್ಥಪ್ರಸಾದಗಳಿಂ ||
ಕ್ಷಯವಮಾದುವು ಷಡ್ಭಾವವಿಕಾರ ವಿ
ಷಯ ದುರ್ಭಾವಮನಳಿದು ಮಹಾ ಚಿ
ನ್ಮಯಗುರುವಿಂ ನಿಜಪರತತ್ವ ಮದಿಲ್ಲೆಂದರಿದರ್ಚಿಸುತಿಹನು || ೬ ||

ಸುಟ್ಟುರುಹದೆ ಸರ್ವೇಂದ್ರಿಯ ವಿಷಯಮು
ನಟ್ಟದೆ ಮಾಯಾಲಸ್ಯ ಮದಂಗಳ
ಕುಟ್ಟದೆ ಸತ್ವರಜಸ್ತಾಮಸಮಂ ಕಟ್ಟದೆ ಕರಣಗಳ ||
ಕಟ್ಟದೆ ಷಡ್ರಿಪುಗಳ ಬಾಯಂ ಹಿ
ಮ್ಮೆಟ್ಟಿಸದಖಿಳ ಗುಣಂಗಳ ಲಿಂಗವ
ಮುಟ್ಟದ ಮನದವಗೆಂತಳವಡುವುದು ನಿಷ್ಠಾ ಗುರುಭಕ್ತಿ ||೭||

ಹೇಗೆ ಮನವೆ ಕೇಳು ಶ್ರೀ ಗುರು ಕೃಪೆ
ಮಾಡಿಯೆ ತನ್ನ ಕರೋದ್ಭವನೆನಿಸಿ ಮ
ಹಾಗಣಿತಾಖಿಳ ಗುಣಗಳನೆಲ್ಲ ನಿವೃತ್ತಿ ಮುಖಕೆ ತಂದು ||
ಬೇಗ ಚಿದಗ್ನಿಯೊಳಂ ಪಾಕವಮಾ
ಡೀಗ ಮಹಾಲಿಂಗಕ್ಕುಪಕರಣ ಗ
ಳಾಗಿತ್ತನು ಲಿಂಗಮನಿದು ಕಾರಣಮಿಲ್ಲವಗುಣನಿವಹಂ ||೮||

ಗಾಢ ತ್ರಿವಿಧವ್ರತನೇಮಾದಿ
ವ್ಯೂಢ ಪರಾಕ್ರಮಿಯಾಗದೆ ನಿರುಪಮ
ಗೂಢ ಶಿವೈಕ್ಯಾನುಭವೋಭಯ ಲಿಂಗಪ್ರಸಾದ ಸುಖಾ ||
ರೂಢವಪ್ರಸ್ಖಲಿತ ಶಿವಯೋಗಾ
ಲೀಢ ಮನಸ್ಕಲಿಯಾಗದೆ ಭಕ್ತಿ
ಪ್ರೌಢ ನೆನಿಸದೆಂತಳವಡುವುದು ನಿರ್ಗುಣಚಿತ್ತಾಯತವು ||೯||

ವಿದ್ಯಾಂಗನೆಯಂ ರಮಿಸಿ ಜಡಾತ್ಮಾ
ವಿದ್ಯೆಯ ಕೆದರಿಸಿಯೋಡಿಸಿ ಪರಮಾ
ರಾಧ್ಯನವ ಪದಕಮಲವುಮನರ್ಚಿಸಿಯರ್ಪಿಸಿ ಶೇಷವನು ||
ಹೃದ್ಯ ಮಹಿತ ನಿಷ್ಠೆಯೊಳನುಭವಿಸಿಯ
ಭೇದ್ಯ ಮಹಾಗುರು ಕರುಣೇಷ್ಟವನುರೆ
ವೇದ್ಯಮೆನಿಸಿ ಕೊಂಡರ್ಚಿಸುವೆನು ಸಂತೋಷಹೃದಯನಾಗಿ ||೧೦||

ಪ್ರಾಣಂ ಮುಟ್ಟಿಯೆ ಮಾಡಿದುದರ್ಚನೆ
ಪ್ರಾಣ ಸಹಿತಮನುಭವಿಪುದೆ ಶೇಷಂ
ಪ್ರಾಣದ ಲಿಂಗಮೆ ಗುರುಸಂಬಂಧಂ ಶೇಷಮೆ ಗುರು ಮಹಿಮೆ ||
ಪ್ರಾಣಂ ಮುಂತಾಗರ್ಪಿಸಿ ಭಕ್ತ್ರಧು
ರೀಣಮಿದೆ ಯಕುಟಿಲಮನಾರ್ಮ್ಮಾಳ್ದರೊ
ಕೇಣದಿನಳಿವ ಘಟಕೆ ಲಿಂಗದ ಸಂಬಂಧಮದೆಲ್ಲಿಯದೋ || ೧೧ ||

ಕ್ಷೀರ ಫಳಂಗಳ ನುಳಿದವರನು ರುಚಿ
ಯಾರಸಗಳ ನರಸುವನಂತೈ ಗುರು
ಕಾರುಣ್ಯದೆ ಭಾವಾದಿ ನಯನದೊಳು ಪೂರಯಿಸಿಯೆ ತಂದೂ ||
* ಸೇರಿಸಿದಿಟ್ಟಮ ನುಳಿದೊಳಗರಸುತೆ
ವರರಮ್ಯಾಗ್ನಿಯ ದಾಹಕ ಶಕ್ತಿ ಸು
ವಾರಿಯೊಳುಂಟೇ ವಿಚಾರಿಸಿ ತಿಳಿಸವಿಮೂಢಮನವೆ ನೀಂ || ೧೨ ||

ಶ್ರೌತಾತೀತನ ನೋಲಿಸುವಡೇತರ
ನೀತಿಯದೇತರ ಮಂತ್ರಾಗಮಪೇ
ಳೋತಾರ್ಯಂ ಕೊಟ್ಟಕುಟಿಲಮಿದನೇತರೊಳಗನುಗೆಯ್ವೆ ||
ಪೂತ ನಿರಾಕಾರ ಬ್ರಹ್ಮವೇ ಸವಿ
ಮಾತಿಗೆ ಬಂದುದೆನುತೆ ಬಳಲಲು ಬೇ-
ಡಾತುಮಲಿಂಗಮನಾಹ್ವಾನಿಸಿಯರ್ಚ್ಚಿಸಿ ಸುಖಿಸೈ ಯಮಳ || ೧೩ ||

ಪುರುಷನ ಲಾವಣ್ಯವು ಮನದಲ್ಲಿರೆ
ಸರಸ ಮಧುರ ಸಲ್ಲಾಪಾದಿಗಳಿಂ
ನೆರದಂತಹುದೆ ಕಮಲದಳಲೋಚನೆ ಗಾಹ್ವಾನಿಸುವಲ್ಲಿ ||
ನಿರುಪಮಿತ ಪ್ರಾಣೇಶ್ವರನೆಲ್ಲಿಹ
ನರರೆ ನಿರಾಕಾರಮನಾಹ್ವಾನಿಸಿ
ಭರದಿಂದರ್ಚ್ಚಿಸಿ ಪೂಜಿಸಿ ಪರಿಭಾವಿಸಲೆಂತೈ ದಿಟದಿ || ೧೪ ||

* ಪಾ, ದಿಷ್ಟಮ

ನಾದ ಕಳಾ ಬಿಂದು ಗ್ರಾಸನ ಸ
ಮ್ಮೋದಿತ ತತ್ವಾತೀತಾನಂದ ಮ
ಹೋದಯ ಸತ್ಪ್ರಾಣವು ತಂ ತಮಗೆ ಕರತಳಾಮಳಕಮೆನೆ ||
ವೇಧಿಪುದೇಸರಿಯಿಂ ಕರತಳಕಿದ
ರಾದಿಯ ನರಿಯದೆ ಕೆಡಬೇಡೆಲವೋ
ಭೇದವ ಮಾಡಿಷ್ಟವನು ವಿಸರ್ಜಿಸಿ ಕಳೆ ನಿಶ್ಚಯಮಲ್ತು || ೧೫ ||

ನಾದ ಕಳಾ ಬಿಂದ್ವತಿಶಯನಂ ಗುರು
ಭೇದಿಸಿ ತಂದಾಭಾವಪ್ರಾಣೇ
ಷ್ಟಾದಿಯನೇಕೀಕರಿಸಿ ಕರಸ್ಥಲಕೀಯಲ್ಕಿದು ತಾನೇ ||
ವೋದದಿನಹಿದಷ್ಟಾತ್ಮಕನಂತಾ
ಪಾದ ಶಿರಃ ಶೈವಂ ರೋಮಂ ರೋ
ಮಾದಿ ಭವೇಚ್ಛಿವ ಲಿಂಗಗ್ರಹಣಾತ್ತೆಂಬುದ ನರಿ ಮರುಳೆ || ೧೬ ||

ಸಂತತ ಗುರು ಕಾರುಣ್ಯೆಷ್ಟಮನೋ
ರಂತೆ ಪಡೆದು ಪೂಜಿಸಲು ವೃಥಾನಿನ
ಗಂತ್ಯದೊಳಗಮಳವಲ್ಲದೆ ಸಂಪೂರ್ಣಕಳಾಪ್ರಾಣೇಶ ||
ಚಿಂತಿತ ಮಾತ್ರ ಸ್ವಪ್ರತ್ಯಕ್ಷನಿ
ತಾಂತ ನಿಜಾನಂದೋದಯ ಮಹುದಾ
ಭ್ರಾಂತಿಯ ನುಳಿ ಪರಿತೋಷ ಹೃದಮನಾಗನುಪಮ ತತ್ವದೊಳು || ೧೭ ||

ಗುರು ಚಿತ್ಕಳೆಯಂ ಕೊಡಿಷ್ಟಮನೀ
ಕರದಲ್ಲಿತ್ತಾತ್ರಭ್ಯಂ ಪರಮೇ
ಶ್ವರನಿಲ್ಲಿಹ ನಗಲದೆ ಯಾಹ್ವಾನಿಸಿಯೆ ವಿಸರ್ಜಿಸುವಲ್ಲಿ ||
ನಿರುಪಮಿತ ಪ್ರಾಣೇಷ್ಟಗಳಿಲ್ಲವು
ವರಸಮ್ಯಕ್ ಜ್ಞಾನಕ್ಕೆ ವಿರೋಧಿಗ
ಳೆರಡಿಷ್ಟ ಪ್ರಾಣಾನ್ವಿತ ಶರಣಂಗಿಲ್ಲಾಹ್ವಾನಗಳು || ೧೮ ||

ದುಷ್ಟ ಭಾವಾಂತಃಕರಣ ಹರಣ ನಿಜ
ತುಷ್ಟಿ ಪ್ರಸಾದ ಸಚ್ಚಿದ್ರೂಪೋ
ತ್ಕೃಷ್ಟಾನಂದ ಯುತೋಪರಿತತ್ತ್ವಯತ ಸಮ್ಯಕ್‌ಜ್ಞಾನ ||
ಶಿಷ್ಟ ಕ್ರಿಯೆಯಿಂ ದೊಪ್ಪುವ ಮಹಿತ ನಿ
ಜೇಷ್ಟ ಪ್ರಾಣೇಶ್ವರ ನಂತಾ ವಿ
ಸ್ಪಷ್ಟ ಮಹಿತ ಪರಿಪೂರ್ಣತ್ವಂ ಸತ
ತಾಷ್ಟ ವಿಧಾರ್ಚನೆಯಿಂ ದೇಹಲಿಂಗ ಸಂಬಂಧಿಸಬಹುದೇ || ೧೯ ||

ಓಹೋ ಮಹಾ ಘನ ಲಿಂಗ ಪ್ರಾಣ ಸ
ಮಾಹಿತ ಮನವೆ ವಿಚಾರದೊಳಾಲಿಸು
ಮೋಹ ವಿನಯ ಭಯಕಿಂಕುರ್ವಾಣಾ ಮೋಹನ ಭಕ್ತೇಷ್ಟ ||
ಸಾಹಿತ್ಯದ ಸಮರಸಮಾಚಾರಂ
ಸ್ನೇಹ ವಿನಿಶ್ಚಲ ನಿಶ್ಚಯ ದೃಢ ಚೇ
ತೋಹಿತ ವಿಶ್ವಾಸಂಗಳ ಸಮರಸಮೇ ಸದ್ಗುರು ಲಿಂಗ || ೨೦ ||

ಸಮ್ಯಕ್ ಜ್ಞಾನಾಮಲ ಸಜನತನಂ
ಸಮ್ಯಕ್ ಸಾಹಿತ್ಯವಿ ಸುಯಿಧಾನಾ
ಗಮ್ಯ ಪ್ರಸನ್ನತೆಗಳ ಸಮರಸಮೆ ಶಿವಲಿಂಗ ||
ಸೌಮ್ಯಾಂತರ್ಮುಖ ದೃಕ್ಕಿರಣೋದಯ
ಸೌಮ್ಯ ಹೃದಯ ಮೂಲ ಸ್ವಾನುಭವ ಗ
ತೋರ್ಮ್ಯನಘ ಪ್ರಾಣೇಶ್ವರರನುಸಂಧಾನಮೆ ಚರಲಿಂಗ || ೨೧ ||

ಭವ್ಯಾಮಲ ಪರವಶ ಗೂಢೋದಿತ
ನವ್ಯೈಕಾಗ್ರ ಸುಚಿತ್ತೋತ್ತರಯೋ
ಗಾವ್ಯಯ ಪೂರ್ಣಾಂತಿಕ ಸಚ್ಚಿತ್ಸುಖ ಸಮರಸಮೆ ಶೇಷ ||
ಸೇವ್ಯ ಮನೋಲಯ ನಾದಾದ್ವೈತಸು
ದಿವ್ಯ ಜ್ಞಾನಾಖಿಲ ಕಬಳಿಕಾಪ
ರ ವ್ಯವಹೃತಿ ಭೋಜ್ಯ ವಿಭಾವದ ಸಮರಸಮೆ ಮಹಾಲಿಂಗ || ೨೨ ||

ಈ ತ್ರಿಂಶಕ ನಿಷ್ಣಾತೇಷ್ಟಮೆ ಸುಜ
ಗತ್ರಯದೊಳು ಚೇತನವಾಗಿಹುದು ಪ
ವಿತ್ರ ಸುಪಕ್ವ ಹೃದಯರಿಗೆ ಮಾಯಾ ತಿಮಿರವ ನೋಡಿಸುವ ||
ಮಿತ್ರನ ದಾಗಿಹುದವರೋಳ್ ಪರಶಿವ
ಪಾತ್ರರ್ಗ್ಗಂ ನಿರ್ಗುಣ ಚೈತನ್ಯ ಕ
ಳಾತ್ರಿವಿಧಾತ್ಮಕ ಸಮ್ಯಕ್ ಜ್ಞಾನದೊಳಿಹುದಿದನರ್ಚ್ಛಿಪುದು || ೩೩ ||

ಮಂಗಳ ಮಹಿಮೋದಯ ನಿತ್ಯಾನಂ
ದಾಂಗಾಯತ ಪರಿಪೂರ್ಣ್ಣ ಮಹಾಘನ
ಲಿಂಗಮಯಂ ಜಗಮಾಗಿರ ಲಿಡೆಗೆಯ್ದುಗ್ಗಣಿಪೂಗಳನು ||
ಪಿಂಗದೆ ತಂದರ್ಚಿಸಲರಿಯೆನು ತ
ಲ್ಲಿಂಗದ ಬಸುರಲ್ಲಿರ್ದ್ದನುದಿಷ್ಟಂ
ಸಂಗಿಸುತಲ್ಲಾಡುವ ಬುದ್ಧಿಯು ಕೂಡದು ಕೂಡದು ಮರುಳೆ || ೩೪ ||

ನಿತ್ಯಾ ನಿತ್ಯ ಜಡಾ ಜಡ ಮಾಯಾ
ಕೃತ್ಯಾಕೃತ್ಯ ವಿಶೇಷದ ಸುಲಯವು
ಸತ್ಯಾಸತ್ಯ ಸುಖಾಸುಖ ಮಿಥ್ಯಾ ಮಿಥ್ಯಾತ್ಮಕ ಜಗವು ||
ಪ್ರತ್ಯಯ ಭಜನದೆ ನಿಮಿತ್ತಸ್ವಯ
ಪ್ರತ್ಯಕ್ಷಾತ್ಮರೊಳಿರ್ಪ್ಪಿನ ಭವನೌ
ಚಿತ್ಯ ಶಮೀಗರ್ಭಸ್ಥ ಕೃಶಾನುವಿನಂತೆ ವಿಚಾರಿಸಲು || ೩೫ ||

ಕನದಣೋರಣಿಯಾನ್ ಮಹತೋಮಹೀ
ಯಾನೆಂಬೀ ಶ್ರುತಿಸಾರಲ್ವಿಶ್ವ ಜ
ಗನ್ನಟನಾದಿಕ ಪಂಚಬ್ರಹ್ಮ ಮಯಂ ಜಗದಿತ್ಯರ್ಥಂ ||
ಸನ್ನಾದ್ಯಯ ಮಾತ್ಮಾಬ್ರಹ್ಮಾಸ್ಮಿಮ
ಹೋನ್ನತ ವಿಶ್ವಬ್ರಹ್ಮಂ ಖಲುವೆಂ
ಬನ್ವಯವರಿಯೆ ಜಗದ್ ಬ್ರಹ್ಮೈಕ್ಯಂ ತಾನಾಗಿರುತಿಹುದು || ೩೬ ||

ನಿಲ್ಲವನಿಯೊಳಿಹುದೆಂದೊಡೆ ಕಡವರ
ವೆಲ್ಲೆಡೆಯಲ್ಲಿಹುದೇ ಗರಳಂ ಫಣಿ
ಯಲ್ಲಿಹುದೆಂದೊಡೆ ಸರ್ವಾಂಗದೋಳಂ ತಪ್ಪದೆ ನೆಲೆಸಿಹುದೆ ||
ಖುಲ್ಲ ಮನವೆ ಕೇಳ್ ಪರಶಿವನ ನೀ ಜಗ
ದಲ್ಲಿಹ ನೆಂದೊಡದೆಂತಿಹನೈ ನಿಜ
ದಲ್ಲಿಯೆ ಶಶಿಕಾಂತಂ ಶಶಿಗೊಸರುವ ತೆರನವರಲ್ಲಿಹನು || ೨೭ ||

ಭೂಜಲ ತೇಜೋನಿಲ ಗಗನ ದ್ವಿಜ
ರಾಜಾರ್ಯಮ ಜೀವಾತ್ಮಕರೆಂಬ ವಿ
ರಾಜಿತ ಪರಮೇಶ್ವರನಷ್ಟಾಂಗಮೆ ಕ್ರಮದಿಂದಾದಿಯೊಳು ||
ತ್ರೈಜಗಮಾಗಿ ಶುಭಸ್ಥಿತಿಯಲ್ಲಿರೆ
ಯೋಜಿತ ದೇಹಾತ್ಮರಿಗೇಂ ಭೇದಂ
ನೈಜ ವಿಚಾರದೊಳರಿಯಲ್ ಬ್ರಹ್ಮ ಜಗನ್ಮಯಮಾಗಿಹುದು || ೨೮ ||

ಭಜನಾಸಕ್ತನ ಭಾವದೊಳಷ್ಟ ತ
ನು ಜಗದ ರೂಪಮೆ ತನುವೆಂದುಂಟಾ
* ನಿಜದಲ್ಲೇಕತಮಲ್ಲವಯವ ರೂಪಾದಷ್ಟಾಂಗಕ್ಕಂ ||
ತ್ರಿಜಗ ಚೈತನ್ಯಾದಿ ಮಹೇಶ್ವರ
ವಿಜಯಗೆ ಭೇದಮದಿಲ್ಲೆಂಬುದೆ ಇ
ಲ್ಲ ಜಡಾ ನಿತ್ಯಾ ಚೇತನ ಮಯವಹ ಕಾರಣದಿಂದುಂಟು || ೨೯ ||

ಘನತರದಂಗ ದ್ರವ ಬುದ್ಬುದ ಸಂ
ತಾನ ಮಹಾರ್ಣವದಲ್ಲುದಿಸಲ್ಪವ
ಮಾನನ ಸಂಚಲದಿಂ ತಾವೇನವು ಭೇದಗಳಾಗಿಸುವು ||
ಮಾನಿತ ಸಚ್ಚಿದ್ರೂಪ ಬ್ರಹ್ಮದೊ
ಳೇ ನಾಮಕ್ರಿಯೆ ರೂಪುಗಳಿಂ ತೋ
ರ್ದೀ ನಿಖಿಲಂ ತದ್ಬ್ರಹ್ಮಕೆ ಭೇದಗಳವೆ ವಿಚಾರಿಸಲು || ೩೦ ||

---

* ಪಾ. ನಿಜದಲ್ಲೇಕತ್ವಮಿಲ್ಲವಯವ

ಪರಮೇಶ್ವರ ಸನ್ನಿಧಿ ಲಕ್ಷಣ ಸಂ
ಸ್ಫುರಣೇಕ್ಷಣ ಮಾತ್ರದೋಳೀ ಮಾಯಾ
ಶರಧಿಯೊಳಖಿಲ ಬ್ರಹ್ಮಾದಿಕಮಾ ಬುದ್ಬುದ ನಿವಹಗಳು ||
ಸ್ಫುರಿಸಿ ವಿನಾಶಮ ನೆಯ್ದುತ್ತಿಹವಾ
ನಿರುಪಮ ಸಚ್ಚಿದ್ಬ್ರಹ್ಮವೆ ಸರ್ವೋ
ಪರಿತತ್ವಾಯತ ನಿತ್ಯಾನಂದ ಮಯಂ ತಾನಾಗಿಹುದು || ೩೧ ||

ಎಲ್ಲಿ ತರಂಗಗಳಲ್ಲಿಯೇ ಜಲಮಯ
ವೆಲ್ಲಿ ಕಟಕವಲ್ಲಿಯೆ ಕಾಂಚನಮಯ
ವೆಲ್ಲಷ್ಟ ಶಿಖಾಮಯ ಮಹುದೀಬ್ರಹ್ಮಾತ್ಮಕವಹ ಜಗವು ||
ಗೆಲ್ಲದೊಳಿಹಗಂ ನೋಡಿದೊಡಹಗೆ ಸ
ಮುಲ್ಲಸದಿಂ ತೋರ್ಪುದು ಪರಿಪೂರ್ಣದೆ
ಮೆಲ್ಲನೆ ದೋಷಮನಳಿದೀ ಜಗವಂ ನೀನೆಂದರಿ ಮರುಳೆ || ೩೨ ||

ಪಿತ್ತ ತಲೆಗೇರಿದ ಮಾನವನೆ
ತೆತ್ತಂ ನೋಡಿದೊಡತ್ತತ್ತಂ ದುಃ
ಪಿತ್ತ ಚ್ಛಾಯೆಯೆ ತೋರ್ಪಂತೀ ಸಮ್ಯಕ್‌ಜ್ಞಾನೇಕ್ಷಣವ ||
ಕಿತ್ತೀಕ್ಷಿಸಲೆಂತಂತೆಯೆ ತೋರ್ಪುದು
ದಾತ್ತ ಜ್ಞಾನಾವೃತದಿಂದಾನುರೆ
ಪಿತ್ತ ಮಹಾ ಸಂತೃಪ್ತಿ ಜಗಕ್ಕೆಂತಹುದು ವಿಕಳ ಮನವೆ || ೩೩ ||

ದೇವನೆ ಪತಿಯಹನು ದೇಹವಾಶ್ರಿತ
ಜೀವನೆ ಪಶು ವಾ ಸ್ವಾಮಿ ಭೃತ್ಯತ್ವವು
ಕೇವಲ ಸಂಬಂಧದ ವೊಲು ಜೀವೇಶ್ವರರೊಂದೆ ಪ್ರಾಗ ||
ಭಾವದೊಳಂ ನಿಜವಹ ವಿಶ್ವಾತ್ಮಕ
ಜೀವನೆ ಸಚ್ಚಿದ್ಬ್ರಹ್ಮೈಕ್ಯಂತಾ
ನೀವಿಧಮಾಗಿ ದ್ವೈತ ನಿಷೇಧಂ ತಿಳಿ ಸಮ್ಯಕ್ ಜ್ಞಾನಿ || ೩೪ ||

ದೇವಂ ಪ್ರೇರಕನಾಗಿಯೆ ತಾಂ ಪರಿ
ಭಾವಿಸಿಕೊಳುತಿಹ ಕಾರಣವಲ್ಲಿಯ
ಭಾವ ಜ್ಞಾನೋದಯ ಮಾಡಾಗಳೆಯಹುದು ಶಿವಾದ್ವೈತ ||
ತೀವಿದ ಕರ್ಮಾನ್ವಿತ ಜಡಜೀವಂ
ಗಾವೈಕ್ಯತೆಯುಂ ಇಲ್ಲೆಂದರಿ ಪೂ
ಜಾ ವಿಧ್ಯಾದಿ ಸಮಸ್ತದೊಳದ್ವೈತಮನೆಸಗದೆ ಮಾಳ್ಕುಂ || ೩೫ ||

ಭೂತೇಶಂ ಸರ್ವಾಂಗನಾದೊಡಂ
ಚೇತನಮಾಗಿಯೆ ಭಕ್ತರ ಹೃಜ್ಜಲ
ಜಾತದೊಳಿಪ್ಪಂ ತಚ್ಛಿವತತ್ವ ವಿಮರ್ಶನ ಪರಿಭಾವಾ ||
ದ್ವೈತ ಜ್ಞಾನಿಗಳೇ ಲಿಂಗೈಕ್ಯರು
ಜ್ಞಾತೇ ತತ್ವಂ ಕಸ್ಸಂಸಾರಃ
ಯಾತೇ ರುದ್ರ ಶಿವಾತನುರಯ ಮಾತ್ಮಾ ಬ್ರಹ್ಮಾಸ್ಮಿಯೆನೆ || ೩೬ ||

ನಿತ್ಯ ನಿರಾಕಾರೋಪರಿತತ್ವ
ಪ್ರತ್ಯಯ ಪರಮಾನಂದಾಯತ ಬಹು
ಶ್ರುತ್ಯನುಪಮ ಸರ್ವೋತ್ತಮ ಮಿಳಿತ ಸುಚಿತ್ ಪರಿಪೂರ್ಣಮಯ ||
ಸತ್ಯ ಸಮಕ್ಷಯ ಸದ್ಬ್ರಹ್ಮಂ ಸ್ವ
ಪ್ರತ್ಯಕ್ಷಂ ತಾನಾಗಿರೆ ಬಳಿಕೀ
ಕೃತ್ಯಾಕೃತ್ಯದ ಪೂಜೆಗಳೇತಕೆ ಬಿಡು ಸುಖಿಯಾಗಿರಿದು || ೩೭ ||

ಅಂಗಮ ನರಿವುತೆ ಲಿಂಗವ ಮರೆದೊಡೆ
ಪಿಂಗವು ಭವಮಾಲೆಗಳದರಿಂ ತ
ನ್ನಂಗವ ಮರೆದೀ ಲಿಂಗವ ಮರೆವುದು ತನುಗುಣ ಮಿರುತಿರಲೂ ||
ಲಿಂಗವ ಮರೆವಾ ದ್ವೈತಮದೆಂತೋ
ಲಿಂಗದ್ರೋಹಿಗಳಾಚಾರ ಭ್ರ
ಷ್ಟಾಂಗರ ನುಡಿಯಂ ಸುಡು ಸುಡು ತಿಳಿ ನಿಜದಂಗಮನೆಲೆಮರುಳೆ || ೩೮ ||

ಕಾಮ ಕ್ರೋಧ ವ್ಯಸನ ಷಡರಿ ವ
ರ್ಗಾಮಿಷ ನಿದ್ರಾ ಮದ ಮುದ್ರಾಜಡ
ತಾಮಸ ವಿಷಯಾಹಂಕಾರಾತ್ಮಜ ವಧು ಬಾಂಧವ ಮುಖ್ಯಾ ||
ಆ ಮಯ ಕೌಷಿಧ ಸೇವನೆ ದೊರೆವಂ
ತೀ ಮತ್ತನು ಪೂರ್ವಾಶ್ರಯ ವಳಿಯದೆ
ಕಾಮಿಸಿ ಲಿಂಗಮನನಿಶಂ ಪೂಜಿಸಿ ಫಲವೇನೈ ಭ್ರಾಂತಾ || ೩೯ ||

ಶುದ್ಧ ಪ್ರಾಕೃತರಿರ್ತಿರಮಿವರೊಳು
ಶುದ್ಧರು ಲಿಂಗ ಸಮೇತರುಳಿದವರ
ಶುದ್ಧ ಪ್ರಾಕೃತರೆಂದರಿದನ್ಯರ ತೊಲಗಿಸಿ ಶಿವನಲ್ಲಿ ||
ಶುದ್ಧಾತ್ಮಕರಂ ಭೇದವ ಮಾಡದೆ
ಶುದ್ಧಾಚಾರಾ ಚರಿತಾಧಿಕ್ಯಂ
ಶುದ್ಧಾದ್ವೈತ ಜ್ಞಾನಾರ್ಚನೆಯಂ ಮಾಡುವ ನನವರತ || ೪೦ ||

ಗೀರ್ವಾಣಾದ್ಯಜ ಹರಿಗಳನಿತ್ಯರು
ನಿರ್ವಾಣದೆಯ ಸಮರ್ಥರು ಮಾಯಾ
ಗರ್ವ ಸುಮೋಹಿತರಖಿಳಾನುಗ್ರಹಕಾರಕ ಪರಶಿವನೆ ||
ಸರ್ವೋತ್ಕೃಷ್ಟನ ವಿದ್ಯಾರಹಿತಂ
ನಿರ್ವಾಣ ಪ್ರದ ನಿತ್ಯನೆಯಂದರಿ
ದೋರ್ವರ ಸತಿ ಧನ ಹಿಂಸಾ ಪರದೈವಗಳುಳಿದರ್ಚಿಪನು || ೪೧ ||

ಮನಸಿನ ಮೋಹವೇ ಸತಿಯಲ್ಲಿವೆ ಕೇ
ಳ್ಧನಮುಲವೇ ತತ್ಕಾಂಕ್ಷೆಯ ಬಂಧಿಸಿ
ತನು ಕರಣಂಗಳ ನಿರ್ದಯೆಯಿಂದಳಿವುದು ಹಿಂಸೆಯೆ ತಾನೆ ||
ಘನ ಗುರುಲಿಂಗ ಚರ ತ್ರಿವಿಧ ಮನನು
ದಿನ ಮನ್ಯಾ ಭಾವದೊಳರ್ಚಿಸುತಿರೆ
ನಿನಗೆ ನಿರಂತರಮಿವೆ ಪರದೈವಗಳಾಗಿರುತಿಹವರಿಯೆ || ೪೨ ||

ತನುವುಪದೇಶವ ಪಡೆಯದ ಮುನ್ನವೆ
ವಿನಯದೊಳುಪದೇಶವ ಪಡೆದವು ತಾ
ವೆನಗುಪದೇಶವ ಪೇಳ್ದಿನ್ನಯ ಸತ್ಪ್ರಾಣ ಸಹಿತವಾಗಿ ||
ಘನಲಿಂಗಕ್ಕುಪಕರಣಗಳಾಗಿಹ
ವನು ದಿನ ಬಂಧಿಸಿ ನೋಯಿಸಲಿಲ್ಲೈ
ಘನದಲ್ಲಿನ್ನೊಡ ಹುಟ್ಟಿದ ಕಾರಣದಿಂ ಸುಖಿಯಾಗಿಹವು || ೮೩ ||

ಎಲ್ಲವ ನರಿವುದಿದೆನೆ ಕರಣಂಗಳ
ತಲ್ಲಣ ದೊಳಗಾಗರಿವೆಯ ಅಮ್ಮದಿ
ವೆಲ್ಲವು ದೈವಗಳಲ್ಲರಿ ಗುರು ಚರಲಿಂಗವೆ ದೈವಗಳು ||
ಕಲ್ಲಿದೆ ದೈವ ಮೆನಲ್ ಕುಲಿಶದ ನೊನೆ
ಯಲ್ಲಳಿದುದು ಮರದೈವ ಮೆನಲ್ಕಿಡಿ
ಯಲ್ಲಿಯೆ ಬೆಂದುದು ಮೃತ್ತಿಕೆಯೆನೆ ಜಲದೊಳ್ಕದಡಿತು ಮನವೆ || ೮೮ ||

ಜೀವನಗಳ್ಧನದಿಂ ವಂಚಕ ನಿ
ಷ್ಠಾವಿಧಿ ಹೀನಂ ಗುರು ಚರಲಿಂಗವೆ
ದೈವಗಳೆಂದರ್ಚ್ಚಿಸಿ ಪರಿಭಾವಿಸಿ ಫಲವೇನದರಿಂದ್ಥಂ ||
ಭಾವದೊಳೊಂದಾ ಕಾಯಕದಲ್ಲೊಂ
ದಾವಾಚಕದಲ್ಲೊಂದಾಗಿರೆ ನಿನ
ಗೀ ವಾಚಾಳವಿದೇಂ ಸಂಬಳಮೇ ಬಿಡು ಸುಡಲೀನುಡಿಯ || ೮೫ ||

ಶಿರಮುಂ ಛೇದನ ಮಾಡೊಡಮೇ ನಪ
ಹರಣ ಮದಾ ದೊಡಮೇಂ ಸರ್ವಸ್ವಂ
ಕರಣದೊಳರ್ಚ್ಚನೆ ವಚನದೊಳಂ ಸ್ತೋತ್ರಂ ಶಿವನೊಳು ಮನವು ||
ಬೆರಸಿಯೆ ತತ್ರಿತ್ರಿವಿಧದ ಪ್ರಸಾದದೆ
ಪರಮಾತ್ಮ ಸ್ತುತಿಯಂ ಮಾಡುತ ಲನ-
ವರತಂ ನಿಷ್ಠಾತ್ಮಕ ತಾಂ ತನ್ನವಿರತ ಭಾವದೊಳಿಹಮ || ೮೬ ||

ಗುರು ಕಾರುಣ್ಯಂ ಭಸ್ಮೋದ್ಧೂಳನ
ವರರುದ್ರಾಕ್ಷಾಭರಣಂ ಪಂಚಾ
ಕ್ಷರಿ ಭಾಷಣ ಸುಪ್ರಸಾದ ದಾಯತ ನೈಷ್ಠಿಕೆ ಲಿಂಗಾಂಗ ||
ಚಿರ ಸಂಬಂಧಂ ಶಿವಲಿಂಗಾರ್ಚನೆ
ಗುರು ಪೂಜಾ ಸಂಪನ್ನತೆ ತತ್ವ
ಸ್ಫುರದವಧಾನಾರ್ಪಿತಮಾ ತೀರ್ಥಂ ಪ್ರಸಾದ ಗ್ರಹಣಂ || ೪೭ ||

ಲಿಂಗೈಕಾಮಲ ನಿಷ್ಠೆ ಮಹಾಘನ
ಜಂಗಮ ಲೋಲುಪ್ತಿಕೆ ಶಿವಶರಣರ
ಸಂಗಮ ವರ ಕಾರುಣ್ಯಾರ್ಣವಮಗ್ನಾತ್ಮಂ ತ್ರಿವಿಧಕ್ಕೆ ||
ಲಿಂಗಾಯತಮೂ ತ್ರಿಕರಣಶುದ್ಧತೆ
ಲಿಂಗಾಂಗ ತ್ರಿವಿಧೋನ್ನತ ಸಂಬಂ
ಧಂ ಗತ ಪರದೈವ ಸ್ಮರಣಂ ಭವಿಸಂಗ ನಿರಾಕರಣೆ || ೪೮ ||

ಪ್ರಾಕೃತ ನಿರಸನ ಜಿತಭವಿಪಾಕ ನಿ
ರಾಕೃತ ಪರವನಿತಾ ಜನ ರತಿ ಗ
ರ್ಭೀಕೃತ ಸನ್ಮತ ಗತ ಪರಧನ ದೂರೀಕೃತ ಶಿವನಿಂದಾ |
ಸ್ವೀಕೃತ ಗುರುಚರ ಲಿಂಗಾರ್ಪಿತ ಸತ್ಯ
ಣೀಕೃತ ಹೀನ ಸತಾಮಸ ಭಕ್ತಾಂ
ಗೀಕೃತ ಶೇಷಾನ್ವಿತ ಭೋಗೋತ್ಕಬಳೀಕೃತ ಶಿವ ಸೌಖ್ಯಂ || ೪೯ ||

ವರ್ಜಿತ ಚರ ಶೇಷೋಭಯ ದೂಷಣ
ತರ್ಜಿತ ಫಲಪದ ಕುಲಮದ ಷಡ್ವ
ರ್ಗೋರ್ಜಿತ ಪಾತ್ರಾಪಾತ್ರ ಜ್ಞಾನಾರ್ಪಣ ಷಟ್‌ಸ್ಥಳ ಸಂಪೂರ್ಣ ||
ನಿರ್ಜಿತ ಸಕಲಾಶಾ ದ್ವೈತಾದ್ವೈ
ತಾರ್ಜಿತ ಸರ್ವಾಂಗಾಯತ ಲಿಂಗ ವಿ
ಸರ್ಜಿತ ಸಂಕಲ್ಪ ವಿಕಲ್ಪಾದಿ ವಿಭರ್ಜಿತ ಪರಸಮಯ || ೫೦ ||

ಕಾಲೋಚಿತ ತಾ ಭಿಜ್ಞಾ ಚಾರೋ
ತ್ಕಲಾತ್ತ ದಾಸೋಹಾದಿಕ ಸಂಪತ್
ಕೀಲಿತ ಭಾವನೆಯೆಂಬೀ ಭಾವ ಸುವಿರಕ್ತತ್ವದೊಳು ||
ಲೋಲುಪ್ತಿಕೆ ಪಡೆದಾ ನಿರಹಂಕರ
ಣಾಲೋಲ ತ್ರಿವಿಧ ವ್ರತನಿಯಮಿತ
ಲೀಲೆಯೊಳೀ ತ್ರಿವಿಧಾನುಭವ ಶ್ರದ್ಧಾಚಾರದೊಳಿಹನು || ೫೧ ||

ಋಣವನು ವಪ್ಪಿಯಬುಬಿಡಲೊಲ್ಲದ ಸ
ದ್ಗುಣಿಗಳ ದಾರೋ ಪ್ರಮಾದದಿಂಬರ
ಲಣುವುಂ ಪುಸಿಯದ ವೀರನದಾರೋ ಅನುಭವ ಮಥನದೋಳು ||
ಸೆಣಸದ ಶಾಂತ ನದಾವಂ ಕ್ಷಮೆಯಿಂ
ಮಣಿವವ ನಾವನೊ ಕುಲವರಸದೆ ಶಿವ
ಗಣಕಿತ್ತನ್ಯವ ಮಣಿವವನಾವನೊ ಜಗದೊಳಗಾನರಿಯೆಂ || ೫೨ ||

ಅಕ್ರೋಧ ಕ್ಷಮೆ ಭವಿ ಭಕ್ತ ವಿಭೇ-
ದಕ್ರಮ ಸತ್ಪಾತ್ರ ದ್ರವ್ಯಾರ್ಪಣ
ವಿಕ್ರಮ ಸತ್ಯ ವಚನ ಸುಮಹಾನುಗ್ರಹ ಮಿೂ ಷಡ್ವಿಧಮಂ ||
ಅಕ್ರಮಿಸಿದೆ ನಾದೊಡೆ ಕೇಳೆನ್ನಪ
ರಾಕ್ರಮ ಕಭಿಮಾನತೆ ಯೆಂದರಿದು ನಿ
ಜಕ್ರೆ ಗುರು ಲಿಂಗ ಚರ ತ್ರಿವಿಧ ಕಲ್ಲದೆ ಮಾಟಂ ಬಿಡದೇಂ || ೫೩ ||

ಇರಿಯದ ವೀರಂ ಮುದಿಸೂಳೆಯ ಪೋ
ಲ್ತಿರಿ ಮಿಂಡಿಯು ಸಿರಿ ಮಿಂಡಿಯ ಸೊಬಗಂ
ಜರುಚುವ ಪರಿಯಂತ ಜ್ಞಾನಿಯ ತಪದಂತುಲಿದಡಿಗಡಿಗೆ ||
ಪರೆಗುಟ್ಟೆಸಿ ಕೊಂಡಾಡುವ ಮಾಟಂ
ಬರುದೊರೆ ತಂತವ:ಗಲ್ಲದೆ ಲಿಂಗಮ
ನರಿದಾ ನಿಜಕರ್ಪಿತಮಂ ಮಾಡದ ಬರು ನುಡಿ ಏಂ ಫಲವು || ೫೪ ||

ಕಟ್ಟಿದೆ ಗುರು ಕಾರುಣ್ಯಾಯುಧಮಂ
ಮೆಟ್ಟಿದೆ ಕುವಿಷಯ ಪಾದುಕೆಗಳ ನೆ
ಬ್ಬಟ್ಟಿದೆ ಮೋಹಾವಿದ್ಯಾಶ್ವಾನನ ಕಟ್ಟಿದೆ ತನುಗುಣಮಂ ||
ಮುಟ್ಟಿದೆ ನಿಜಮಂ ಶ್ರದ್ಧಾತಿಲಕವ
ಬೆಟ್ಟಿದೆ ರಿಪುಕುಲ ವಿಜಯನೆ ನಾಂ ಹಿ
ನ್ಮೆಟ್ಟಿದೆ ಭಾಷೆಗೆ ಪಿಡಿಕೈದುವ ಬಿಡು ಜೀವನ ಮೋಹನವ || ೫೫ ||

ವೀರ ವ್ರತ ನಿಯಮಿತ ಸಚ್ಚರಿತಾ
ಚಾರಾಯತ ಶಾಶ್ವತ ಭಕ್ತಿ ಸುವಿ
ಸ್ತಾರಿತ ಮಹದ ಸಮಾಂತರ ಮಹಿತ ಸಪರ್ಯಾಯತಭಾವ ||
ಪೂರಿತ ಬಾಹ್ಯ ಸಮರ್ಚನ ವಸ್ತು ವಿ
ಶಾರದ ಜಂಗಮ ಪರಿಚರಣ ಕ್ರಮ
ಸಾರ ಸುಖಾದಿ ವಿಜೃಂಭಿತ ಮಾನಸನಾಗದೆ ನಿಜವಹುದೆ || ೫೬ ||

ಕಾಯದ ಕಳವಳಕಂಜಿಯೆ ಕಾಯ
ಯ್ಯಾ ಯೆನ್ನೆನು ಜೀವನ ಮೋಹಕಾನೆ
ಯಯ್ಯಾ ಯೆನ್ನೆನು ಯದ್ಭಾವಂ ತದ್ಭವತೀತ್ಯುಕ್ತಂ ಹಿ ||
ಬೀಯ ಮನರ್ಪಿಸುವೆನು ಸವೆಯಲ್ಕದು
ಕಾಯಮ ನರ್ಪಿಸುವೆನು ಬೀ ತೊಡದೆ
ನ್ನಾಯುವನರ್ಪಿಸುವೆನು ನಿಜದಿಂ ವಿಶ್ವಾಸವೆ ಪರವಾಗಿ || ೫೭ ||

ಲೂತನ ತೆರದಿಂ ಸಂಸಾರದ ವಿಷ
ಯಾತುರದಿಂ ಬಳಲುವ ಜೀವನ ಮಂ
ಸೂತಕ ಜನನಾದಿಗಳಳಿಯದೆ ಕೆಡುವಂಗಮನಾವಹ್ನಿ ||
ರೇತ ಹಿರಣ್ಯಮ ಶುದ್ಧ ತ್ರಿವಿಧವ
ನೋತು ನಿಜಕ್ಕರ್ಪಿಸಲೆಂತಹುದೈ
ಮಾತಿನೊಳೆಚ್ಚರು ನಡೆಯೊಳ್ಮರವೆಯದೇತರ ಭಕ್ತಿಗುಣಂ || ೫೮ ||

ಅಷ್ಟದಳದ ಗುಣಮಂ ಕಳೆದಾತ್ಮನ
ನಿಷ್ಟದೊಳಿರಿ ಸಿಷ್ಟಮನಾತ್ಮನೊಳಿರಿ
ಸಿಷ್ಟಮೆ ಜೀವನವಾಗಿಹ ಕಾರಣ ಜೀವನ ಶುದ್ಧಿಯಿದು ||
ಇಷ್ಟಪ್ರಾಣೋಭಯ ಸಹಿತಂ ತಂ
ದಿಷ್ಟಮನಂಗದೊಳಿರಿಸಲ್ತನುವೆ ವಿ
ಶಿಷ್ಟ ಪವಿತ್ರಮಿದಂ ಸೋಂಕಿದುದೆ ಪವಿತ್ರಮಯಾರ್ಪಣವು || ೫೯ ||

ಅಂಗವಿಡಿದು ಶಿವಲಿಂಗಮಿಹುದು ಶಿವ
ಲಿಂಗವಿಡಿದು ಜೀವನಮಿಹುದೀ ಜೀ
ವಾಂಗವಿಡಿದು ಸುಜ್ಞಾನಮಿಹುದು ಸುಜ್ಞಾನದೊಳಾಚಾರಂ ||
ಸಂಗಂ ಸ್ವರವಿಡಿದಿಹ ಶಬ್ದವನಾ
ವಂಗದೆ ಬೇರ್ಪಡಿಸಲ್ಬಹುದೇ ನಿ
ನ್ನಂಗ ಪ್ರಾಣಗಳರ್ಪಿತ ಮೆನಲೆಂತಹುದಯ್ಯ ನಿಜದಿಂ || ೬೦ ||

ಅಂಗಮೆ ಲಿಂಗಕ್ಕರ್ಪಿತಮಾತ್ಮನೆ
ಜಂಗಮಕರ್ಪಿತ ಸುಜ್ಞಾನಮೆ ನಿಜ
ದಂಗಕ್ಕರ್ಪಿತಮಾಗಿ ಜ್ಞಾನಾಚಾರಾನ್ವಿತ ಭಕ್ತಿ ||
ಲಿಂಗಪುರಸ್ಸರ ಮಾದಾಚಾರಮೆ
ಲಿಂಗಾಚಾರಂ ಧ್ಯಾನಾರ್ಚನೆಗಳು
ಹೀಂಗಿದೆಯೆ ಭಕ್ತಿ ಇದೆಯರ್ಪಿತಮಿದೆ ವರಪ್ರಸಾದ ಸುಖಂ || ೬೧ ||

ಒಳಗರ್ಪಿತಮೆನೆ ಭಾವಕೆಪೂಜ್ಯಂ
ತಿಳಿ ಪೊರಗರ್ಪಿತ ಮೆಂದೊಡೆ ಕ್ರಿಯೆಗ
ಳ್ಗೆಳವಲ್ಲರಿವರ್ಪಿತಮೆನೆ ಮತಿಗತಿಶಯ ಭಾವಾಭಾವಾ ||
ಮಳ ಶೂನ್ಯಮನರಿದರ್ಪಿಸಿ ಶೇಷಮ
ನೆಳಸುವುದೆಹಗಹಗಿಕ್ಕೆಯುದಲ್ಲದೆ
ಪೊಳೆದು ವಿಷಂ ಪತ್ತಿದ ಬಳಿಕಾವೆಡೆಯೊಳು ನಿಲ್ವುದೆ ಮರುಳೆ || ೬೨ ||

ಧ್ಯಾನ ವಿನಿಶ್ಚಲಿತಾಯತ ಕಾಮಿತ
ನಾನಾ ಭಾವಿತ ಕರ್ಮೋದ್ಧತ ಸಂ
ಧಾನಾವಿರಳಿತ ಲಿಂಗದ ಭಾವದ ಕರದಲ್ಲಿ ಪ್ರಾಣ ||
ಪೀನ ಪ್ರಾಣನ ಕರದೊಳು ಲಿಂಗಂ
ಜ್ಞಾನ ಪ್ರಾಣಾಮಲ ಭಾವಾದ್ಯಭಿ
ಮಾನಮನಳಿದಾಚಾರದೊಳತ್ಯವಧಾನದೊಳಿರುತಿಹನು || ೬೩ ||

ವಿಶದ ಯಶೋವಿಸ್ತಾರಿತ ರೂಪ ಸ
ದೃಶ ಗುರುಚರಣಸ್ಮರಣಾಂಚಿತ ಪರ
ವಶ ಮಹಿತಾತ್ಮಕನಾಗದೆ ಲಿಂಗ ವಿಲೀನ ಮನೋಭಾವ ||
ಪಶು ಪಾಶ ಗುಣ ಕ್ಷಯ ಮಾಗದೆ ಕ
ರ್ಕಶವಪುರಭಿಮಾನೇಂದ್ರಿಯ ವಿಷಯಾ
ದಿ ಶಮನವಮಾಗದೆ ಶೇಷಾಯತ ಭಾವಂನಿನಗೆಂತಹುದು || ೬೪ ||

ತನು ನಿಶ್ಶ್ಯಾಂತದಳಿವು ಮಜ್ಜನದಿಂ
ಮನದಾ ಪ್ರಕೃತಿ ವಿನಾಶಂ ಪುಷ್ಪದಿ
ನೆನೆ ನೈವೇದ್ಯ ದಿನಖಿಳೇಂದ್ರಿಯ ನಷ್ಟ ಸ್ವ ಶರೀರಕ್ಕೆ ||
ಘನ ಮಜ್ಜನ ಚಿತ್ತದ ಸುವಿಲಾಸಿತ
ಕನಿಶಂ ಕುಸುಮಂ ಘನದೊಳು ಮನವಳಿ
ವನಕರ್ಪಿತ ವಿೂ ಮೂರರ ಮರೆಯಲ್ಲಿಹ ಲಕ್ಷ್ಯಮನರಿಯೈ || ೬೫ ||

ತನುವಂ ಸೋಂಕಿದರುಚಿಗಳನೊಲವಿಂ
ಘನ ಲಿಂಗಕ್ಕವಧಾನಿಸುವನನೆನ
ಹಿನ ಬೀಸರವಿೂ ಭಿನ್ನ ವಿವೇಕಮನುಳಿದರಿ ನಿಜ ಪರವ ||
ತನು ಭಕ್ತಂ ಮನವೇ ದಾಸೋಹಿ ಸ
ವಿನಯೇಂದ್ರಿಯಮೆ ಪ್ರಸಾದಿಗಳ್ ಪ್ರಾ
ಣನೆ ಲಿಂಗಂ ಪೊರಗರಸಲದೇಕರಿದುದೆ ಸರ್ವಾಹಣವು || ೬೬ ||

ಲಿಂಗವೆ ತನು ಚೈತನ್ಯವೆ ಜಂಗಮ
ಲಿಂಗಂ ಚರ ಶೇಷಮನರ್ಪಿಸಿ ಘನ
ಲಿಂಗ ಸವಿದಾರಸವೋನಖಿಳೇಂದ್ರಿಯ ಕನ್ಯಮೇ ಪ್ರಾಣ ||
ಲಿಂಗದೊಳರಿದಾ ರುಚಿಯಿಂ ಭಾವದ
ಲಿಂಗದೊಳರಿದಾ ತೃಪ್ತಿಯನನುಪಮ
ಲಿಂಗ ಸಹಿತಮನುಭವಿಸಿ ಸದಾನಂದಾತ್ಮಕನಾಗಿಹನು || ೬೭ ||

ಸರ್ವ ವಿನಾಶನ ಕಾರಣ ನಿತ್ಯ ನಿ
ರರ್ಗಳ ನಿರುಪಮ ನಿರವಯ ಲಿಂಗವ
ನಿರ್ಗುಣ ವಸ್ತುವಿನಿಂ ಪೂಜಿಸಿ ಪರಿಭಾವಿಸಿಯನವರತ ||
ನಿರ್ಗಮನಾರ್ಥ ಪದಾರ್ಥಮನೊಲವಿಂ
ಭರ್ಗಂಗರಿವಿಂದರ್ಪಿಸಿ ಮಹದಪ
ವರ್ಗಪ್ರದ ಚಿತ್‌ಪ್ರಸಾದಸುಖಂ ಬಡೆದನುಭವಿಸುವನು || ೬೮ ||

ಗುರು ಚರ ಲಿಂಗ ತ್ರಿವಿಧವ್ರತ ಬಂ
ಧುರ ನಿಯತಾತ್ಮಕನಾಗಿ ಸದಾ ಸಂ
ಸ್ಫುರಣ ಮನೋವಪುರಿಂದ್ರಿಯ ವಿಷಯಾಹಂಕೃತಿಗಳನಳಿದು ||
ಭರಿತ ಪದಾರ್ಥಮ ನರ್ಪಿಸಿ ತತ್ಸ್ವೀ
ಪರಿ ಲಿಂಗಕೆ ಶೇಷಮ ಬಾಹ್ಯಾಂತಃ
ಕರಣಾವಳಿ ಚೈತನ್ಯಮೆನಿಸಿ ನಿಜಮೋಕ್ಷದವಾಗಿಹುದು || ೬೯ ||

ಬಂಧವನಿಕ್ಕಿ ಮಹಾದಶ ವಾಯುವ
ಬಂಧಿಸಿ ಯುರ್ಧ್ವಮ ನೈಯ್ದಿಸಿ ಮೇಲಣ
ಕಂಧರದಾ ಬ್ರಹ್ಮಾಂಡದ ಮುಚ್ಚಳವಲಗೆಯ ತೆಗೆದೊಳಗೆ ||
ಬಂಧುರ ಮಯದಿಂ ತುಳುಕಾಡುವ ಚಿತ್
ಸಿಂಧು ಸುಧಾ ಶೇಷಮ ನನುಭವಿಸಿಯೆ
ಬಂಧ ವಿಮೋಕ್ಷಕೆ ಕಾರಣದಂಬಲಿ ಸೊಗಸದೆನಗೆ ಕೇಳ || ೭೦ ||

ತಾರಕಯೋಗಭ್ರಮಣೆಯನುಳಿ ಬಂ
ಜಾಕಳೊಳ ಮೃತದಕೆಚ್ಚಲಹುದೆ ನಿ
ನ್ನಾಕಾರದ ತಲೆಯಲ್ಲಿ ನಿರಾಕಾರದಘನಸುಧೆಯುಂಟೆ ||
ಕಾಕುಮತಯೆ ತನುವಿಡಿದಿಹ ಲಿಂಗಮ
ನೇಕೋಭಾವದೊಳರಿದೀ ಕ್ರಿಯೆಯಿಂ
ಬೇಕಾದಂತರ್ಚಿಸಿ ಸುಖಿಯಾಗೊಳಗೇನಿಹುದೈ ಭ್ರಾಂತ || ೭೧ ||

ಕ್ರಿಯೆಯಿಂ ಭಾವದಿನೇಂ ಫಲಮೀ ನಿ
ರ್ಣಯ ಸಂವಿತ್ತಮ ಸಂಸೃತಿ ಬಂಧ
ಕ್ಷಯ ಮೋಕ್ಷಪ್ರದ ಕಾರಣ ಸಮ್ಯಕ್‌ಜ್ಞಾನ ವಿಹೀನ ನರಂ ||
ಕಾಯಕ ಜಾತ್ಯಂಧಕನಂತನುಪಮ
ನಿಯತಾತ್ಮ ಸ್ಥಿತ ಲಿಂಗಮ ನರಿಯಂ
ಪ್ರಯುತ ಬ್ರಹ್ಮವ ಸುಚಿದಕ್ಷಿಯೊಳೀಕ್ಷಿಸಿ ಸುಖಿಸೈ ಮರುಳೆ || ೭೨ ||

ಜ್ಞಾನಿಗೆ ಸಮ್ಯಕ್ ಜ್ಞಾನಮ ಸಿದ್ಧಿಪು
ದೇನಿಯತಂ ಸಿದ್ಧಿಸಿತೆಂದೊಡೆ ದಿ
ವ್ಯಾನುಭವ ಕ್ರಿಯೆಯಂ ಬಿಡುವುದು ಕರ್ತವ್ಯಮೆ ಕ್ರಿಯೆಯಲ್ಲಿ ||
ಜ್ಞಾನ ಸಹಿತಮಾಚರಿಪುದು ಶಿವ ಪೂ
ಜಾನಿಯಮದೊಳಿರಕದ ಚಿತ್ತಮೆ ಪರ
ಮಾನಂದಾಯತನಸ್ಥಿತ ಪರಶಿವ ಯೋಗಮದಾಗಿಹುದು || ೭೩ ||

ಪ್ರಾಣೇಶ್ವರದಿ ವ್ಯಾನುಭವದೊಳ
ಕ್ಷೀಣ ಪರೋಕ್ಷನೆನಿಸಿ ಪರತತ್ವ ಧು
ರೀಣಮಹೋದಯನಾಗಿ ವಿರಾಜಿಸುವಂಗೆ ಜರಾಮರಣ ||
ಕ್ಷೀಣ ಪ್ರಾಪಂಚಿಕ ಸಂಸಾರಕೆ
ತಾಣ ತನು ಪರಿಚರಣತಾ ಸಕ್ತಿಯ
ಕೇಣಮನಾಶ್ರಯಿಸಿಹ ಲಿಂಗಾರ್ಚನೆ ಯೋಗ್ಯಮೆ ಬಿಡು ಮರುಳೆ || ೭೪ ||

ಸ್ವಶ್ರೇಯಸ ತನುವಿಲ್ಲದೆ ನಾದ
ಕ್ಕಾಶ್ರಯ ಮಿಲ್ಲವದಿಲ್ಲದೆ ಪರಮಂ
ಗಾಶ್ರಯಮಿಲ್ಲದಿಪನಿಲ್ಲ ಸುಜ್ಞಾನಕ್ಕಾಶ್ರಯಮಿಲ್ಲ ||
ವಿಶ್ರುತ ಮತಿ ಇಲ್ಲದೆ ಘನಲಿಂಗ
ಕ್ಕಾಶ್ರಯಮಿಲ್ಲ ಸಮಸ್ತಕೆ ತಿಳಿ ಮು
ಖ್ಯಾಶ್ರಯಮೇ ತನು ತನುವಿಂ ಸರ್ವಕ್ರಿಯೆ ಸದ್ಯೋನ್ಮುಕ್ತಿ || ೭೫ ||

ಈ ತನುವೇ ಯಮಪುರ, ಕರಣಂಗಳೆ
ದೂತರು, ಕರಣಂಗಳ ದುಃಕೃತ ಸಂ
ಜಾತ ಕುವೃತ್ತಿಯೆ ಪರಿಕರವರಿ ಷಟ್ತ್ರಿಗುಣ ವಿಕಾರೋರ್ಮಿ ||
ಆ ತಾಪಮೆ ಬಹುಬಾಧೆ, ಪುರೀಷಮೆ
ವೈತರಣಿಗಳಿತ್ಯಾದಿಗೆ ರಾಜನೆ
ಪಾತಕ ಜೀವನ ನಾಗಿರಲೀ ತನುಯೋಗ್ಯಮೆ ಮೋಕ್ಷಕ್ಕೆ || ೭೬ ||

ಆ ಪ್ರಕೃತಿಯ ಸಂಗದೊಳಂ ಪರಮಂ-
ಗ, ಪ್ರತಿ ಜೀವನ ಭಾವಂ, ಜೀವಂ-
ಗೀ ಪ್ರಮದಾರತಿಯಿಂ ರೌರವ ನರಕಂ, ನರಕದೆ ದುಃಖೀ ||
ಸ್ವ ಪ್ರದ ದುಃಖದೆ ನಾನಾ ಯೋನಿಜ
ನಾ, ಪ್ರಕೃತಿಯ ಸಂಗಮನಗಲದೆ ಲಿಂ
ಗ ಪ್ರಣಾನು ಭವಿಗಳೆಂಬ ರ್ಗನುಚಿತಮೀ ಗುರು ಮತವು || ೭೭ ||

ನೈಜ ಸ್ಫುರಣಾವರಣಮೇ ಜೀವ
ಕ್ಕೆ ಜೀವನೇ ತತ್ವಕೆ ಕಾರಣನಾ
ದೋಜೆಯ ನರಿಯದನಾದಿಯಮಲ ಪಶುಪಾಶ ವಿಬದ್ಧಸನೇ ||
ಯೋಜಿತ ಮಹದಾದಿಯ ತತ್ವಂಗಳಿ
ಗೀ ಜಿತ ಮಾಯಿಕ ಮೂಲಾಧ್ಯಾಯ ವಿ
ರಾಜಿತನದರಿಂ ಮೂಲ ಪ್ರಕೃತಿಯ ಸೌಖ್ಯಾತ್ಮಕನಹನು || ೭೮ ||

ಇನ ಸನ್ನಿಧಿಯಿಂ ಕಮಲ ಕುಮುದ ವಿಕ
ಚನ ಸಂಕೋಚಗಳಾ ಪ್ರಕೃತಿಯ ಗುಣ
ವಿನಯದೆ ಮಿಥ್ಯಾತ್ಮಕ ಜಗಮೀ ದೃಶ್ಯ ಪದಾರ್ಥವ ಕಾಣ್ಬ ||
ಘನ ದೃಕ್ಕೀ ನೀಂ ಬಹು ಕರಣಂಗಳ
ತನುಸಾಂಚಲ್ಯ ವ್ಯವಹಾರಂ ನಿ
ನ್ನನುವಿಂ ನಡವುತ್ತಿರಲೆಹಗಲ್ಲಪ್ರಕೃತಿಯ ಸಂಸರ್ಗಂ ||೭೯||

ಕೂರ್ಮನ ಮೇಲಾಂ ಮೇಲಣ ಮಹದನು
ಪಮ ಘನ ಲಿಂಗಾತ್ಮಕನದು ತಾಂ ಲಯ
ಗಮನಕೆ ಕಾರಣಮದರೊಳು ರತ್ನ ಸುರತ್ನ ಪ್ರಭೆಯಂತೆ ||
ಅಮರ್ದು ಬೇರ್ಪಡಿಸದ ಕಾರಣದಿಂ
ದಮಿತ ಪತಿ ಪದಾರ್ಥಮದಿಲ್ಲದರಿಂ
ಭವಿತಾನಾದಿಯಮಲ ದೃಶ್ಯಂಗಳು ತಾವ್ ಮುನ್ನಿಲ್ಲರಿಯೆ ||೮೦||

ಪುರುಷಾಧೀನ ಮದಲ್ಲದೆ ತರಿವುದೆ
ಪರಶು ಜಡಾವಿದ್ಯಾಂಗೋಪಾಧಿ ಯೊ
ಳಿರುತಿಹೆ ನಿನಗಂ ಪ್ರೇರಕನಾಗಿ ಶಿವನೆ ಪತಿಯಹ ನದರಿಂ ||
ವರ ಪಶುಪಾಶ ಪತಿ ತ್ರಿಪದಾರ್ಥಗ
ಳಿರಲಿಲ್ಲದೆ ಜಗದುದಯ ಮಹುದೆ ತನು
ಕರಣಾವಳಿ ಸಂಚಾರ ಚಿದಾಭಾಸಕ ನೆನಲೇಂಕತದಿಂ ||೮೧||

ಸೃಷ್ಟಿ ತೊಡಗಿ ಮೋಕ್ಷಾವಧಿ ತನಕ ವಿ
ಶಿಷ್ಟಾಭೇದ ಶಿವಾತ್ಮರ್ಗೆ ನೈಜ
ದೃಷ್ಟಮನರಿಯಲು ಶಕ್ತ್ಯಾಧೀನ ಪ್ರಪಂಚಸ್ಯತು ಎಂಬ ||
ಶಿಷ್ಟಾಯತ ಶಿವಶಕ್ತ್ಯುದಯದೊಳು
ತ್ಯಷ್ಟದೆ ತೋರುವ ತತ್ವಂಗಳ ಬಹು
ಚೇಷ್ಟೆಯೆ ವಿಶ್ವೋದಯಮಲ್ಲಿ ತ್ರಿಪದಾರ್ಥಗಳಿಲ್ಲಮಮಾ ||೮೨||

ಆ ಶಕ್ತ್ಯಾಧಾರದೊಳುದಯಿಸುವಾ
ಕಾಶಾದಿ ವಿಕಾರಂಗಳಿನಪ್ರಭೆ
ಯಾಶಾಂಬರದೊಳು ಬಿಂಬಿಸುವಂತೆ ದೃಗಾತ್ಮ ಪದಾರ್ಥಮದು ‖
ಆ ಶಕ್ತಿಕ್ರಮದಿಂ ತೋರ್ಪುದು ಪರ
ಮೇಶ ಪ್ರೇರಕನಿಂ ದೃಶ್ಯಾತ್ಮಕ
ಪಾಶಾವಿದ್ಯೆಗಳೀ ತ್ರಿಪದಾರ್ಥಂಗಳ ನಿರ್ಣಯಮಿಂತು ‖ ೮೩ ‖

* ಬಿಂಬಮವಸ್ಥಾತ್ಮಕ ನಾತ್ಮನೆ ದೃ
ಕ್ಕೆಂಬೀ ಜೀವನ ಕಯ್ಯಿಂಕಾಣಿಸಿ
ಕೊಂಬೀ ವಿಷಮೇ ಮಾಯೆಗಳಿಂತುಭಯ ವ್ಯವಹಾರಗಳು ‖
ಮುಂಬಿನನಾದಿಯ ಶಕ್ತಿಗಿವಿಲ್ಲಾ
ಗಿಂಬಿನ ದೃಗ್ದೃಶ್ಯ ದ್ವಿಪದಾರ್ಥಗ
ಳೆಂಬ ಕುವೇದಾಂತಿಯ ಮತವಂತಿರಲನುಪಮನಾತ್ಮಕನು ‖ ೮೪ ‖

ಮೆಲ್ಲನೆ ಕಣ್ಣಂ ಮುಚ್ಚಿಯೆ ಕಾಣ್ಬುದ
ದೆಲ್ಲಿಯದೋ ತನುವಿಲ್ಲದೆಯರಿವಿನ
ಸೊಲ್ಲೆಂತುಟೊ ಸಕಲಮುದೆಂದಲ್ಲಿಯೆ ತನು ನಿಷ್ಕಲಮೆನಲು ‖
ಅಲ್ಲಿಯೆ ಕಾಣ್ಬ ಸುಲಕ್ಷ್ಯಂ ಕಂಡರಿ
ದಲ್ಲಿಯೆ ಕಂಡಿಹೆನೆಂಬೀ ಭ್ರಾಂತು ಗ
ಳಿಲ್ಲದೆ ಕಾಣಿಸಿಕೊಂಡಿದಿರಿಡೆಗೆಟ್ಟುಳುಮೆಯದೆಂತಪ್ಪೆ ‖ ೮೫ ‖

ಜಡ ಮಿಥ್ಯಾ ಧ್ರುವವಹಮಾಯಾರೂ
ಪಿಡಿದಿಹ ದೃಶ್ಯ ತನುತ್ರಯದಿಂ ಬೇ
ರ್ಪಡಿಸಿ ಸದದ್ವಯ ನಿಜ ಸಂವಿತ್ ಸಾಕ್ಷಾತ್ ಕ್ರತದಿಂಮೇಲೆ ‖
ಬಿಡದಾವರಿಸಿದ ಪರಮಾರ್ಥೋದಯ
ದೆಡೆಯೊಳು ಭೋಗ್ಯಂ ಭೋಕ್ತೃಗಳಿಲ್ಲದ
ಕಡೆಯ ಷಡಧ್ವಾತೀತ ಪದಮನನುವಿಡಿದಾಚರಿಸುವೆನು ‖ ೮೬ ‖

---

* ಪಾ. ಬಿಂಬಮೆ ವಸ್ತ್ವಾತ್ಮಕ

ತೂಗೀಂದ್ರಿಯದೊಡಗೂಡಿ ಬಹಿರ್ಮುಖ
ನಾಗಿಯೆವಿಷಯಾಸಕ್ತಾತ್ಮಕನೆ ನಿ
ನಗಂತರ ಮುಖದ ಕೂಟಸ್ಥನ ನೆಂತರಿವೆಯೊ ಒಂದರೊಳು ||
ರಾಗದೆ ಕೂಡಿರ್ದ್ದನ್ನೊಂದರೊಳನು
ರಾಗದ ಸುಖಮುಂಟೇ ತನುಗುಣದೊಳು
ಬೀಗಿರ್ದ ದ್ವೈತಮದೆಂತೀ ನುಡಿಯಂ ಸುಡು ಬಿಡು ಮರುಳೆ || ೮೭ ||

ಪರರೇತೋ ಜನಿತಾಧಿ ವ್ಯಾಧ್ಯಾ
ಕರ ದುಃಖಾತ್ಮಕ ವಿಷಯಾಗಾರಂ
ತ್ವರಿತಂ ತೋರಿಕೆಡುವ ತನುವಿಡಿದಾಡದೆ ಸಚ್ಚಿತ್ಪೂರ್ಣ ||
ನಿರುತ ನಿಜಾನಂದೋದಯ ತತ್ಪೋ
ತ್ಕರ ಮಿಳಿತ ಬ್ರಹ್ಮೈಕ್ಯಾನುಭವೋ
ಪರಿಸಂಭೂತ ಸದಾಸಂತೃಪ್ತಿಯನೆಯ್ದಿ ವಿಚಾರದೊಳು || ೮೮ ||

ಕಾಜಿನ ಕುಪ್ಪಿಯೊಳು ನೀರೆಣ್ಣೆಗ
ಳೋಜೆಯನರಿ ಮೃದ್ಘಟದೊಳು ತೋರ್ಪುದೆ
ತೇಜಂ ಭೇದಿಸಿ ತೋರ್ಪುದು ಘಟಭೇದಮೊನೀರೆಣ್ಣೆಗಳ ||
ನೈಜಮೊ ಮರುಳೇ ವಿಧಿಯಂ ಮೀರಿ ವಿ
ರಾಜಿಪ ವಿಜಯನಾದವನೋ ಪೇಳ್ಗುರು
ರಾಜಂ ಕರುಣಿಸಿ ತನುವಂ ನಿರ್ಮಲ ತನುವೆನಿಸಿದನೊಲಿದು || ೮೯ ||

ಆವೆಡೆಯೊಳು ಹವಣಿಸಬಾರದಬೆಳ
ಗಾವೆಡೆಯೊಳು ಪರಿಪೂರ್ಣಾನಂದಮ
ದಾವೆಡೆಯೊಳು ನೀನೆಂಬುದು ಸಂಕಲ್ಪವಿಕಲ್ಪಗಳಳಿದು ||
ಭಾವಿಸಿ ತಾನೇ ತೋರ್ಪುದದೇ ನಿ
ತ್ಯಾವರಣ ಬ್ರಹ್ಮಜ್ಞಾನಮಿದೇ
ಕೇವಲ ಮುಕ್ತಿಯಿದೊಂದೇ ನಿನ್ನಯ ನಿಜಮೆಂದರಿ ಮನವೆ || ೯೦ ||

ವರ್ಣಾತೀತಾಖಂಡ ಜ್ಯೋತಿಯ
ವರ್ಣಿಸಿ ನಿಶ್ಚಯಿಸಲಿಂತಿದೇ ಪರಿ
ಪೂರ್ಣತ್ವದ ನೆಲೆ ನಿಜಮನರಿದು ನಿರ್ಗಮನಿಯದಾದಲ್ಲಿ ||
ನಿರ್ಣಯ ಸಮ್ಯಕ್‌ಜ್ಞಾನವಿದೇ ಸಂ
ಕೀರ್ಣ ಜ್ಞಾನಪ್ರಭೆಯಿಂ ಪರಶಿವ
ಪೂರ್ಣ ಪರಮನ್ಯೆದೆಂದರುಹಿದನಲ್ಲದೆ ಗುರು ಬೇರಿಲ್ಲ || ೯೧ ||

ತನ್ನ ತನುವೆ ತನಗಂ ಪೊರೆಯಾಗ
ಲ್ಕಿನ್ನು ಪೊರುವುದೆಂತಾಂ ಪೇಳ್ವರಿವೇ
ತನ್ನಮರಸಲರಿವನೆ ಮಧುವಂ ಸೇವಿಸಿದವನಂತಿರದೆ ||
ತನ್ನಭಿಮಾನವ ಮರೆದಿದಿರಿಂಗರಿ
ವಂ ನಿರವಿಪ ಮೂಢಂ ಗುರುಕರುಣವ
ಮನ್ನಿಸ ಬಲ್ಲನೆ ಸಹಜೋದಯಮೆಂತಿಹುದುಸಿರೆನಗೊಲಿದು || ೯೨ ||

ಪಯದಿಂ ಘೃತಮಾದದುಕಾರಣ ಘೃತ
ಸ್ವಯವಾಪಯವಾ ಪಶುವಿವಕಂಡ
ನ್ವಯದಿಂ ತೋರ್ಪಮನೋನಾಥನನರಿದೀಮನ ಮನನೀಯ ||
ನಯ ಭಾವನೆ ಭಾವ ಧ್ಯಾನಾರ್ಚನ
ಮಯ ಪರಿಮಾಣ ಶ್ರದ್ಧೆಗಳರಿವಿನು
ಭಯ ಲಿಂಗಾಂಗವ ನರಿಯಲಿವೇ ನಿಜಮೋಕ್ಷಕೆ ಕಾರಣವು || ೯೩ ||

ಮೋಕ್ಷಮೆನಲು ಪರಶಿವಯೋಗಂ ತಿಳಿ
ದೀಕ್ಷಿಸಲಾತ್ಮ ವಿಚಾರಮಿದಹುದು ನಿ
ರೀಕ್ಷಣೆಯಿಲ್ಲದೆ ಸುಪರೀಕ್ಷೆಯದಿಲ್ಲೆಂಬಂತೀ ತನುವೆ ||
ಮೋಕ್ಷಕೆ ಕಾರಣಮಹುದಾದೊಡೆ ಕೇ
ಳಕ್ಷಯ ನಿತ್ಯಾನಿತ್ಯ ವಿವೇಕದೆ
ಮೋಕ್ಷಮದಹುದಲ್ಲದೆ ತನುಲಕ್ಷ್ಯದೊಳೆಂತಪುದುಸಿರೆನಗೆ || ೯೪ ||

ಕಾಷ್ಠವಿಹೀನಾನಲನುಜ್ವಳಿಪುದೆ
ಶಿಷ್ಟ ನಿರಾಕಾರ ಬ್ರಹ್ಮವೆ ತಾಂ
ಸೃಷ್ಟ್ಯರ್ಥಂ ತನುವೆತ್ತು ಸಕಲ ಪೂಜ್ಯಂ ದೇಹದೊಳಂತೆ ||
ಇಷ್ಟಕ್ರಿಯೆ ಗುರು ಚರದಾರಾಧನೆ
ತುಷ್ಟಿದ ಶೇಷಾನುಭವಮದರಿನು
ತೃಷ್ಟಾನಂದೋದಮವುಹುದಾಗಿದೆ ಕಾರಣಮಾಗಿಹುದು || ೯೫ ||

ಕನಸೆರ್ಚರು ಮರವೆಯೊಳನ್ಯಮನರಿ
ಯೆನು ಕರ್ಮಕೆ ಕರ್ತೃವೆ ಕಡೆಯೆಂದೆ
ನ್ನೆನು ಸುಖದುಃಖಂ ಬರೆ ದುಃಕೃತದುಃಪೆನ್ನೆನುದಾಸಿನದಿ ||
ನೆನೆಯೆನದಾಂ ಮಾಡಿದೊಡಾಯ್ತೆಂದೆ
ನ್ನೆನು ದೇಶಿಕನುಪದೇಶದೊಳೀ ಪರಿ
ಯನುವಿಡಿದೀ ಸಂಸಾರಂ ಸವೆಯಲು ಬಳಸುವೆನೊಲವಿಂದಂ || ೯೬ ||

ಮರುತಾವರ್ತಂ ತೃಣಪರ್ಣವ ಕೊಂ
ಡಿರದೂರ್ಧ್ವಮನೆಯ್ದಿಸಿ ಸಂಚಾರಿಸಿ
ಮರುತಂ ಪಿಂಗಲು ಘಟಘಟದಂತಾತ್ಮನೆ ವಸ್ತುವಿನಂತೆ ||
ಸ್ಫುರಿತ ಸ್ವೇಚ್ಛಾಭ್ಯುದಯ ಚರಿತ್ರೋ
ಪರಿ ಮಹದಾನಂದಿತ ಭಾವಾಂತಃ
ಕರಣವಿದೂರ ನಿನಗೆ ಸಂಸೃತಿ ಸಂದರ್ಶನಮೆಲ್ಲಿಯದು || ೯೭ ||

ಸ್ಫುಟಮಾತ್ಮನೆ ಶಿವನಾದೊಡೆ ನಾನಾ
ಘಟದಲ್ಲಿರಲೇತಕೆ ವಸ್ತುವನೀ
ಘಟವಂಗೀಕರಿಸಿ ದೊಡೊಡಲಪ್ಪುದೆ ಭೌತಕ ಪಂಚಕಕೆ ||
ಘಟದಿಟಮೆನೆ ಲಿಂಗಂ ಘಟದೊಡೆಯನೆ
ದಿಟಮೆನೆ ವಾಯಿಕೆ ಪಿಡಿಯಲುಬಾರದು
ಘಟ ಬಿಡಬಾರದದು ಮೋಕ್ಷಮನೆಯ್ದುವಾ ಕ್ರಮವೆಂತಹುದು || ೯೮ ||

ಆಯುಃಕರ್ಮ ನಿಧನ ಧನ ವಿದ್ಯೋ
ಪಾಯಂಗಳನಳಿದೀ ಗುರುಲಿಂಗ ಮಿ
ದಾಯು ಘಟೈಶ್ವರ್ಯಮೆ ಚರಲಿಂಗಂ ನಿಧನಮೆ ಸುಜ್ಞಾನಂ ||
ಆಯತ ವಿದ್ಯೆಯೆ ಶಿವಮಂತ್ರಂ ಶಿವ
ಕಾಯಮೆ ಶೇಷಮಿದೆಂದು ನಿರೂಪಿಸಿ
ಕಾಯುವ * ದಾಸ್ಯದೊಳಿರಿಸಿಯೆ ಸಲಹಿದನಾಗಿದೆಯೇ ಮೋಕ್ಷಂ || ೯೯ ||

ಅತಃಕರಣ ಚಲನೆಯನಳಿದು ವಿಷ
ಯಾಂತರ್ಗತ ಮನವ ತೆಗೆದಿತ್ತ ಕಡೆ
ಗಂತರ್ಮುಖಮಂ ಮಾಡಿ ದಶೇಂದ್ರಿಯ ಸೌಖ್ಯಕೆಲಕ್ಷಿಸದೆ ||
ಸಂತತ ಹೃನ್ನಳಿನ ಪ್ರಕೃತಿಗಳಿಂ
ಭ್ರಾಂತಿಪ ಜೀವನ ಪರಮನೊಳಿರಿಸಿ ನಿ
ತಾಂತ ತ್ರಿವಿಧವ್ರತ ನಿಯತಾತ್ಮಕನಾಗದೆ ನಿಜವಹುದೆ || ೧೦೦ ||

ಲಕ್ಷ್ಯಾಲಕ್ಷ್ಯ ವಿಲಕ್ಷಣ ಪರಮಂ
ಲಕ್ಷಿಸಿ ಕೊಂಬನೆ ಲಕ್ಷಿಪನಾತ್ಮನೆ
ಈಕ್ಷಿಸಲಂತಃಕರಣಂ ಸಂಚರಿಪವೆ ಇಂದ್ರಿಯ ಕುಲವು ||
ಅಕ್ಷಯ ಸೌಖ್ಯವ ನನುಭವಿಪುವೆ ಘನ
ವೃಕ್ಷಾದಿಗೆ ಜಲವೆರೆಯಲು ಶಾಖೆಗು
ಪೇಕ್ಷೆಯೆ ಜೀವಪರಮರೇಕ್ಯೈಕ ವಿಬೋಧಾರಸಮಯವು || ೧೦೧ ||

ಪರಮಾರ್ಥಿಕ ನಾದೊಡೆ ಪರಮಾತ್ಮಕ
ನಿರವನರಿಯಬೇಕಿಹ ಪರ ವಿರಹಿತ
ಪರಿಣಾಮಿಯದಾಗಿರಬೇಕನಘ ವಿರತನಾದೊಡೆ ಬಳಿಕ ||
ಪರಮ ಜ್ಞಾನಿಯದಾದೊಡಖಿಳ ಜೀ
ವರ ಚೈತನ್ಯಮನರಿದಿರಬೇಕಿ
ನ್ನೆರಡಿಲ್ಲದೆ ಕೂಡಲು ಬೇಕೈಕ್ಯಾನುಭವಾತ್ಮಕನಾಹಾ || ೧೦೨ ||

---

* ಪಾ. ದಾಸೋಹದೊಳಿರಿಸಿ ಸಲಹಿದನಾಗಿದೆಯೆ ಮೋಕ್ಷಂ ||

ಅರಿದಹರೆಂದ್ರಿ ಬ್ರಹ್ಮವನಿದಿರಂ
ಮರೆಯಿಂ ಗೂಢವ ಮಾಡಿ ನುಡಿವುದೆಂ
ತರಿವೆಯೊಳಗ್ನಿಯ ಬಂಧಿಸಲಡಗುವುದೇ ಪರಿಪೂರ್ಣಾತ್ಮ ||
ನೆರೆಯೋರೋರ್ವರಿಗೆ ಭಿನ್ನನೇ ತಾ
ನರಿದಿಹೆನೆಂಬೈಕ್ಯನ ಮಹದರಿವಿಗೆ
ತೆರೆದಿಹುದೀ ಬ್ರಹ್ಮದ ಕಡವರ ಮುಚ್ಚಳವಿದನರಿ ಮನವೆ || ೧೦೩ ||

ಲೋಲನಹುದು ಚಿತ್ರವ ಬರೆವುದಕಂ
ತೂಲಿಕೆಯಲ್ಲದೆ ಮನಸಿಜಗುಂಟೇ
ಮೇಲಹಿ ತನ್ನ ಫಣಾಮಣಿಯುಂ ಕಂಡಹರೆಂದತಿಭಯದಿ ||
ಕೀಲಿತ ತಮಕೋಡಿದೊಡೊಂದಾಗಿ
ಜ್ವಾಲೆಯು ಬರುತಿರಲಡಗುವುದೆಹಗೆಲೆ
ಕಾಲಾಕಾಲ ಸ್ಥಾನಗಳುಂಟೆ ಬ್ರಹ್ಮವನೈದುವೊಡೆ || ೧೦೪ ||

ಅನಲನುದಕಂ ಗ್ರಹಿಸಲು ಪೋಗೆ ಸೂ
ರ್ಯನ ಕಿರಣಂ ತಮವಾವರಿಸಲ್ಕಿ ನಿ
ತಿನಿತಾವೆಡೆಯೊಳು ಪೊಂದಿದುವಿಷ್ಟದೊಳೊಳಗಂ ಕುರುಹಳಿದು ||
ವಿನುತ ವಿಶಾಲದ ಮಹದರಿವಂ ಚಿ
ದ್ಘನ ಭೇದದೊಳೊಡಗೂಡಿಯುಭಯವಳಿ
ದನ ಸಮ್ಯಕ್‌ಜ್ಞಾನಂ ಬ್ರಹ್ಮದೊಳಂ ಕುರುಹಾಗಿರ್ದಿತ್ತು || ೧೦೫ ||

ಧೂಮ ಧ್ವಜನೊಳು ಧೂಪದ ತನುವಳಿ
ದಾ ಮಹಿತಾಮಳ ಪರಿಮಳದೊಳಿದಾ
ಧೂಮದೊಳುರೆ ವೇಧಿಸಿ ಬಯಲಪ್ಪಂತೆ ತನುವ ಲಿಂಗದೊಳು ||
ಆ ಮಹಿಮಾನಿಧಿ ಶರಣ ಶರೀರದ
ನಾಮವಳಿದು ಸಮ್ಯಕ್ ಜ್ಞಾನಾತ್ಮಕ
ನಾಮಹದೊಳು ನಿಶ್ಚಲಿತೈಕ್ಯತ್ವಮನೆಯ್ದಿ ವಿರಾಜಿಪನು || ೧೦೬ ||

ಅಂಗದೊಳಿಹ ದಿವ್ಯ ಜ್ಞಾನಾತ್ಮಕ
ಲಿಂಗಮನರಿದೆಯ್ದದೆ ಮರೆವುತ್ತಿರ
ಲಂಗದ ಮೇಲಿಷ್ಟಮದಾಗಿಹುದರಿದೆಹೆ ನೆಂಬೀ ಭ್ರಾಂತ ||
ಪಿಂಗಿಸಿ ನಾಮ ವಿರೂಪಪ್ರಕೃತಿ ಮ
ಯಾಂಗವ ಮೀರಿಯೆ ಕಳೆ ಕಳೆ ಬೆರೆದಂ
ತಿಂಗಿತ ನಿಜನಿಜಮಾದ ಬೆಳಗು ಪರಿಪೂರ್ಣಮದಾಗಿಹುದು || ೧೧೭ ||

ಸುಪರಬ್ರಹ್ಮದೊಳರಿವಾತ್ಮಕ ನಳಿ
ದು ಪರಿಭ್ರಮಣಂ ನಿಂದು ನಿಜದಿಂದಿ
ಹ ಪರೋಭಯವಡಗಿಹವಲ್ಲಿ ವಿಲಕ್ಷಿತಲಕ್ಷಗಳೆರಡು ||
ನಿಪುಣ ಜ್ಞಾತೃಜ್ಞೇಯ ವಿಭಾವಾ
ದಿಪ ರಾಣ್ಭನು ಭವದಿಂದೈಕ್ಯಮನೆ
ಯ್ದಿಪರಾಪರಮಾಗರಿವಿನ ಕುರುಹೆರಡಳಿದುಂ ನಿಜದಿಂದಂ || ೧೧೮ ||

ಪರಮಾತ್ಮಕ ಪರತರ ಪರತತ್ತ್ವ
ಪರಿಮಿತ ನಿತ್ಯಾನಂದೋದಯ ತತ್
ಪರ ಪರಿಪೂರ್ಣ ಪರಾಪರ ಫಲಿತ ಫಲಾಯತ ಪರಮಾರ್ಥ ||
ಪರಶಕ್ತಿಪ್ರಮದಾಂತಃಕರಣೋ
ಪರಿ ಪರಶಿವ ತತ್ತ್ವೈಕ ವಿಚಕ್ಷಣ
ಪರ ಪಾವನ ಚರಿತ ಸ್ವಾತಂತ್ರ ಪರಾತ್ಮಕ ಜಯಜಯತು || ೧೧೯ ||

ಸ್ವಾಂತರ್ನಿರ್ಮಲದಿಂ ಶಿವನಿಷ್ಠಾ
ದ್ಯಂತ ವಿಭಾವದಿನನುಪಮ ಮತಿಯಿಂ
ಸಂತೋಷಿತ ಮನದಿಂ ನಿಃಕಲ್ಮಷ ಬಂಧದಿನುರು ಸರ್ವ ||
ಶಾಂತಿಗಳಿಂ ಷಡ್ವರ್ಗೇಂದ್ರಿಯ ಗುಣ
ಶಾಂತಿ ಕರದಿಂದೆ ಮಾಹೇಶ್ವರನೇ
ಮುಂತೆ ಶಿವನಾಪ್ರಸನ್ನತ್ವಪ್ರಾಸಾದಿಕನೆನಿಸಿದನು || ೧೨೦ ||

ಇದು ಸಮಸ್ತ ಶಿವಾನುಭಾವರ
ಪದ ಪಯೋರುಹ ಗಂಧಮದ ಷ
ಟ್ಪದನು ಷಟ್‌ಸ್ಥಲ ಸಾರ್ವಭೌಮಂ ಚೆನ್ನವೃಷಭೇಂದ್ರಂ ॥
ವಿದಿತವಾಗಿ ನಿರೂಪಿಸಿದ ಸ
ಮ್ಮುದ ಮಹಾಕ್ಷೇತ್ರಜ್ಞ ಸುಮನೋ
ವಾದದೊಳು ಮಹೇಶ ಚರಿತೆಗೆ ಷೋಡಶ ಸ್ಥಳವು ॥

ಇತಿ ಕ್ಷೇತ್ರಜ್ಞಸುಮನೋ ವಾದೇ ಮಾಹೇಶ್ವರಾಚರಣ ವಿವರಣಂ
ಷೋಡಶ ಪ್ರಕರಣಂ ಅಂತು ಪದಿನಾರಕ್ಕಂ ಪದನು ೯೫೬
(೮೪೬+೧೧೦) ಕ್ಕಂ ಸಮಾಪ್ತಂ॥ ಮಂಗಳ ಮಹಾ ಶ್ರೀ ಶ್ರೀ ಶ್ರೀ

---

ಶ್ರೀಗುರು ಬಸವಲಿಂಗಾಯ ನಮಃ

# ಹದಿನೇಳನೆಯ ಪ್ರಕರಣಂ

## ಪ್ರಸಾದ್ಯಾಚರಣ ಸ್ಥಲಂ

ಅಪ್ರಮಾಣ ಪದಾರ್ಥಮಂ ಮಂ
ತ್ರಪ್ರಯುಕ್ತದೆ ಲಿಂಗಕರ್ಪಿಸಿ
ಯಾಪ್ರಸಾದವನನುಭವಿಪನೆ ಮಹಾಪ್ರಸಾದಿಕನು ‖ ಪಲ್ಲವಂ ‖

ಧನ್ಯ ವೃತ್ತಾನನ್ಯಮತ ಜೈ
ತನ್ಯ ಬುಧ ಸೌಜನ್ಯ ಮಾಯಾ
ಶೂನ್ಯ ಮಾತೃಸ್ತನದ ಪಾನಾಮಾನ್ಯ ಸರ್ವಾವ ‖
ಧಾನ್ಯ ಪರಶಿವಜನ್ಯವಿಲಸ
ನ್ಮಾನ್ಯವನತಜಿತಾನ್ಯ ಸಮಯದ
ಘನ್ಯಕುಮನೋಮನ್ಯ ವಿರಹಿತಮಾನ್ಯರಾಲಿಪುದು ‖ ೧ ‖

ಸಕಲ ಸುಪದಾರ್ಥವನು ಶಿವಲಿಂ
ಗಕೆ ಸಮರ್ಪಿಸಿಯಾ ಪ್ರಸಾದವ
ನಕುಟಿಲದಿನನುಭವಿಸಲದು ಸಿದ್ಧಿಸಿ ಮನಃ ಪ್ರಾಣ ‖
ಸಕಲ ತನು ಕರಣೇಂದ್ರಿಯಂಗ
ಳ್ಪ್ರಕಟ ಘನಲಿಂಗ ಪ್ರಸಾದಂ
ವಿಕಳನಾಶಂ ಹೃದಯನಿರ್ಮಲ ಕಾರಣಾತ್ಮಕವು ‖ ೨ ‖

ವಿದಿತ ವಿಷಯ ವ್ಯಸನವರ್ಗ ಸ
ಮುದಿತ ಕರಣೇಂದ್ರಿಯ ಬಲಾಕ್ರಮ
ಗದಿತಕರ್ಮವ ಕಾಯದಷ್ಟಕೆ ಶಬ್ದಪಾಶಾಷ್ಟ ||
ಮದಗುಣ ಭ್ರಮಣೋರ್ಮಿ ದೋಷಾ
ಭ್ಯುದಯ ಮೋಹವಿಕಾರ ತಾಮಸ
ಹೃದಯದಿಂ ಕೊಂಬೀ ಪ್ರಸಾದಂ ನಿಷ್ಫಲಂ ಕಡೆಗೆ || ೩ ||

ಅಂಗಕೀವನ್ನಂ ವಿಶುದ್ಧಂ
ಪಿಂಗದನ್ನ ವಿಶುದ್ಧಿಯಿಂದೆ
ನ್ನಂಗಕರಣೇಂದ್ರಿಯ ಮನಃಪ್ರಾಣ ಪ್ರಸಾದಗಳು ||
ತುಂಗ ಸಮ್ಯಕ್‌ಜ್ಞಾನ ಕಾರಣ
ಸಾಂಗಶೇಷಮನನುಭವಿಸುವೆಸು
ಹಾಂಗೆ ವಿಹೃದಯ ನಿರ್ಮಲತ್ವದ ಸಿದ್ಧಿಗೋಸ್ಕರವು || ೪ ||

ಆದಿ ಲಿಂಗಮನಾದಿ ಜಂಗಮ
ವಾದಿ ಲಿಂಗ ಕನಾದಿ ಜಂಗಮ
ಮೋದ ಶೇಷಮನಿತ್ತು ಸೇವಿಸದೆ ಪ್ರಸಾದವನು ||
ಭೇದ ಮಾಯೋಚ್ಛಿಷ್ಟಮಂ ಕೊ
ಟ್ಟಾದಿಶೇಷವ ಕೊಳಲು ಕಿಲ್ಬಿಷ
ವೈದೆ ಲಿಂಗದ ಮುಖದೊಳಿನಿತು ವಿಶುದ್ಧಮಿಲ್ಲಾಗಿ || ೫ ||

ಲಿಂಗಕರ್ಪಿಸಲಾಗದೆಲೆ ಗುರು
ಲಿಂಗ ಚರದುಭಯ ಪ್ರಸಾದವ
ಲಿಂಗಮೇಗುರುಚರಯುಗಕೆ ತಾಂ ಪ್ರಾಣಮಹುದಾಗಿ ||
ಲಿಂಗ ಬಾಹ್ಯಮದಾಗಿ ಜಂಗಮ
ಲಿಂಗ ಗುರುಮತವಾಗ ಬಲ್ಲೊಡೆ
ಲಿಂಗಕರ್ಪಿಸಬಹುದದಲ್ಲದೊಡೆಂತು ಕೊಡಬಹುದು || ೬ ||

ಈ ಪ್ರಸಾದವೆ ನಿಃಕಳಾಮಳಿ
ನ ಪ್ರಪೂರ್ಣ ಶಿವಾತ್ಮಕಂ ಗುರು
ಸುಪ್ರಕಾಶಿತ ಚಿತ್ತ ಜಂಗಮ ವಿದಕೆ ಕಾರಣವು ||
* ಆ ಪ್ರಸಾದದಲೆಲ್ಲೆಯಿಂ ಮೂ
ಲ ಪ್ರಕೃತಿ ಸೌಜ್ಞಾದಿ ಲಿಂಗವ
ದೀಪ್ರಕಾರದೊಳಗರ್ಪಿಸುವುದುಭಯ ಪ್ರಸಾದವನು || ||೭||

ಜಂಗಮದ ತೀರ್ಥಪ್ರಸಾದವ
ಲಿಂಗಮಜ್ಜನಮಾಗಿಯರ್ಪಿಸಿ
ಲಿಂಗಮಯ ತೀರ್ಥಪ್ರಸಾದಗಳಾದುವಾಗಿಂತು ||
ಲಿಂಗದಿಂ ಸಿದ್ಧಂ ಪ್ರಸಿದ್ಧಮೆ
ಜಂಗಮದೆ ಗುರುವಿಂ ವಿಶುದ್ಧಂ
ಹೀಂಗೆ ಮೂರೆನಲಾ ಪ್ರಸಿದ್ಧಮೆ ಶಂಕೆಗೊಳಗಾಯ್ತು ||೮||

ಲಿಂಗಕಾಧಿ ವ್ಯಾಧಿ ಬರಲಾ
ತ್ಮಂಗೆಯವಗಡ ಬಂದುದಿದು ತಾ
ನಂಗಕೋ ಆತ್ಮಂಗೊ ತುಷವಿರೆ ಬತ್ತವಾ ತುಷವು ||
ಪಿಂಗಿ ತಂಡುಲವಾಗಿ ನಿಂದುದು
ಹೀಂಗೆ ತಿಳಿಯೆ ಚರಪ್ರಸಾದಂ
ಲಿಂಗ ಕರ್ಪಿತವಾಗಿ ಪೂರ್ಣಬ್ರಹ್ಮಮಾಗಿಹುದು ||೯||

ಮೇಲು ಕನಕವ ಕೀಳು ಕೂಡಿಸೆ
ಮೇಲು ಮಟ್ಟವ ಮರಸಿ ತಾ ಚರ
ಲೋಲ ಶೇಷವ ಲಿಂಗಕರ್ಪಿಸಲಾ ಪ್ರಸಿದ್ಧವದೇ ||
ಮೇಲೆ ಸಿದ್ಧಮದಾದುದೊಡೆದಿಹ
ಪಾಲಿಗೆರೆಯಲು ಹೆಪ್ಪ ದಧಿಯಹು
ದೇ ಲಲಿತ ಮುಖವರಿಯದರ್ಪಿಸುವಂಗವೆಂತಯ್ಯಾ ||೧೦||

* ಪಾ. ಆ ಪ್ರಸಾದದ ಲೀಲೆಯಿಂ

ಬೀಜಮೇ ಘನಲಿಂಗಮಂಕುರ
ಮೋಜಿತೇಚ್ಛಾ ಜ್ಞಾನಿ ಜಂಗಮ
ಯೋಜಿತ ಫಲಮೆ ಸುಪ್ರಸಾದಾತ್ಮಕಮಿದೆಂದರಿದು ‖
ನೈಜ ಘನ ಲಿಂಗಕ್ಕೆ ಚೇತನ
ರಾಜಿತೈಕ ಚರಪ್ರಸಾದಮ
ನೋಜೆಯಿಂದರ್ಪಿಸಿ ಪ್ರಸಾದ ವಿಭೋಗಿಯಾಗಿಹೆನು ‖ ೧೧ ‖

ಬುದ್ಧಿಯಿಂ ಷಡ್ಭ್ರಮೆ ಷಡರಿಗಳ
ನುದ್ಧರಿಸದನುಪಮ ಶಿವಾಜ್ಞಾ
ಬದ್ಧ ಸುಯಥಾಲಾಭ ಸಂತುಷ್ಟಾತ್ಮನಾಗಿಹುದೇ ‖
ಶುದ್ಧಮನದೊಳು ನಿಜಮನರಿದುದೆ
ಸಿದ್ಧವಾನೇ ಬ್ರಹ್ಮವೆಂಬ ಸು
ಬುದ್ಧಿ ನಿಶ್ಚಯಮಾಗಲಿದೆ ವಿಮಲಪ್ರಸಿದ್ಧವಲಾ ‖ ೧೨ ‖

ಶುದ್ಧಮೇ ಹ್ರಂಕಾರ ಪರಶಿವ
ಸಿದ್ಧಮೇ ಹ್ರಿಂಕಾರ ಶಕ್ತಿ ಪ್ರ-
ಸಿದ್ಧಮೇ ಹ್ರಕಾರ ಪೂರ್ಣಬ್ರಹ್ಮಮಿಂತಿವನು ‖
ಉದ್ಧರಿಸಿ ಪಂಚಪ್ರಸಾದಮ
ನುದ್ಧತಾಂಗೇಂದ್ರಿಯಕೆ ಶೇಷ
ಶ್ರದ್ಧೆಯೊಳಗಾಗೀ ಜಗಮೆ ಪೊರಗಾಗಿ ರಾಜಿಪನು ‖ ೧೩ ‖

ಇದು ನಿಮಿತ್ತ ಸಮಸ್ತ ವಸ್ತುವ
ನೊದವಿ ಚರಲಿಂಗಕೆ ಸಮರ್ಪಿಸಿ
ಯದ ಪದಾರ್ಥವ ಮಾಡಿ ಲಿಂಗಕೆ ಪ್ರಾಣಕಳೆಯಾಗಿ ‖
ಚದುರಿ ನರ್ಪಿಸಿ ಯಾಪ್ರಸಾದವ
ಪದಪಿನಿಂದನುಭವಿಸಿ ಮೋಕ್ಷಾ
ಭ್ಯುದಯದಲ್ಲಿಹೆನಾಗಿ ಸಂಶಯ ಪದಗಳಿಲ್ಲರಿಯೆ ‖ ೧೪ ‖

ಆದಿ ಗುರುಲಿಂಗ ಪ್ರಸಾದಿಕ
ನಾದೊಡಂ ಮಾಡುವರೆ ಜಾತಿ ವಿ
ಭೇದಮಂ ಲಿಂಗಪ್ರಸಾದಿಕನಾದೊಡಂ ವಿಕೃತಿ ||
ಮಾಡು ಚರಲಿಂಗ ಪ್ರಸಾದಿಕ
ನಾದೊಡಂ ನಿರ್ಮೋಹಿಯಾಗಿಹು
ದೈದೆ ಭಕ್ತಿತ್ರಯ ವಿನಿಷ್ಠಾಹೃದಯನಾಗಿಹುದು || ೧೫ ||

ಜ್ಞಾನ ಗೌರವ ಬುದ್ಧಿ ಲಿಂಗವಿ
ಲೀನಮಾನಸ ವಿಮಲ ಚರಲಿಂ
ಗಾನುಭವ ದಶವಿಧ ಪದೋದಕ ಭಕ್ತಿನಿರ್ವಹಣ ||
ಮಾನಿತೈಕಾದಶ ಪ್ರಸಾದದ
ನೂನ ನಿರ್ಣಯವರಿದು ನಿಜ ಸಂ
ಧಾನಮಂ ಮಾಡಲ್ಪ್ರಸಾದ ಶರೀರಮಾಗಿಹುದು || ೧೬ ||

ಅಂಗಲಿಂಗದ ಜೀವಪರಮರ
ಸಾಂಗ ಸುಪದಾರ್ಥ ಪ್ರಸಾದದ
ಮಂಗಳೇಷ್ಟ ಪ್ರಾಣ ಭಾವಂಗಳ ವಿಭೇದವನು ||
ಸಂಗತಾಷ್ಟ ವಿಧಾಮಲ ಸಕೀ
ಲಂಗಳಂ ತಿಳಿದರ್ಪಿಸದೆ ಭವ
ಭಂಗ ಪರಿಪೂರ್ಣಪ್ರಸಾದವೆ ಕಾಯವೆಂತಹುದು || ೧೭ ||

ಅಂಗವೇ ಜೀವಂ ಪರಾತ್ಮನೆ
ಲಿಂಗಮಾ ಜೀವನೆ ಪದಾರ್ಥಂ
ತುಂಗ ಪರಮನೆ ಶೇಷಮುಭಯೈಕ್ಯಮೆ ಸಮರ್ಪಣವು ||
ಸಾಂಗ ತತ್ವತ್ರಯಮನರಿದು ನಿ
ಜಾಂಗ ಭಾವ ಮನಕ್ಕೆ ಸತತಾ
ಭಂಗ ಪರಿಪೂರ್ಣ ಪ್ರಸಾದಂ ವೇದ್ಯಮಾಗಿಹುದು || ೧೮ ||

ನಂಬುಗೆಯ ಲಿಂಗತ್ರಯವೆ ತನು
ವೆಂಬರಿವಿನೆಚ್ಚರಿಕೆ ಇಷ್ಟದೊ
ಳೆಂಬ ಪ್ರಾಣದೊಳು ಧ್ಯಾನ ಭಜನೆ ಭಾವದೊಳು ||
ಪಾಂಬಿನಿಂ ಪರಿಪೂರ್ಣ ಭಾವಂ
ತುಂಬಿ ಬಾಹ್ಯದ ಪೂಜೆಯೊಳಗಣ
ಸಾಂಬ ನರ್ಚನೆಯರಿವಿನವಧಾನಮನರಿಯದಹುದೆ ||೧೯||

ಅಮಮ ನಿರಹಂಕಾರದಿಂದರಿ
ವಮಲ ಕರಣೇಂದ್ರಿಯ ಮುಖಂಗಳಿ
ನಮಿತ ಸಕಳದ್ರವ್ಯಮಾ ಲಿಂಗಕೆ ನಿವೇದಿಸುತೆ ||
ಕ್ರಮದನರ್ಪಣಮಳಿದು ನಿಷ್ಠಾ
ಸಮತೆಯಿಂ ತವೆ ತಪ್ತಲೋಹಂ
ನಿಮಿರ್ದಖಿಳ ಮುಖದಲ್ಲಿ ಜಲಮಂ ಕೊಂಬೊಲರ್ಪಿತವು ||೨೦||

ಅರಿ ಮರುಳೆ ಕರಣೇಂದ್ರಿಯಾವಳಿ
ಯರಿದ ಸುಖಮೆಂತರ್ಪಿತವೊ ನೀ
ನರಿದುದಂ ಲಿಂಗಕ್ಕೆ ಕೊಡಲೆಂತಹುದು ಸಂದೇಹಿ ||
ಅರಿವುತರ್ಪಿಸಬಹುದೆ ಲಿಂಗ
ಕ್ಕರಿಯೆ ತನುಮನ ಸೋಂಕಿದರ್ಪಿತ
ವಿರದೆ ಕಿಲ್ಬಿಷಮೆಂದುದಾಗಿದನೆಂತು ಕೊಡಬಹುದು ||೨೧||

ತನು ಮನಃ ಪ್ರಾಣೇಂದ್ರಿಯಾವಳಿ
ಯನುಭವಾಂತಃಕರಣ ಮುಖ್ಯಮ
ನನಘ ಗುರುಭಕ್ತರನು ಮಾಡಿದನಾಗಿ ಶುಭ್ರ ಪಟಂ ||
ವಿನುತ ಷಡ್ವರ್ಣಕ್ಕೆ ಬಂದಂ
ತನಿತು ಘಟಸಂಸರ್ಗದಿಂ ಮಹ
ವನುಪಮೇಂದ್ರಿಯ ವಚನಮಾಗರ್ಪಿಸಿ ಕೊಳುತ್ತಿಹುದು ||೨೨||

ಸಾಂಗ ನಿಷ್ಠಾಚಾರ ಭಕ್ತಿಗ
ಳಂಗವಂಗವೆ ಲಿಂಗಸಂಗವು
ಪಿಂಗದಖಿಳ ಪದಾರ್ಥಗಳು ಕಾಮಿಸಿಯೆ ಬಂದಲ್ಲಿ ||
ಪೊಂಗಿ ಸಕಳೇಂದ್ರಿಯವು ಸೋಂಕದೆ
ಲಿಂಗ ಕರ್ಪಿತವನು ಪರಮಾತ್ಮ
ರಿಂಗೆ ಕೊಂಬುದೆ ಸುಪ್ರಸಾದ ಮಿದಿಲ್ಲದುದೆ ಸಲ್ಲ || ೨೩ ||

ತನುವೆ ನೈವೇದ್ಯಂ ತದರ್ಪಿತ
ವನುವಿನರ್ಪಿತಮೆ ಪ್ರಸಾದಂ
ತನು ವಿರೋಧಿಯೆ ದರ್ಶನಂ ಸ್ಪರ್ಶನಮೆ ಭಾವಾದಿ ||
ಅನಘ ಶೇಷಮೆ ಮರಳಿಯರ್ಪಿತ
ವನುಪಮಾತ್ಮಕ ದರ್ಶನ ಸ್ಪ
ರ್ಶನಗಳಿಂದಹ ರುಚಿವಿರೋಧಿ ಮಹಾಪ್ರಸಾದಿಕನು || ೨೪ ||

ತೋರ್ಪ ಕಾಮಭ್ರಮೆಯ ಜೀವನ
ದರ್ಪ ದುಃ ಪ್ರಕೃತಿಗಳ ಮರೆದು ಮ
ಹಾರ್ಪಿತಾನರ್ಪಿತದ ಗೊತ್ತಂ ಮುಟ್ಟಿ ರೂಪುರುಚಿ ||
* ಕೂರ್ಪ ಸತ್ಕೃಪಿಗಳಂ ಲಿಂಗ
ಕ್ಕರ್ಪಿಸಲು ಬಲ್ಲೊಡಮಿದೇ ಲಿಂ
ಗಾರ್ಪಿತಂ ಪರಮ ಪ್ರಸಾದಂ ಸಹಜಮಿಂತಿಹುದು || ೨೫ ||

ತನುವೆ ಲಿಂಗಂ ಲಿಂಗಮೇ ಪ್ರಾ
ಣನು ಮಹಾಪ್ರಾಣನೆ ಮನಂ ತ
ನ್ಮನವೆ ಲಿಂಗ ಸ್ವಾಯತಮದಾಗಿಯೆ ಮನಃಪ್ರಾಣ ||
ಅನಘದಂಗಂ ಲಿಂಗಮುಂದಾ
ಮನವೆ ಹಿಂದಾಗಖಿಳ ವಸ್ತುವ
ನನುವಿನರ್ಪಿಸಿ ಯಾಪ್ರಸಾದವ ಸೇವಿಪುದೆ ನಿಜವು || ೨೬ ||

---

* ಪಾ. ಕೂರ್ಪಕೃಪಿತೃಪ್ತಿಗಳ ಲಿಂಗ

ಅರ್ಪಿತದೊಳವಧಾನವಡಗಿಯ
ನರ್ಪಿತದೆ ಸುಯಿಧಾನವಡಗಿರು
ತಿರ್ಪವಗೆ ತನುಮನ ಸುಭಾವಾಂತಃ ಕರಣದೊಳಗೆ ||
ಅರ್ಪಿಸಲು ಮಿಲ್ಲನುಭವಿಸಲಿ
ಲ್ಲರ್ಪಿತಾನರ್ಪಿತಗಳೆರಡಳಿ
ದಿರ್ಪ ಪರಿಪೂರ್ಣ ಪ್ರಸಾದದ ಸೇವನಾಪರಗೆ || ೨೭ ||

ಅರ್ಪಿತಂ ಗುರುವಿಂಗೆ ತನುಮನ
ವರ್ಪಿತಂ ಲಿಂಗಕ್ಕೆ ಭಾವಮಿ
ದರ್ಪಿತಂ * ಚರಲಿಂಗಕರವೆ ನಿಜಕ್ಕೀತನ್ನಿಜಮೆ ||
ಅರ್ಪಿತಂ ತೃಪ್ತಿಗೆಯನರ್ಪಿತ
ಮರ್ಪಿತಾಯತ ಮಾಗನರ್ಪಿತ
ಮರ್ಪಿತಮದಾಗರ್ಪಿತಾನರ್ಪಿತಗಳೆರಡಿಲ್ಲ || ೨೮ ||

ತೋರ್ಪ ಬಿಂದುವನಿಷ್ಟಲಿಂಗ
ಕ್ಕರ್ಪಿಸಿ ಪ್ರಾಣಕ್ಕೆ ನಾದಮ
ನರ್ಪಿಸಿಯೆ ಮನಮಂ ನಿರಾಕಾರದೊಳು ನೆಲೆಗೊಳಿಸಿ ||
ಕೂರ್ಪಪರಿಣಾಮ ಪ್ರಸಾದದೊ
ಳಿರ್ಪೆ ತದ್ಗತನಾಗಿ ಶೇಷಮೆ
ಬರ್ಪಭೋಗಂ ಪ್ರಾಣಮಂ (ಮುಂ) ದಿವ್ಯಾನುಭವಮಾಗಿ || ೨೯ ||

ಹೊಂಗಲಗು ಕರಣೆಯಂತೆ ಮನವೆ
ಲಿಂಗದನುವಾಗಿಯೆ ಸುಗಂಧೋ
ತ್ತುಂಗ ವಾಸನ ಮಾರುತಂ ಪೊಕ್ಕೊಂತೆ ಸರ್ವವನು ||
ಲಿಂಗಕರ್ಪಿಸಿಯಾಪ್ರಸಾದವ
ತಾಂ ಗ್ರಹಿಸಬೇಕಲ್ಲದೆಯೆ ಮನ
ವಂಗಜೀವಾರ್ಪಿತಗಳೆನಲೇಕೆ ಪ್ರಸಾದಿಗಳು || ೩೦ ||

---

* ಪಾ, ಚರಲಿಂಗಕಧುವೆ

ಅಂಗಭಾಜನದಲ್ಲಿ ಗಡಣಿಸಿ
ಮಂಗಳಾತ್ಮ ಪದಾರ್ಥಮಂ ಘನ
ಲಿಂಗಕರ್ಪಿಸಿಯಾ ಪ್ರಸಾದವ ಗ್ರಹಿಸುವಂ ಸುಮನ ||
ಸಂಗತಾವಿರಳ ಪ್ರಸಾದಿ ನಿ
ಜಾಂಗಮಿದನರಿದೀಯಲಿಲ್ಲು
ತ್ತುಂಗ ಪರುಷಂ ಪುರುಷಕಿದಿರೆಡೆಗೊಟ್ಟತೆರನಂತೆ ||೩೧||

ವಸುಧೆ ಬೀಜವ ನುಂಗಿದೊಡಮುದ
ಯಿಸಲು ಬಲ್ಲುದೆ ಶಿಶುವೆ ಮಾತೆಯ
ಬಸುರೊಳಸುವಂ ನುಂಗಲಾ ಶಿಶುತಾಯ್ಗೆ ಳಿಂಡೆಂಬ ||
ಪೆಸರಡಗಿತಾತ್ಮಕ ಪದಾರ್ಥವ
ನಸಮಗಿತ್ತಾ ಶೇಷಮೀ ತೆರ
ನೆಸಕದಲ್ಲಿಯದರಿವ ಪರಮಂಗಲ್ಲದೆಲೆ ಮರುಳೆ ||೩೨||

ಅಂಗ ಲಿಂಗ ಪ್ರಾಣಮಾದ
ಲ್ಲಂಗಿ ಜಾಗ್ರ ಸ್ವಪ್ನ ಸುಪ್ತಿಗ
ಳಂಗದಭಯ ಭ್ರಾಂತಿಯಿಲ್ಲದೆ ದೃಷ್ಟದಿಂ ಕಂಡು ||
ಸಾಂಗ ಮನದಿಂದರಿದು ಭಾವಿಸಿ
ಲಿಂಗಕರ್ಪಿಸಿ ಸೇವಿಪುದೇ ಮಹ
ದಂಗ ಮನಕಿದು ನಿಜವು ಪರಮಂ ಗೆಲ್ಲಿಯದು ಶೇಷ ||೩೩||

ಜ್ಯೋತಿಯೆಡೆಯಿಂ ಜ್ಯೋತಿ ಬರಲು ವಿ
ದೇತರದು ತಮವೆಂಬ ಸಜ್ಜೀ
ವಾತುಮನೆ ಸುಪದಾರ್ಥ ಪರಮನೆ ಶೇಷಮೆಂದೊಂದು ||
ಮಾತನುಸುರೆನೆ ಪಿಂದೆ ನಿನ್ನೊಳ
ಗಾತುಮನ ಬೆಳಗರಿವುದೇ ನೀ
ನೀತೆರಂ ಪರಮಂ ಪ್ರಸಾದಿಕನರಿದುಕೋ ಮರುಳೆ ||೩೪||

ಸಾಂದ್ರಮಯ ವಿಷಯಗಳನೊಂದೊಂ
ದಿಂದ್ರಿಯಗಳೊಂದೊಂದನರಿಯದ
ವಿಂದ್ರಿಯ ಮುಖಂಗಳೊಳು ಲಿಂಗಮನರಿದು ಪರಸನದಿ ||
ರುಂದ್ರಹಸ್ತಕೆ ಬಂದುದನು ಜಿ
ಹ್ವೇಂದ್ರಿಯಾದಿಯೊಳರ್ಪಿಸುವ ನಿ
ಸ್ತಂದ್ರ ಸುಮನಃ ಪ್ರಾಣಲಿಂಗ ಮಹಾಪ್ರಸಾದಿಕನು || ೩೫ ||

ಪಾಪ ಪುಣ್ಯಗಳಿಂದ್ರಿಯಗಳಿಂ
ರೂಪು ಸುಖದುಃಖಾದಿಗಳನಪ
ಲಾಪಿಸುತೆ ವಿಷಯಾಟವಿಯೊಳು ಗಮಿಪಮನೋದ್ವಿರದ ||
ಪಾಪಮಂ ಜ್ಞಾನಾಂಕುಶ ಸ್ತಂ
ಭೋಪ ಮಾನವ ಮಾಡಿದಲ್ಲದೆ
ರೂಪಮಹುದೆ ಶಿವಾರ್ಪಣಂ ಪರಮಪ್ರಸಾದಿಕನು || ೩೬ ||

ಅಂಗಮಂ ಶಿವಗರ್ಪಿಸಲ್ಕದು
ಲಿಂಗ ಮಾತ್ಮದಿನಿಂದ್ರಿಯಂಗಳ
ಸಂಗದಿಂದಿಹ ಸರ್ವಸುಖವ ಸಮರ್ಪಿಸಲು * ಸುಖಮೆ ||
ಲಿಂಗ ಮಖಿಳೇಂದ್ರಿಯಕೆ ಮುಖ್ಯಂ
ಸಂಗಮನವೆ ವಿಲೀನಮಾಗಲು
ಲಿಂಗದಲ್ಲಿಂದ್ರಿಯ ನಿಕಾಯಗಳೇನನರಿದಪವು || ೩೭ ||

ಆ ಮನೋದರ್ವಿಯೊಳು ವಿಷಯಾ
ಸ್ತ್ರ ಮಹವೀಯಂಬೆ ಮಂತ್ರದೊ
ಳಾಮಹಾಜ್ಯೋತಿರ್ಮಯಾಗ್ನಿಯೊಳಿಂದ್ರಿಯದ ಸುಖವ ||
ಆ ಮಹಾಲಿಂಗಕೆ ಸಮರ್ಪಿಸಿ
ಯಾಮನದ ನೆನಹದೇನುಂಟದೆ
ಭಾಮಯ ಪ್ರಾಣೇಶ್ವರಂಗೆ ವಿಭೋಗಮಾಗಿಹುದು || ೩೮ ||

* ಪಾ. ಛಾ ಸುಖಮೆ ।

ಸತತ ಶಿವ ಸಿದ್ಧೌಷಧಿಯೊಳ
ಪ್ರತಿಮ ಜೀವರ್ಗೀ ಪ್ರಸಾದವೆ
ವಿತತ ಭವರೋಗಕೆ ರಸಾಯನ ಮೋಕ್ಷ ಸಂಪದಕೆ ||
ನುತ ಭವನಮಾನಂದ ಶರಣನ
ಮತಿಕರಸ್ಥಲದಲ್ಲಿ ನಿಕ್ಷೇ
ಪಿತ ಮದಾಗಿಹುದೊಲಿದಖಂಡಾದ್ವಯ ಮಹೋದಯದಿ || ೩೯ ||

ಅಂಗ ಲಿಂಗ ಗ್ರಹಕನಾದೊಡೆ
ಯಂಗ ಭೋಗ ವಿರೋಧಿಯಪ್ಪಂ
ಜಂಗಮ ಗ್ರಹಕಂಗೆ ತ್ರಿವಿಧ ವಿಕಾರಮಿಲ್ಲಾಗಿ ||
ಸಾಂಗಶೇಷಗ್ರಹಕನಾದೊಡೆ
ತುಂಗ ಸುರುಚಿ ವಿರೋಧಿಯಾಗಿ ನಿ
ರಂಗನಾ ರಾಜಿಕುಂ ಬರಿಮಾತೇಂ ಪ್ರಯೋಜನವು || ೪೦ ||

ಲಿಂಗಮಲ್ಲದೆ ಸೊಗಸದಾ ಚರ
ಲಿಂಗಮಲ್ಲದೆ ಸಮನಿಸದು ಜೀ
ವಂಗೆ ಸೊಗಸದು ಸುಪ್ರಸಾದಮದಲ್ಲದುದೆ ಬಹಳ ||
ಅಂಗ ಭೋಗಕ್ಕೆಳಸವೀ ಕರ
ಣಂಗಳಿಂದ್ರಿಯಮನ್ಯ ವಿಷಯ
ಕ್ಕಂಗವಿಸದಂತರ್ಮುಖಾಯತಮಾಗಿ ರಾಜಿಪುವು || ೪೧ ||

ವಿಲಸದಂತರ್ಮುಖ ಮನೋನಿಲ
ಮಿಲಿತ ಶಿವತತ್ವಾನುಭಾವ ಹೃ
ದಲಘುಚರಲಿಂಗಪ್ರಸಾದದ ನಿಲವಿನಾಶ್ರಯದ ||
ನೆಲೆಯನರಿವವನಾವ ನರಿದೊಡೆ
ಕಲಿಮಲಾಪಹ ಮೂರ್ತಿಕಾರಣ
ನಿಲಯ ಶರಣನದಲ್ಲದೊಡೆ ಸಂದೇಹಿ ಮಾನವನು || ೪೨ ||

ಮನದ ಹವಣಿಗೆ ಕೊಂಡು ಲಿಂಗ
ಕ್ಕೆನಲು ತನುವುನ ಮುಟ್ಟದೋಗರ
ಘನಕೆ ಸಲ್ಲದನರ್ಪಿತಮನುಂಡಾಂ ಪ್ರಸಾದಿಯೆನೆ ||
ಕನಲುವರು ಶರಣರು ಪದಾರ್ಥಂ
ನೆನೆದು ಬರೆ ಪೂರ್ವಾಶ್ರಯಮನಳಿ
ದನುಪಮಂಗರ್ಪಿಸಿಯೆ ಭೋಗಿಪನೇ ಪ್ರಸಾದಿಕನು || ೪೩ ||

ಅನಿಲನರಿಯದ ಗಂಧಮಿಲ್ಲ ಗ
ಗನ ವರಿಯದಿಹ ಭುವನಮಿಲ್ಲಂ
ತಾನರಿಯದಖಿಳ ಪ್ರಪಂಚುಗಳಿಲ್ಲ ಕರಣಗಳು ||
ಇನಿಸುವರಿಯದ ವಿಷಯಮಿಲ್ಲಿ ನಿ
ತಿನಿತು ತಮ್ಮಿಂಗ್ರಹಿಸಲಮ್ಮದೆ
ಘನಪದದ ಮುಖವರ್ಪಿಸಿಯೇ ಸುಖಪ್ರಸಾದಿಗಳು || ೪೪ ||

ನಡೆನುಡಿವ ಚೈತನ್ಯಮುಳ್ಳನ
ಕಡಗವಂಗ ಗುಣಂಗಳಾರ್ಗಂ
ನಡೆವ ನುಡಿವಖಿಳೇಂದ್ರಿಯದ ಸುಖಮಂ ಸಮರ್ಪಿಸಿಯೆ ||
ಬಿಡದೆ ಲಿಂಗ ವಿಭೋಗಿಯಾದವ
ನೊಡಲು ಭಾವಮೆ ಲಿಂಗಮಯವಿದು
ಬಿಡಾ ಶಿವತತ್ವಾನುಭಾವಿಗಳೈಕ್ಯ ಸಂಪದಕೆ || ೪೫ ||

ಭಾವದಗ್ರಂ ದೃಷ್ಟಿಸಂಧಿಸಿ
ಕೀವಿಬಂದ ಪದಾರ್ಥ ಪೂರ್ವದ
ಭಾವಮಂ ಕಳೆದುರೆಮನೋಗುಣ ಸೋಂಕಿದೊಡೆ ಬಳಿಕ ||
ಓವಿ ಸ್ವಾಮಿಯೊ ಭೃತ್ಯ ಸಂಬಂ
ಧಾವಲಂಬಕೆ ಗುಣಮಿದಲ್ತೆಂ
ದೀ ವಿಚಾರದೊಳರ್ಪಿಸುವ ನೀನೆ ಪ್ರಸಾದಿಕನು || ೪೬ ||

ಸುಕರ ಪಾದೋದಕವು ಲಿಂಗೋ
ದಕವು ಮಾಂಗಲ್ಯ ಪ್ರಸಾದೋ
ದಕಗಳೀ ತ್ರಿವಿಧೋದಕದ ಭೇದವನು ಭೇದಿಸಿಯೆ ||
ಪ್ರಕಟದಿಂ ಸೇವಿಸಿದವಂ ತಾ
ಯಕುಚಮಂ ಪೀರ್ವನೆ ಸುಪೂರ್ಣೋ
ದಕ ಮಹಾ ತ್ರಿವಿಧೋದಕಾರ್ಣವ ಮಗ್ನನಾಗಿಹನು || ೪೭ ||

ಅರ್ಪಿತ ದ್ರವ್ಯವೆ ಘನೇಷ್ಟಕ
ನರ್ಪಿತ ದ್ರವ್ಯಮೆ ನಿಜಕ್ಕೆಂ
ದಿರ್ಪುದನು ಭೇದಿಸದೆ ಕೊಂಬರು ತನುವಬೋಧಿಸಿಯೆ ||
ದರ್ಪದುಪಜೀವ ಪ್ರಸಾದಿಗ
ಳರ್ಪಿಸಿ ಪ್ರಾಣವನು ಬೋಧಿಸಿ
ಕೊರ್ಪ ಪರಿಣಾಮ ಪ್ರಸಾದಿಕ ನೊರ್ವನೈ ನೀನು || ೪೮ ||

ತಲೆಮೊರಿದ ಕಣ್ಣು ಬೀಜದ
ನೆಲೆಮೀರಿದ ವೃಕ್ಷವಂಗದ
ಹೊಲಬಮೀರಿದ ಜೀವನುಂಟೆ ನಿಜೇಷ್ಟಮಂಮೀರಿ ||
ಸುಲಭದರ್ಪಿತ ಮುಂಟೆ ಅರ್ಭಕ
ಲಲನೆ ಕೊಂಡುದೆ ತೃಪ್ತಿಯಾಗಿಹು
ದೊಲವಿನಿಷ್ಟಪ್ರಾಣ ಶೇಷಮೆ ಫಲರಸಗಳಂತೆ || ೪೯ ||

ದೇಹ ಜಾಗ್ರ ಸ್ವಪ್ನಮಂತ
ರ್ದೇಹಕರಣ ಸುಷುಪ್ತಿ ಜೀವಸ
ಮೂಹ ಸುಮನೋಭಾವ ಕರಣೇಂದ್ರಿಯ ನಿವಹ ಸಹಿತ ||
ಮೋಹಿತೇಷ್ಟ ಪ್ರಾಣಭಾವ
ಸ್ನೇಹ ಪರಿಣಾಮ ಪ್ರಸಾದ ಸ
ಮಾಹಿತಾತ್ಮಕ ನೀನೆ ಪರಿಪೂರ್ಣ ಪ್ರಸಾದಿಕನು || ೫೦ ||

ಶಾಶ್ವತಾಮಲವರ್ತಿ ತೇಜೋ
ನಶ್ವರಾಯತ ಕೀರ್ತಿಕಾರಣ
ಶಶ್ವದನುಪಮ ಭಕ್ತಿಮೂರ್ತಿ ನಿರಸ್ತ ಸರ್ವಾರ್ಥ ||
ಭಾಸ್ವರಾತ್ಮ ಸ್ಫೂರ್ತಿನಮಿತ ಸ
ವಿಸ್ವ(ಶ್ವ) ಗತ ಸಮವರ್ತಿ ಜಯವಿಜಿ
ತ ಸ್ವಪರ ಬೋಧಾರ್ಥಿ ಸೋಹಂ ಭಾವನಾಪೂರ್ತಿ || ೫೧ ||

ಇದು ಸಮಸ್ತ ಶಿವಾನುಭಾವರ
ಪದ ಪಯೋರುಹ ಗಂಧಮುದ ಷ
ಟ್ಪದನು ಷಟ್‌ಸ್ಥಲ ಸಾರ್ವಭೌಮಂ ಚೆನ್ನವೃಷಭೇಂದ್ರಂ ||
ವಿದಿತವಾಗಿ ನಿರೂಪಿಸಿದ ಸ
ಮ್ಮುದ ಮಹಾಕ್ಷೇತ್ರಜ್ಞ ಸುಮನಃ
ಕದನದಲ್ಲಿ ಪ್ರಸಾದಿಕೃತಿ ಸಪ್ತದಶಸ್ಥಲವು ||

ಇತಿ ಕ್ಷೇತ್ರಜ್ಞ ಸುಮನೋವಾದೇ ಪ್ರಸಾದ್ಯಾಚರಣ ವಿವರಣಂ ಸಪ್ತದಶ ಪ್ರಕರಣಂ || ಅಂತು ಸ್ಥಲಂ ಪದಿನೇಳಕ್ಕಂ ಪದನು ೧೦೦೭ಕ್ಕಂ (೯೫೬+೫೧)
ಸಮಾಪ್ತಂ ಮಂಗಳ ಮಹಾ ಶ್ರೀ ಶ್ರೀ ಶ್ರೀ

ಶ್ರೀಗುರು ಬಸವಲಿಂಗಾಯ ನಮಃ

# ಹದಿನೆಂಟನೆಯ ಪ್ರಕರಣಂ

## ಪ್ರಾಣಲಿಂಗಿ ಸ್ಥಲಂ

### ಪರಿವರ್ಧಿನಿ ಷಟ್ಪದಿ

ಪ್ರಾಣ ವಿಬಾಹ್ಯ ಕ್ರಿಯೆಯಿಂ ಮರೆದಾ
ಪ್ರಾಣಂಗಿಂದ್ರಿಯ ಗುಣಮಂ ತೊರೆದಾ
ಪ್ರಾಣೇಶ್ವರಪೂಜಾಪರ ಚಿತ್ತನೆ ಪ್ರಾಣೇಶ್ವರನಹನು ॥ ॥ ಪಲ್ಲವಂ ॥

ಕ್ಷುದ್ರ ಪ್ರಕೃತಿಮಹೀಂದ್ರಾಶನಿ ನಿರು
ಪದ್ರಾಯತ ಸಚ್ಚಿದ್ರೂಪೋದಯ
ಭದ್ರಮಯೂಘ ದರಿದ್ರಾನತಕಲ್ಪದ್ರುಮ ಸಂಸಾರ ।
ವಿದ್ರಾವಣ ವಿಲಸದ್ರಮಣೀಯ ವಿ
ನಿದ್ರಾನಂದಸಮುದ್ರಸುಧಾಂಶು ಕ
ನದ್ರುಚಿರಾಂಗ ಸಮೂರ್ಧ್ವ ವೇದ ಸಮುದ್ರಿತ ಮಾಂ ಪಾಹಿ ॥ ॥ ೧ ॥

ಶಿವ ಭಕ್ತಿಗಮುಖಿಲರ್ಗಂ ಶೇಷಮೆ
ತವೆ ಮುಖ್ಯಂ ಪ್ರಾಸಾದ ವಿಹೀನ
ರ್ಗವಿರಳ ಭಕ್ತಿಯದೇಂ ದೊರಕೊಂಬುದೆ ತಿಳಿಯಲ್ಕೀ ಶೇಷಂ ।
ಶಿವ ಜೀವರ ಯೋಗದಿನುಂಟಾಗಲು
ಶಿವಮಯಮಾಗಿಹುದಖಿಲಂ ತದ್ಭಾ
ವವನುಳ್ಳರು ಶೇಷಿಯೆ ಮುಕ್ತ ಕ್ರಿಯೆಯಿಂ ಪ್ರಾಣೇಶ್ವರನು ॥ ॥ ೨ ॥

ಭಕ್ತಾದಿಕ ಮಾರ್ಗದೊಳೀ ಪ್ರಾಣಿಗೆ
ಸೂಕ್ತಜ್ಞಾನಾದಿಕ ಯೋಗಗಳಿಂ
ವ್ಯಕ್ತಬ್ರಹ್ಮವೆ ಲಿಂಗಂ ತಚ್ಛೈತನ್ಯಾತ್ಮಕೀಯದಾ |
ಶಕ್ತಿಪ್ರಾಣಾತ್ಮಕವಾದುದರಿಂ
ಯುಕ್ತಿಪ್ರಾಣಮೆ ಶಿವನಾಗಿಹ ನಿ
ರ್ಣಿಕ್ತ ಪ್ರಾಣೇಶ್ವರ ಘನಯೋಗೀಶ್ವರ ನೆನಿಸಿದನದರಿಂ || ೩ ||

ಅಂತಃಕರಣಂಗಳನಾಶ್ರಯಿಸಿ ನಿ
ರಂತರ ಕರ್ಮವಶಂಗತನಾಗಿ ನಿ
ತಾಂತಾವಿದ್ಯಾದೇಹದೊಳಣುರೂಪಿಂ ದೇಹಿಕನಾಗಿ ||
ಭ್ರಾಂತಿಸಿ ಸಂಸೃತಿಕಾಂತಾರದೊಳನಿ
ಶಂ ತೊಳಲುವ ಜೀವನೆ ಲಿಂಗಾತ್ಮಕ
ನೆಂತಹನೆಲೆ ತಿಂಕಲ್ಪೋಪವ ಮೇರುವ ಕಾಣ್ಬನೆಮರುಳೆ || ೪ ||

ಶ್ರೀಗುರುಬೋಧೆಯೊಳಾತ್ಮಗುಣಮನಳಿ
ದಾಗಳೆ ತನುಕರಣೇಂದ್ರಿಯಗಳೊಳು ವಿ
ಭಾಗಿಸಿದಾ ಪರಿಪೂರ್ಣಬ್ರಹ್ಮದ ನಿಜಮಾತ್ಮನ ನಿಜವ ||
ರಾಗದೊಳರಿದ ಬಳಿಕ ಸಂಸಾರದ
ಯೋಗಮಿಹುದೆ ಶಿವತತ್ವಾನಂದಿತ
ಯೋಗಿಯದಾಗಿಹನಲ್ಲದೆ ಜೀವನ ವೃತ್ತಿಗಳಿಲ್ಲರಿಯೆ || ೫ ||

ಸರ್ವೋತ್ಪತ್ತಿಗೆ ಜಲಮೇ ಕಾರಣ
ಸರ್ವಪ್ರಕೃತಿಗೆ ಮನವೇ ಕಾರಣ
ಶರ್ವನೆ ಲೀಲೆಗೆ ಭಾಜನ ಸಂಸೃತಿ ಕಾರಣನಣುರೂಪಿಂ ||
ಗೀರ್ವಾಣಾಸುರಮಾನವಪಶುಗಂ
ಧರ್ವಾದಿಕ ತತ್ತತ್ತನುಯೋಗದಿ
ನೋರ್ವಳತ್ತನ್ನಾಮದಿ ನಿಹ ಗೆಂತಹುದೆಲೆ ಶಿವಯೋಗಂ || ೬ ||

ಬೇಗ ಜಪಾಕುಸುಮದ ಸನ್ನಿಧಿಯಿಂ
ರಾಗಮಯಂ ಸ್ಫಟಿಕಕ್ಕಪ್ಪಂತೊಲಿ
ದೀಗಾತ್ಮಂಗೆ ಜಡಾಹಂಕಾರದ ಯೋಗದಿನೀತನುವೆ ||
ರಾಗದೊಳನಿಮಿತ್ತಾಸಕ್ತಿಗಳಿಂ
ಭೋಗಾರ್ಥಮದಾಗಾಗಲು ಪರಶಿವ
ಯೋಗದಿನಂತಃಕರಣಾದೀಂದ್ರಿಯಗುಣಮಂ ಸೋಂಕನಲಾ || ೭ ||

ಸುತ್ತಿದ ನಾನಾಯೋನಿಯನಾಂತನಿ
ಮಿತ್ತೋಪಾಯಕ ಬಹುಚಾರಿತ್ರಂ
ಚಿತ್ತಂ ನಾನಾ ಕಾರ್ಯನನೀಶ್ವರ ಮುಖದೋಷಾನ್ವಿತನು ||
ಹೊತ್ತುಗನೀಶ್ವರನಿಂ ಪ್ರೇರಿತ ಪಶು
ತತ್ತತ್ಕರ್ಮಫಲಂಗಳನನುಭವಿ
ಸುತ್ತಂಗದೊಳಿರ್ಪವನೆಂತಹನೆಲೆಯೋಗೀಶಂ ಮರುಳೆ || ೮ ||

ಘನಮೂವರಿಸಿದ ಸೂರ್ಯನ ತೆರದಿಂ
ತನು ಕರಣೇಂದ್ರಿಯ ವಿಜಯಂ ಮಾಯಾ
ವನನಿಧಿಚಿದ್ವಾಡಬನೀ ಸಂಸ್ಕೃತಿಬೀಜಾಜ್ಞಾನವನು ||
ಅನುಪಮತತ್ವಜ್ಞಾನಾದಿಕದಿಂ
ದನಘಾಯತ ಶಿವಯೋಗದಿನುರೆ ಸಂ
ಹನನಂಗೆಯ್ದು ವಿರಾಜಿಪನಕಲಂಕಾನಂದೋದಯದಿ || ೯ ||

ಕರ್ಮಜಫಲದಿಂ ಸ್ವರ್ಗಮನಾದೊಡ
ಮೂರ್ಮಿಯ ನರಕಮನಾದೊಡ ಮುಂಡಾ
ಕರ್ಮಂ ತೀರಲು ಜನಿಸುವ ಜನಿಸಿಯೆ ಸಾವಂ ಸತ್ತುದಿಪಂ ||
ಕರ್ಮಿಯುದಿಸಿಯುಂ ಸಾವನೆ ನೆಮ್ಮಿಹ
ದುರ್ಮತಿಗಜ್ಞಾನ ಕುಸಂಕಲ್ಪದ
ಊರ್ಮೆಯು ಜೀವನ ತತ್ಸಕ್ಕೆಂತಹುದೈ ಪರಶಿವಯೋಗಂ || ೧೦ ||

ಜನನ ಮರಣ ತನುಗಲ್ಲದೆ ಜೀವಂ
ಗಿನಿತಿಲ್ಲಿಯವಹಿ ಹೆರೆಗಳೆದೊಲು ಬಹು
ತನುಗಳು ಹೋಗುತಿರಲಿಕಾತ್ಮಂ ನಿರ್ಣೀತಂಗೀಜ್ಞಾತೃ ||
ಘನದೇಹಿ ತ್ರಿಗುಣಾತ್ಮಕನಲ್ತೆಂ
ಬನಘಂಗಂಗಮಿದುಂಟಾದೊಡಮೇಂ
ತನುಧರ್ಮಂ ಪೊರ್ದದೆ ಶಿವಸುಖವರಮಾನಸನಾಗಿಹನು ||೧೧||

ಓಡ ಪಿಡಿಯೆ ಕೈಮಸಿಯೆಂಬುದನೀ
ನಾಡೆಲ್ಲರು ಬಲ್ಲರು ತನುವಲ್ತೆಂ
ದಾಡಿದಮಾತ್ರದೊಳಂಗಗುಣಂಗಳು ಸೋಂಕದದೆಂತಿಹನು ||
ಪೀಡೆ ತನುವಿನೊಳು ಕುಕ್ಕರಿಸಿಯೆ ರೋ
ಡಾಡಿಸಿಕೊಂಡು ವಿಷಯದಿಂ ಬಳಲುತೆ
ಮಾಡುತಿಹುದು ಕರ್ಮವ ಮತ್ತಾತ್ಮಗುಣವೊ ದೇಹದ ಗುಣವೊ ||೧೨||

ಒಡೆಗಂಚಂ ಪೊಯ್ದಡೆ ನಾದಂ ಬೇ
ರ್ಪಡಿಸಲ್ಕಾದಪ್ರಕೃತಿಯೊ ಕಂಚಿನ
ಜಡಗುಣವೊ ಪೇಳ್ಕೈ ತತ್ವಗಳೈಭೂತವ ಬೆರೆದಲ್ಲಿ ||
ಕಡೆಗುಳಿದಾತ್ಮಗುಭಯಕರ್ಮಂಗಳ
ಗಡಣಮದಾವುದೊ ಜೀವಂಗಂ ಭವ
ದೊಡಲಿಗೆ ಸಾದೆನಲೊಡಲಸುಗಳ ಬೆಸುಗೆಯದಾವುದೊ ಮರುಳೆ ||೧೩||

ತೃಣಮಂ ಪಿಡಿಯಲಸಕ್ತಂ ಜೀವನು
ತಣಿವರು ನಾಲ್ವರೊಡಲ ಪೊರೆಯಂ ಪೊ
ತ್ತಣಿಯರಚಿನ್ನವು ಬಣ್ಣವ ಕೂಡಿದ ದೆಸೆಯಿಂ ದುಃಖಕ್ಕೆ
ಮಣಿದೊಲು ಜಾಯೆಯೊಳೊರಗಿರೆ ತನುವಂ
ಕೆಣಕಲಿಕಾತ್ಮಕ ನೆರ್ಚರುವಂತೀ
ಗುಣಯುಗದಿಂ ಭವಮರಣಂ ಬಂಧವಿಮೋಕ್ಷಕ್ಕೊಳಗರಿಯೆ ||೧೪||

ಪರಮಾತ್ಮಂ ಸುಪ್ತಿಯೊಳಿರೆ ತನುವಂ
ಕರವಾಯೆಡೆಗೈದಿಯೆ ತುರಿಸುವ ಗುಣ
ದಿರವಾರದೊ ಯೆನೆ ಮನದ ವಿಕಾರವುದೆಂದರಿ ಜಲದಲ್ಲಿ ||
ಸುರಚಾಪಂ ಬಿಂಬಿಸೆ ಬಿಂಬಕೆ ನಿಜ
ದರಿವಿಗೆ ಬಂಧನವುಂಟೆ ಶರೀರದೊ
ಳಿರಲಾತ್ಮಗೆ ಭವಮರಣೋಭಯ ಕರ್ಮಂಗಳ ಗುಣವೆಲ್ಲ || ೧೫ ||

ಅಡಿಪಾಡಿನ ಫಲದೊಳು ರಸವುಲ್ಲದೆ
ಮಿಡಿಗಳೊಳುಂಟೆ ತನುವಿಗಾತ್ಮಕನಿಂ
ನಡೆ ನುಡಿಯಲ್ಲದೆ ಲತೆಯುಂ ಸಾಗಿಸಿದುರು ಶಾಖೆಗಳಂತೆ ||
ಒಡಲಸುಗಳ ಬಗೆ ಬಡವಂಗಾಳಾ
ಗಡಿಯಿಡಲೇತಕಖಿಳರಿಂ ಬಾಯಂ
ಪೊಡೆಯಿಸಿ ಕೊಂಬುದಕೀ ತನುಗುಣವಿಡಿದಿರೆ ಭವಬಂಧನವು || ೧೬ ||

ಜಲವುಂ ತುಂಬಿದರಾರು ಬಲಿಯಲಾ
ಜಲವುಂ ಕೊಂಡವರಾರೆಲೆ ತೆಂಗಿನ
ಜಲವಳಿಯಲು ಘೃತವೊದಗಿದವೊಲು ಮನವಂಬ್ರಹ್ಮದೊಳರಿದು ||
ವಿಲಯವ ಮಾಡಲು ಕಾಯಕರಂಡದೊ
ಳುಲಿವ ಕರಣಸಂಕುಳವಳಿದಾತ್ಮನೆ
ನೆಲೆಗೆಟ್ಟನುಪಮ ಸಚ್ಚಿದ್ರೂಪ ಪರಾತ್ಮಕನಾಗಿಹನು || ೧೭ ||

ಆದೊಡೆ ಸಂಸಾರಾಸಕ್ತಂ ತಾ
ನಾದ ಚಿದಾಭಾಸನು ನಿಜಪರಮನ
ವೇದ ವಿಚಾರಣದಿಂ ಮುನ್ನವೆ ತಿಳಿಯದೆ ಮರೆಹಾಗಿರಲು ||
ಇದೆ ಚಿದಾತ್ಮ ಪ್ರಶ್ನೆಯದೊಂದಿನ
ವಾದರದಿಂ ಬರೆ ಪರಮನದೆ ರುದ್ರ
ನಾದಂ ಕಾಣಿಸನೆಂಬಜ್ಞಾನಾವರಣನದೆನಿಸುವನೆ || ೧೮ ||

ಸತಿಬಾಂಧವ ವಿತ್ತಾತ್ಮವನಿ ಮುಖ್ಯಮ
ಹಿತದೃಶ್ಯ ಚೇತನಾ ದುಃಖಾತ್ಮಂ
ವಿತತಾಶುದ್ಧಾನಿತ್ಯಾಸತ್ಯೋದಯ ಶಾರೀರಮಿದು ||
ಜಿತಸಂಸಾರಿ ನಿರೂಢಾನಂದಾ
ನ್ವಿತ ಸಚ್ಚಿದ್ರೂಪಾತ್ಮಕ ಸತತೋ
ದಿತ ಸಮ್ಯಕ್ ಜ್ಞಾನಿಗೆ ಮರೆವರಿವುಗಳೆಲ್ಲಿಯವೆಲೆ ಜಡನೆ || ೧೯ ||

ಸುಲಲಿತಕರ್ಮಾಧಿಪನಾ ಕರ್ಮಜ
ಫಲಭೋಕ್ತೃವದಾಸೆಂದು ಬಗೆದು ದು
ರ್ಮಲವಪುರಭಿಮಾನದೆ ವಿಕ್ಷೇಪಕನೆನಿಸಿ ಪರಾತ್ಮಕನು ||
ಸುಲಭಾಸ್ತಿತ್ವವ ಪೇಳ್ವಾಚಾರ್ಯಾ
ಮಲವಾಕ್ಯ ಶ್ರದ್ಧೆಯೊಳು ಪರಾತ್ಮಂ
ನೆಲೆಯೆಂದರಿದ ಪರೋಕ್ಷಜ್ಞಾನಿಯೆನಿಸಿದನಿದೇಂ ನಿಜಮೆ || ೨೦ ||

ಉಪದೇಶಿಸೆನೆ ಮೊದಲೊಳಾ ದೇಶಿಕ
ನುಪದೇಶದೊಳಾಂ ಬ್ರಹ್ಮಾತ್ಮಕ ನೆಂ
ಬಪರೋಕ್ಷ ಜ್ಞಾನದಿನಾತ್ಮಕ ಸಾಕ್ಷಾತ್ಕೃತದಿಂ ಮೇಲೆ ||
ವಪುರಭಿಮಾನಾಹಂಕೃತಿ ಕರ್ಮಾ
ಧಿಪ ಫಲಭೋಕ್ತೃಪರೋದಯನೆಂಬೀ
ವಿಪರೀತದ ಜೀವನ ಗುಣಶೋಕ ನಿವೃತ್ತಿಯದಾಗಿಹೆನು || ೨೧ ||

ಬಂದು ಪಲವು ಜಲ ನೀರೆ ನದಿ ನಾಮ
ಬಂದುಂ ಭವಭವದೊಳ್ ಸಂದೆಗ ವಳಿ
ದಿಂದು ಪರಮನಾಮಂ ಸೊಣಗಗೆ ಘನನಾಮಂ ಬಂದಂತೆ ||
ಪಿಂದೆ ತಪಃಫಲದಿಂ ನರಪತಿಯಾ
ಗಿಂದುದಿಸಿದೆನೆಂದರಿದುಂ ಧರ್ಮವ
ನೊಂದನೆ ಮಾಡದಿರಲು ನಿಃಫಲಮೆಂಬುದು ಸಟೆಯೊನಿ ಜವೊ || ೨೨ ||

ನಿಶ್ಮಿಸಿ ಕಡವರ ಕೊಂದಂ ಕುರುಹಂ
ನಟ್ಟಂತೆಯೆ ಮರೆಸುಡಿಗಾಸ್ಪದ ಮಾ
ಗಿಟ್ಟುದು ಗುರುವಾಕ್ಯಂ ಮಾಡಲು ತಕ್ಕುಪಕೃತ್ಯಗಳೆಲ್ಲ ||
ನೆಟ್ಟನೆ ಮಾಡಲ್ಪಟ್ಟತ್ತೈದ
ಲ್ಪಟ್ಟೀ ಫಲಾದಿಗಳೈದಿದುದನರಿ
ದಿಟ್ಟು ನಿರಂಕುಶ ತುಷ್ಟಿಯ ನಿಜ ಪರಿತುಷ್ಟಿಯೊಳಿರುತಿಹನು. || ೨೩ ||

ಜ್ಞಾನವನರಿದು ಪರೋಕ್ಷದ ತನ್ನ
ಜ್ಞಾನದೆ ತೋರುವ ಮಿಥ್ಯಾರ್ಥಮನ
ಜ್ಞಾನವ ಮರೆದು ನಿಜ ಜ್ಞಾನದೆ ತೋರುವ ಸತ್ಯಾರ್ಥವನು ||
ಹೀನಜ್ಞಾನ ತ್ರಿವಿಧವ ಸೋಂಕದ
ಮಾನಿತ ನಿಜಮೋಕ್ಷಾ ಕಾಂಕ್ಷಿತನೊಳು
ಜ್ಞಾನಾಜ್ಞಾನೇಹಾಮುತ್ರೈಕಫಲಾನುಭವಗಳಿಲ್ಲ || ೨೪ ||

ಅಹುದಹುದಂತಾದೊಡಮೀ ಜೀವಂ
ಬಹುವಿಧಕರ್ಮದೊಳಂ ಪುದುಗಿರುತಿ
ರ್ದೆಹಗಾ ಕರ್ಮಮನಳಿದಾನೇ ಪರಮಾತ್ಮಕ ನೆಂಬರಿವಂ ||
ವಹಿಸುತ್ತಿದಹಂ ಭಾವವ ಮೀರಿದ
ಸಹಜ ವಿಮೋಕ್ಷಾಕಾಂಕ್ಷೆಯ ತವಕಮ
ದೆಹಗಾದುದು ಮತ್ತಿವಗೆಲೆ ಸಚ್ಚಿದ್ರೂಪ ವಿಚಾರಿಸಲು || ೨೫ ||

ಜ್ವಲನಂ ರವಿಕಾಂತದೊಳಿಲ್ಲದಿರಲ್
ಜ್ವಲಿಸುವ ಪರಿ ಎಂತೈ ಗುರುವಿಂ ಚಿತ್
ಕಲೆ ಸಂಜನಿಸುತವಿದ್ಯಾರಣ್ಯವ ದಹಿಸಿಯೆ ಮತ್ತರಿವಿಂ ||
ತಿಲಮಥನದೆ ಪಿಣ್ಯಾಕಂ ಬೇರ್ಪಾ
ದೊಲು ತಾಂ ತನು ಕರಣೇಂದ್ರಿಯವಳಿದ
ತೈಲಘುತರ ಬ್ರಹ್ಮಾತ್ಮಕನಾಗಿ ವಿರಾಜಿಸುತಿಹನೊಲಿದು || ೨೬ ||

ದೀಪಂ ಕಾಣದ ನೆಲೆಯೊಳು ತಮವಿಹು
ದಾಪರಿಯಿಂ ದೇಶಿಕನುಪದೇಶವ
ನೆ ಪಡೆದೊಡಮೇನು ವಾಯುಪ್ರಾಣವು ನಳಿದಲ್ಲದೆ ಬಮ್ಮ ||
ರೂಪಾಗಲು ಬಾರದು ನೀನರಿದು ನಿ
ರೂಪಿಸಿ ಪುಸಿಲೆನಲಮ್ಮನು ಮಿಥ್ಯಾ
ಲಾಪ ಮಿವಲ್ಲದೆ ನಿಜವುಲ್ಲಾನರಿಯೆನುತತ್ಕುಹಕವನು || ೨೭ ||

ಐವತ್ತುಂ ರುದ್ರರ ಶಕ್ತಿಗಳಂ
ಭಾವಿಸೆ ಲೋಮಾಲೋಮದೊಳೆಣಿಸಲ್
ತ್ರಿವಿಧವ ಮಾಯಾಖ್ಯಾಷ್ಟಾಕ್ಷರವನು ಕೂಡಲು ನೂರೆಂಟು ||
ಕೋವಿದ ರುದ್ರರ ಚಿದ್ರುದ್ರಾಕ್ಷೆಗ
ಳೋವಿದ ಭಕ್ತಿಗಳೇ ಚಿದ್ಗ್ರಂಥಿ ಗ
ಳೀವಿಧದಿಂ ಹಂಸನ ಜಪವಳಿದುಂ ಸೋಹಮ್ಮೆನಿಸಿಹುದು || ೨೮ ||

ಚಂದ್ರಾದಿತ್ಯರ ತುಳಿದು ಸುನಾಳದೊ
ಳಂ ದೃಢ ಶಕ್ತಿ ಮನೋಯೋಗದಿನಜ
ರಂಧ್ರ ಸಹಸ್ರದಳಾಂಬುಜಕೆರಗಿ ಸುನಾದಭ್ರಮರನನು ||
ಸಾಂದ್ರ ಮಹಾವಾಸನ ದಿವ್ಯಾಮೃತ
ಮಂ ಧೃವದಿಂ ಸೇವಿಸಿ ಜೀವನೆ ನಿ
ಸ್ತಂದ್ರ ಪರಾತ್ಮಕನಾಗಿ ತ್ರಿಸಂಧಾನಗಳೊಂದಾಗಿಹನು || ೨೯ ||

ಪಸಿದ ನರಂ ದಣಿಯುಂಡು ಬಳಿಕನಾಂ
ಪಸಿದೆನೆನಲು ಮಾಯಾ ಗುಣಮಲ್ಲದೆ
ಎಸೆವ ವಿಮೋಕ್ಷಮನೈದಿ ಮರಳಿ ಬಂಧನವಡೆವರೆ ಜೀವಂ ||
ಅಸದೃಶ ಪರಮಾತ್ಮಕನಾಗಿಯೆ ಸಮ
ರಸಮಾಗಿರಬೇಕಲ್ಲದೆ ಯಂತರ
ನಸಮ ವಿಚಾರಕ್ಕಿಳಿದಭ್ಯಾಸಕ್ಕೆ ಬರಬಹುದೆ ಮರುಳೆ || ೩೦ ||

ಸುವಿಚಾರಮನರಿಯಂತರ್ಬಾಹ್ಯದ
ಸುವಿಚಾರಕ್ಕೆಡೆಯಿಡದೆ ವಿಚಾರಿಸು
ವ ವಿಚಾರಮೆ ತಾನಾಗಿರ್ಪುದ ನರಿಯದರಿದು ಮರೆದಿರದು ||
ತವೆ ಮುಸುಕವ ಮರಹಿನಿತಿಲ್ಲಾದ್ಯಂ
ತವನೊಳಕೊಂಡುರೆ ಪರಮಾತ್ಮನ ಮುಂ
ದೆವೆಯಲುಗದೆ ಪ್ರತಿಬಿಂಬಿಸೆ ಸಂಧಾನಮದಾಗಿರುತಿಹನು || ೩೧ ||

ಜಲದ ವಿಕಾರ ಪವನ ನಿಂದಲ್ಲದೆ
ಜಲದ ಸಹಜವರಿಸದು ತನುಗುಣಗಳ
ನಿಲನಿಂದಲ್ಲದೆ ನಿಜಮಾಗದು ಬೇರೊಂದು ಗುಣವ ತೋರಿ ||
ಸಲೆ ಬಿಸಿಲಂಬಿಂ ಮಂಜಿನ ಗುರಿಯಂ
ಬಲಿದೆಚ್ಚಂತೈ ಜೀವನ ಪರಮರೆನಲು
ಬೇಡೀಕ್ಷಿಸಿ ಬೆರೆವೊಡೆ ಮೂರ್ತಿಇದಲ್ತು ನಿಜೋದಯವು || ೩೨ ||

ಪರಶಿವ ಚೈತನ್ಯಮೆ ಜೀವರ ಸತ್
ಪರಮು ಶಿರೋಮಧ್ಯಕೆ ಬಿಂಬಿಸಲದು
ಪರಮಾತ್ಮಂ ಭ್ರೂಮಧ್ಯಕೆ ಬಿಂಬಿಸಲಂತರ ನಾ ಹೃದಯ ||
ಸರಸಿರುಹಮಧ್ಯಕೆ ಬಿಂಬಿಸಲ್ಕದು
ಕರಣಸಮನ್ವಿತಜೀವಂ ತ್ರಿವಿಧಾ
ತ್ಮರ ನಿಜಮೊಂದರ ಸಾರ್ವಂ ಪಲವಾಲಯದಲ್ಲಿರ್ಪಂತೆ || ೩೩ ||

ಪರಶಿವನೆನೆ ಪರಮಾತ್ಮಕನೆನ ಲೊಂ
ದಿರವ ಮಳಿನ ಪರಮಾತ್ಮನೆ ಸೂಕ್ಷ್ಮದಿ
ನಿರುತಂ ನಿವಾರದ ಮುಳ್ಳಿನೊಲಣುಮಯ ಪೀತ ನೀಲಾಂಬು ||
ಧರ ಮಧ್ಯಸ್ಥಿತವು ವಿದ್ಯುಲ್ಲೇಖಾ
ಸ್ಫುರಣದಹಾಂಗ ಗ್ರಮನುಳ್ಳಗ್ನಿಯ
ವರ ಮಸ್ತಕ ವಿಹುದಾ ಮಸ್ತಕದಲ್ಲಿರ್ಪನನಾರತವು || || ೩೪ ||

ಆತ್ಮೋsಹ ಮೆಂಬಾತ್ಮಜ್ಞಾನಿಗ
ಳಾತ್ಮನ ನಿಜವುಂ ಕಂಡವರುಂಟೆ ಮ
ಹಾತ್ಮ ಜ್ಞಾತೋsಹ ಮ್ಮೆಂಬುದಕ್ಕೇಂ ಶ್ರುತಿಪರಿ ಮಾಣುಂಟೆ ||
ಆತ್ಮನ ತನುವಿದರಿಯಲು ಬಹುದೇ ನಿ
ಜಾತ್ಮಂ ಪ್ರಾಣೇಶ್ವರ ಲಿಂಗಂ ಪರ
ಮಾತ್ಮಂ ತತ್ವಮಸೀತಿ ಸುವಾಕ್ಯೈಕಗೋಚರನನುಪಮನು || ೩೫ ||

ಜ್ಞಾನಂ ಜ್ಞಾತೃವ ನುಂಗಿ ಜ್ಞೇಯಂ
ಜ್ಞಾನವನೆ ನುಂಗಿ ಜ್ಞಾತೃಜ್ಞೇಯಂ
ಜ್ಞಾನಶ್ರವಣ ಮನನವಿನಿಧಿಧ್ಯಾಸನವನುಮಿತ್ರಯವ ||
ಜ್ಞಾನದೊಳೇಕೀಭವಿಸಿಯೆ ಶಿವ ಸಂ
ಧಾನವ ಮಾಡುತೆ ಪರಮಾಮೃತಮುಂ
ಪಾನಂಗೊಳೆ ಪ್ರತಿಬಿಂಬಧೊಲಿರ್ದುದು ಜೀವಪರಮೈಕ್ಯಂ || ೩೬ ||

ತನುವಿಡಿದರಿದುದೆ ಮಾಯೆಗೊಳಗು ಜೀ
ವನವಿಡಿದರಿದುದೆ ಭವಕೊಳಗೀ ಜೀ
ವನ ತನುಯುಗದಳಿವುಳಿವನರಿದು ತನುಜೀವರ ಬೆಸುಗೆಯನು ||
ಇನಿಗೋಲಿನ ಸುಧೆಯಂ ಕೊಂಡಾಸುಧೆ
ಯನು ಕಳೆವಂ ತರಿದುಂ ಮರೆಯದೆ ಚಿ
ದ್ಘನ ಲಿಂಗದೊಳೊಡಗೂಡುವುದಮಲ ಮಹಾಯೋಗಂ ತಿಳಿಯೆ || ೩೭ ||

ತನ್ನಂ ತಾನರಿವುದೆ ಪರಮಾತ್ಮಕ
ನುನ್ನತ ಯೋಗಂ ಮರವೆಯೆ ಮಾಯೆಯ
ಗನ್ನದ ಸಂಗಂ ತತ್ಪರಮಾತ್ಮನೆ ಕಮಲಜರಂಧ್ರದೊಳು ||
ಸನ್ನುತ ನಿಷ್ಕಲ ಗುರು ಭ್ರೂಮಧ್ಯದೊ
ಳಂ ನಿಷ್ಕಲ ಸಕಲಾತ್ಮಕ ಲಿಂಗಂ
ಹೃನ್ನಳಿನದೊಳಿರೆ ಸಾಕಲ್ಯಾತ್ಮಕ ಜಂಗಮವಾಗಿಹನು || ೩೮ ||

ತನುಮದಮಳಿದಲ್ಲದೆ ಮಾಯಾಮದ
ಕನಲದು ಮಾಯಾಮದವಳಿದಲ್ಲದೆ
ಕೊನದಾಲುವ ಭವವಳಿಯದು ಭವವಳಿದಲ್ಲದೆ ಲಿಂಗದೊಳು ||
ಘನಸಮರಸವಳವಡದಳವಡದಿರ
ಲನಘ ಸುಖಂ ದೊರಕೊಳ್ಳದು ಸುಖಮಂ
ಮನವೈದಿದ ಬಳಿಕೆಳಸದೆ ಪಿಂದಕಿಹುದೆ ಶಿವಯೋಗವಲಾ || ೩೯ ||

ಅಮಮ ಚಿದಾದಿತ್ಯ ಸ್ಫುರಣೆಗೆ ಷ
ಟ್ಕಮಲಂ ವಿಕಚನ ಮಾಗೂರ್ಧಮುನೈ
ದಿ ಮಹಾಪ್ರಭೆಯಂ ಕಂಡಷ್ಟಾಂಗಜ್ಞಾನದೊಳಂ ಪಿಡಿದು ||
ಸ್ವಮಹಿತ ಜೀವ ಪರಮರೊಂದಾಗಿ
ಭ್ರಮಣೆಯನಳಿದನುಪಮಸುಖದೊಳು ವಿ
ಶ್ರಮಿಸಲು ಕೂಡಿದ ಸಂಗಂ ಪುನರಪಿ ತುರ್ಯಕ್ಕೇರುವುದೇ || ೪೦ ||

ಕ್ಷಮೆ ಧೃತಿ ಸತ್ಯಾಸ್ತೇಯ ದಯಾ ಶೌ
ಚ ಮಿತಾಹಾರ ಬ್ರಹ್ಮಸುಚರ್ಯ
ಭ್ರಮಣ ಹೃಷೀಕೋತ್ಪಾತ ವಿಜಯ ಕುಹಕಕೃತ್ಯಗಾಹಿಂಸಾ ||
ಶಮ ದಮ ಶಾಂತಿಕ ಧೈರ್ಯಂ ದೃಢ ವಿ
ಶ್ರಮಣಾರ್ಜವನಿಷ್ಠಾದಿಗಳುಳ್ಳನು
ಪಮ ಯಮ ಯೋಗಮೆ ಶಿವತತ್ವೈಕ್ಯಾನುಭವಕೆ ಕಾರಣವು || ೪೧ ||

ಚತುರಸ್ರಾವನಿ ಭೂತಂ ಪೀತಂ
ಚತುರ್ದಳ ಚತುರಕ್ಷರ ನ ಪ್ರಣವಂ
ಚತುರಾನನನಧಿದೇವತೆಯಹ ಮೂಲಾಧಾರವ ಒಲಿದು ||
ನುತ ಮರುತನನಾಕುಂಚಿಸಿ ಮೂಲ
ಸ್ಥಿತವಹ್ನಿಯನೆಬ್ಬಿಸಿ ಚಿತ್ತರಸವ
ಚಿತ ಧೂಪವ ಧೂಪಿಸಿ ಯಾಚಾರಮನರ್ಚಿಸುವುದೆ ಯಮವು || ೪೨ ||

ಸುತಪವಾಸ್ತಿಕ್ಯೈಶ್ವರ ಪೂಜನ
ಮತಿಸಮ್ಮುದ ಸಿದ್ಧಾಂತ ಶ್ರವಣ
ವ್ರತದಾನಾತ್ಯಭಿಮಾನ ವಿರತಿ ಗುರುಪದಸೇವಾನಂದ ||
ಸ್ಥಿತಿ ಮಂತ್ರ ಸ್ಮರಣಾನ್ಯಸ್ತ್ರೀ ವಿಮು
ಖತೆ ಸಜ್ಜನ ಸಂಸರ್ಗ ನಿರೀಶ್ವರ
ಮತ ವಿನಿರಾಕರಣೆಗಳುಳ್ಳುದೆ ನಿಯಮಾಂಗಕ್ರಮವರಿಯೆ || ೪೩ ||

ಪೂತ ಧನುರ್ಗತಿ ಪುಷ್ಕರ ಭೂತ
ಶ್ವೇತ ಷಡಕ್ಷರ ಷಡ್ದಳ ಪೂರ್ಣ * ಸು
ಪೀತಾಂಬರನಧಿದೇವತೆಯಹ ಮೇಹನಮಂಡಿತೆ ಬಲಿದು ||
ಪ್ರೀತಿಯ ಮತಿಮಥನಾಕುಂಚನದಿಂ
ರೇತವ ನೂರ್ಧ್ವಮನೈದಿಸೆ ಕೃತಕ
ಸ್ಫೀತ ಸುಬುದ್ಧಿಯೊಳಂ ಗುರುಲಿಂಗಮನರ್ಚಿಸುವುದೆ ನಿಯಮಂ || ೪೪ ||

ಭಾಸುರ ವಾಮಾಂಘ್ರಿಯ ಮಡಹಂ ಬಿಡ
ದಾ ಶಿಶ್ನೆಯೊಳಿಟ್ಟೊಲವಿಂ ದಕ್ಷಿಣ
ದಾ ಸುಪದದ ಮಡಹಂ ಮೇಲಿಳಿಹಿಯುಮರ್ಚಿಸಿ ಲಿಂಗದೊಳು ||
ನಾಸಾಗ್ರದದೃಷ್ಟಿಯನನುಗೊಳಿಸಿ ನಿ
ವಾಸಂಗೆಯ್ಯಲು ತನುರುಜೆಯಳಿದು
ಲ್ಲಾಸವ ನೀವರೆ ಸಿದ್ಧ ಮುಖಾಸನ ಯೋಗವೆ ಕಾರಣವು || ೪೫ ||

ಬಳಿಕ ತ್ರಿಕೋಣಧನಂಜಯಭೂತಾ
ಮಳ ಶೋಣಿತ ದಶದಳ ದಶವರ್ಣೋ
ಜ್ವಲಿತ ಶಿಕಾರ ಸುರುದ್ರನೆಯಧಿದೇವತೆಯಹನಾಭಿಯೊಳು ||
ಸುಳಿಸುಳಿಗೊಂಡು ನುಸುಳುತಿಹ ಮರುತಂ
ಗಳ ಬಂಧಿಸಿ ಕುಂಭಿಸಿ ಕುಂಭಿಸಿ ನಿ
ಶ್ಚಳ ಸಿದ್ಧಾಸನದಿಂ ಶಿವಲಿಂಗಮನರ್ಚಿಪುದಾಸನವು || ೪೬ ||

---

* ಪಾ. ಮ

ಅಹುದಹುದಾ ಮೂಲಾಧಾರದ ಮೇ
ಲಿಹುದು ನವಾಂಗುಲದಿಂ ಚತುರಂಗುಲ
ವಹ ವಿಸ್ತಾರದ ಕೃತವಾಕಾಂಡಾತ್ಮಕ ನಾಡಿಯ ಕಂದಂ ||
ಮಹಿತ ಸಮಧ್ಯಮೆ ನಾಭಿಕಳೋದಯ
ಸಹಕಂದದಿ ನೆರಡಂಗುಲದಿಂ ಕೆಳ
ಗಿಹುದಾ ಕುಂಡಲಿನೀಸ್ಥಾನಕಮಷ್ಟಪ್ರಕೃತಿಯರೂಪಂ || ೪೭ ||

ನಾಡಿಯ ಕಂದದ ಮಧ್ಯಸುಷುಮ್ನೆಯ
ನಾಡಿದ್ವಾರವ ತನ್ನಯ ಮುಖದಿಂ
ಜೋಡಿಸಿ ಮುಚ್ಚಿಮಿರಸಿ ನಿದ್ರಿತವಾಗಿಹುದದರಿಂ ಮೇಲೆ
ನೋಡಲು ಪೂರ್ವ ಹೃದಯಮಿಹುದಲ್ಲಿಯೆ
ಗೂಡಾಗಿಹನಾತ್ಮಕನಣುರೂಪಿಂ
ನಾಡೆ ಮನೋಗುಣದಿಂ ಸಂಚಾರಿಸುತಿಹನನಿಶಂ ಬಿಡದೆ || ೪೮ ||

ಸಲೆ ನಾಡಿಯ ಕಂದದೆ ಪೊರಮಟ್ಟಾ
ಬಲೆಯೊಳಗೆ ಮೇಲೆಕೆಳಗೆಡ ಬಲಕೆ
ಯ್ದುಲಿವ ಮನಃ ಪ್ರಾಣಾನಿಲಸಂಚಾರಕೆ ಮಾರ್ಗಗಳಾಗಿ ||
ಬಲಿದೆಪ್ಪತ್ತೆರಡುಂ ಸಾವಿರದೊಳ
ಗೊಲಿದು ಚತುರ್ದಶ ನಾಡಿಗಳಿಹ ವಿವ
ನಲಸದೆ ಶುದ್ಧಂ ಗೆಯ್ದುಂ ಷೋಡಶಮಾತ್ರಾದಿಕ ನಿಯಮಂ || ೪೯ ||

ತನು ಲಘು ದೀಪನ ಜಠರಾನಲವ
ರ್ಧನ ಶೋಷಕ ಶೋಷಕ ಮುದಕರ್ಕರಿ
ಘನ ಶಾಂಕರಿ ಭಕ್ಷಿಣಿ ಕರಿಕರಸುಳಿಕರಣಿ ಸಮುದ್ಧರಣೆ ||
ಇನ ಭೇದನ * ಸೀತ್ಕಾರ್ಯರ್ಜಾಯಿಭು
ಜನಿಸೀಕಳಿಭಸ್ತ್ರಿಕೆ ವಿಭ್ರಮರಿತಿ
ಹನಿಮೂರ್ಛಾ ಕೇವಲ ರೇಚಕಪೂರಕ ಕುಂಭಕಕರಣಿ || ೫೦ ||

* ಪಾ— ಸೀತ್ಕಾಯುಜಾರ್

ಮೂಲ ವಿಬಂಧಂ ಉಡ್ಯಾಣಾಯತ
ಜಾಲಂಧರ ಬಂಧಂ ಬಂಧತ್ರಯ
ಲೋಲ ಪ್ರಾಕೃತವೈಕೃತಯುಗ ರೇಚಕಪೂರಕಭಾವ ||
ಲಾಲಿತ ಕುಂಭಕ ಶೂನ್ಯೋತ್ಕರ್ಷಕ
ಮೇಲ ಪಕರ್ಷೋತ್ಕ್ರಾಂತಿಗಳೆಂಬೀ
ಕೀಲಿತ ಸಪ್ತವಿಧ ಪ್ರಾಣಾಯಾಮಾಂಗದ ಲಕ್ಷಣದಿಂ || ೫೧ ||

ನಡುನಾಡಿಯ ಕಂದ ಸುಷುಮ್ನೆಯ ನಡು
ವಿಡಿದು ಮನೋನಿಲ ವಹ್ನಿಗಳಂ ಬಿಡ
ದೊಡನಾ ಬ್ರಹ್ಮಾದಿ ಗ್ರಂಥಿಗಳಂ ಪಶ್ಚಿಮ ಮಾರ್ಗದೊಳು ||
ನಡೆದು ಗಚ್ಛಿಸಿ ಶಿರೋಮಧ್ಯಸ್ಥಾ
ಜಡ ಚಂದ್ರಾಮೃತಮಂ ಸೇವಿಸುತವೆ
ಸಡಗರ ಸುಸುಖದಲಿರ್ಪಂ ಪ್ರಾಣಾಯಾಮವೆ ಕಾರಣವು || ೫೨ ||

ಪಟುತರ ಷಟ್ಕೋಣಾನಿಲ ಭೂತ
ಸ್ಫಟಿಕ ದ್ವಾದಶದಳ ಕಾದ್ಯಕ್ಷರ
ಚಟುಲ ವ ಕಾರೇಶ್ವರನಧಿದೇವತೆಯಹ ಹೃತ್ಕಮಲವನು ||
ದಿಟದಿಂದರಿದೆಂಟೆಸಳೊಳ್ ಭ್ರಮಿಸುವ
ಕುಟಿಲಾತ್ಮನನು ಚತುರ್ದಳದಲ್ಲಿಹ
ಸ್ಫಟಲಿಂಗದೊಳು ಬೆರಸಿ ಸುಖಮಿರ್ಪುದೆ ಪ್ರಾಣಾಯಾಮು || ೫೩ ||

ಅಂತಿರಲದು ವೈರಾಗ್ಯ ಚಿದಗ್ನಿಯೊ
ಳಂತವೆ ತತ್ತದ್ದುರ್ವಿಷಯಾದಿಕ
ಕಾಂತಾರವ ದಹಿಸಿಯೆ ತನು ಲಘುವೆನಿಸಿಯೆ ನಿಜ ಚಿತ್ತವನು ||
ಅಂತರ್ಮುಖಕೆಯ್ದಿಸಿ ಬಾಹ್ಯದ ಕ
ರ್ಮಾಂತರಕೆರಗದೆ ಪರಶಿವಯೋಗದ
ಸಂತೋಷಮನೊಲಿದೀವ ಪ್ರತ್ಯಾಹಾರಮೆ ಕಾರಣವು || ೫೪ ||

ನೀಲಸುವೃತ್ತ ನಭೋಭೂತಾಯತ
ಲಾಲಿತ ಷೋಡಶ ದಳ ಮೂಲಸ್ವರ
ಲೋಲ ಯಕಾರ ಸದಾಶಿವನಧಿದೇವತೆಯ:ಹ ಕಂಧರವ ||
ಲೀಲೆಯೊಳರಿದು ಮರುತ್ಕರಣೇಂದ್ರಿಯ
ಜಾಲಮನಪಹರಿಸುತೆ ಪ್ರಸಾದದ
ಲೋಲುಪ್ತಿಯೊಳಿಹುದೆ ಪ್ರತ್ಯಾಹಾರಕ್ರಮವರಿ ಜಡನೆ || ೫೫ ||

ಶ್ರೀ ಪರಮೋದಯಮಯ ಕೇಳಿನ್ನೊಂ
ದಾ ಪರಶಿವನ ಶುಭಾಶ್ರಯದಲ್ಲಿ
ಸ್ಥಾಪನನಮಂ ಮಾಡಿಯೆ ನಿಜಚಿತ್ತಮನಾಪರ ವಸ್ತುವನು ||
ದೀಪನದಿಂ ಧಾರಣಗೆಯ್ಯಲ್ಬಹು
ಪಾಪಕ್ಷಯಮಂ ಮಾಡಿ ಸದೋದಿತ
ರೂಪಾಂಗನೆಯಂ ಕೈಗೂಡಿಪ ಧಾರಣಮೇ ಕಾರಣವು || ೫೬ ||

ತ್ರಾಣ ಮನೋಭೂತ ವಿಚಿತ್ರೋದಯ
ಮಾಣಿಕ್ಯ ದ್ವಿದಳ ದ್ವಿವಿಧಾಕ್ಷರ
ಪ್ರಾಣೋಂ ಕಾರ ಶ್ರೀಗುರ್ವಧಿದೈವತ ಶೃಂಗಾಟಕದ ||
ತಾಣದೊಳಾ ದಿವರಾತ್ರಿಯ ಶಂಕೆಯ
ಕೇಣಮನಳಿದ ಚಿದಾಸನದಲ್ಲಿ ಧು
ರೀಣ ಮಹಾಘನಲಿಂಗಮ ನನುಗೊಳಿಸಿರ್ಪುದೆ ಧಾರಣವು || ೫೭ ||

ಸಮತೆ ಸಗುಣ ನಿರ್ಗುಣ ರೂಪಕದಿಂ
ಚಿತ್ತವ ವಿಷಯಾಂತರಕೆರಗಿಸದೆ ನಿ
ಜೋತ್ತಮ ಪರಶಿವ ಚಿಂತಾಂಬುಧಿಯೊಳು ಮುಳುಗಿ ವಿನಿಶ್ಚಲದಿ ||
ಅತ್ತಿತ್ತಂ ತೊಲಗದೆ ನೆಲೆಸಿರಲೀ
ಸುತ್ತಿದ ಸಂಸೃತಿ ಪಾಶಮಳಿದು ಸಮು
ದಾತ್ತಾನಂದಮ ನೀವಮಲ ಧ್ಯಾನಾಂಗಮೆ ಕಾರಣವು || ೫೮ ||

ವರ್ಣಸಹಸ್ರದಳಾಬ್ಜ ಜ್ಯೋತಿ
ರ್ವರ್ಣಾಕ್ಷರ ರೂಪಕನಾದಾಮಲ
ಪೂರ್ಣಾಂತರನಧಿದೇನತೆಯಪ್ಪಜರಂಧ್ರದ ಶಶಿಕಾಂತ ||
ವರ್ಣದ ಮಂಟಪದೊಳು ಚಂದ್ರಮಕಳೆ
ಪೂರ್ಣಿಸ ಲಳಿವೃತ್ತವ ಸೇವಿಸಿ ಸಂ
ಕೀರ್ಣ ಸುಚಿತ್ಪಿಂಡಸ್ಥ ಬ್ರಹ್ಮವ ಚಿಂತಿಪುದೇ ಧ್ಯಾನಂ ||೭೯||

ಜ್ಞಾತಾಜ್ಞಾತಾದಿಗಳಿಂ ಧ್ಯೇಯ ವು
ನೀತ ಬ್ರಹ್ಮದೊಳನುವಿಂ ಚಿತ್ತಮ
ನೋತು ವಿನಿಶ್ಚಲ ರೂಪಕಮಂ ಮಾಡಿಯೆ ತದ್ಬ್ರಹ್ಮವನು ||
ಮಾತಿಗೆ ತರದೀ ಸೋಹಂ ಭಾವವ
ನೇತಿಗಳೆದು ಸಮ್ಯಕ್‌ಜ್ಞಾನದ ನಿ
ಷ್ಠಾತುರದಲ್ಲಿರ್ಪನುಪಮ ದಿವ್ಯ ಸಮಾಧಿಯೆ ಕಾರಣವು ||೮೦||

ತ್ರಿದಳ ಮಹಾಜ್ಯೋತಿರ್ವರ್ಣಾದಿಕ
ವಿದಿತಾನಕ್ಷರ ರೂಪಕನಾದ ವಿ
ವಿಧ ಪರಮಾತ್ಮಕನಧಿದೇವತೆಯಪ್ಪ ಶಿಖಾಸ್ಥಾನದೊಳು ||
ಒದಗಿದ ಭೂರಿ ಸುಖಾಶ್ರಯವಹ ಲಿಂ
ಗದೊಳುಭಯಾತ್ಮವಳಿದು ಶಿಖಿಕರ್ಪೂ
ರದ ಯೋಗದ ತೆರದಿಂದಿಹುದಿದುವೆ ಸಮಾಧಿಯ ಲಕ್ಷಣವು ||೮೧||

ಲಯ ಹಠರಾಜ ವಿಮಂತ್ರಾದಿಗಳಿಂ
ಪ್ರಯುತ ಪ್ರಣವ ಮಹಾ ಹಂಸಾದ್ಯ
ನ್ವಯ ಮಂತ್ರಗಳಿಂ ದಶನಾದಂ ದಶಬಿಂದು ಸುಲಕ್ಷಣದಿ ||
ಸ್ವಯ ದುರ್ಗಮ ಪಶ್ಚಿಮ ಮಾರ್ಗದೊಳೈ
ದಿಯೆ ಸುಶಿರೋಗತ ಪರಮಾಮೃತವಂ
ನಿಯತ ಪ್ರತ್ಯಯದಿಂ ಸೇವಿಸಿ ಪರಮಾನಂದದೊಳಿಹೆನು ||೮೨||

ಏಕ ದಳಾವೃತ ದರ್ಶನವನಾ ವಿ
ವೇಕ ಪ್ರಣವೋಚ್ಚಾರದ ಲಯ ಸು
ಶ್ಲೋಕ ಪರಬ್ರಹ್ಮವೆ ಯಧಿದೇವತೆಯಹ ಪಶ್ಚಿಮ ಚಕ್ರ ||
ಬಕಮೆ ಕವಾಟಂ ಭಾವಸ್ತಂಭಂ
ನೂಕದೆ ಮರುತನದಂ ಬಳಸಿ ಭುಗು ಭು
ಗಾಕಾರದಿ ನಳಲುವುದಲ್ಲದೆ ನಿಜ ಸಾಧ್ಯವಹುದೆ ಮರುಳೆ || ೬೩ ||

ತ್ರೈಮಂಡಲ ಲಕ್ಷತ್ರಯ ಪೂರ್ವ ಮ
ಹಾ ಮಧ್ಯಾಂತರ ಷಣ್ಮುಖಿ ಖೇಚರಿ
ಕೋಮಲದಾ ಶಾಂಭವಿ ಯುನ್ಮನಿ ಸಹಜಾವಸ್ಥಾ * ನಗಳ ||
ಸ್ತೋಮ ಗತಾಗತ ಸಂಶ್ಲಿಷ್ಟಾದಿ ನಿ
ರಾಮಯ ವಿಕ್ಷೇಪ ಸ್ವಾಲೀನ ಮ
ನೋಮಯ ವೃತ್ತ್ಯಷ್ಟಾಂಗ ಕ್ರಮುವನರಿದು ನಿಜದೊಳಗಿಹೆನು || ೬೪ ||

ವರ ದೇಹೇಂದ್ರಿಯ ವೈರಾಗ್ಯಮೆ ಯಮ
ಪರಮಾತ್ಮಾಭಿರತಿಯೆ ನಿಯಮ ಸಕಲ
ನಿರತೋದಾಸಿನವಾಸನ ಕರಣ ಜಯಮೆ ಪ್ರಾಣಾಯಾಮ ||
ಚಿರ ನಿರ್ವಿಷಯಮೆ ಪ್ರತ್ಯಾಹಾರಂ
ಕರನಿಷ್ಠೆಯೆ ಧಾರಣ ಶಿವನಾನೆಂ
ಬಿರವೆ ಧ್ಯಾನಂ ಕೇವಲ ಚಿನ್ಮಾತ್ರಮೇ ಸಮಾಧಿ ಕಣಾ || ೬೫ ||

ರಸವಾದವ ಕಲಿತೊಡೆ ಲೋಹಮೆ ಸಿ
ದ್ಧಿಸಿತಲ್ಲದೆ ರಸಸಿದ್ಧಿಯದಿಲ್ಲಾ
ಮಸಿಮರ ನಾಲ್ವಾದೃಶ್ಯಕರಣ ಯೋಗಂಗಳ ಕಲಿತೊಡೆಯು ||
ಸ್ವಶರೀರಮೆ ಸಿದ್ಧಿಸಿತಲ್ಲದೆ ಸಮ
ರಸದಿಂದಾತ್ಮಕ ಸಿದ್ಧಿಯದಿಲ್ಲ ಸ
ದೃಶ ಪರತತ್ತ್ವದ ನಿಜಮದು ಬೇರೆ ವಿಚಾರಿಸಿ ನೋಡಿದೊಡೆ || ೬೬ ||

---

* ಇದು ಸ್ವಂತ ಪಾಠ— ಓಲೆ ಮುರಿದಿದೆ,

ನೆರೆ ಕೃಷಿಯಂ ಮಾಡಿದುದುಣ್ಣದೆ ಹಸಿ
ವರವುದೆ ಕರ್ಮಸುಯೋಗದಿನಲ್ಲದೆ
ಯರಿಯಬಹುದೆ ನಿರ್ಮಲಚಿತ್ತವ ಪಚಿಸದಸಮನಕಾಣ್ಬ ||
ನಿರುಗೆಯದಾವುದೊ ಪೂಜಿಸಿ ನೆನೆಹಿಂ
ದುರೆ ಕಾಣ್ಬುದವನ ಕರ್ಮವಿದಲ್ಲದೆ
ಕುರುಹಿಂ ಭಾವ ವಿಶುದ್ಧಿಯನರಿವಾ ಪರಿಯಾವುದು ಪೇಳಾ || ೬೭ ||

ನೆರೆ ಕರ್ಮವೆ ಜೀವನವೆಂದರಿವಾ
ಗರಿವನರಿವ ನೆಲೆ ಯಾವುದೊ ಚಿನ್ನವ
ನೊರೆಯಲ್ಬಹುದಲ್ಲದೆ ಬಣ್ಣವನೊರೆಯಬಹುದೆ ಕರ್ಮವನು ||
ಉರೆ ಮಾಡಲ್ಬಹುದಲ್ಲದೆ ವಸ್ತುವ
ನರಿಯಲ್ಬಹುದೆ ಯರಿದುದ ನಳಿದುಮೇ
ಲರಿದುದನನುಗೊಳಿಸಲ್ಲದೆ ತನ್ನಿಜವಾಗಬಹುದೆ ಮರುಳೆ || ೬೮ ||

ಅಹುದಹುದರಿದೆನು ಲಿಂಗಾಂಗಿಗಳಿಗೆ
ವಿಹಿತಮಿವಲ್ತಾ ವಾಗ್ವಾದಂಗಳು
ಸಹಿತಂ ಮಥನಿಸೆ ಮಾತಿನಮಾಲೆಯೆ ಇದಲ್ಲವೇ ಆತ್ಮ ||
ನಿಹಿತಂ ಮಾಡುದೆ ನೀನಾನೆಂಬ
ಲ್ಲಿಹಿಗರಿ ನೀಂ ನಾನಾದೇ ನಲ್ಲದೆ
ಸಹಜದೊಳಾನೇ ನೀನಾಗಾಲಿಂಗಿಸಲಿಲ್ಲರಿವಿನೊಳು || ೬೯ ||

ಹರಿವಾಹಾವುರಿವಗ್ನಿಯೆನಲ್ ಪಿಡಿ
ವರಿಗೆ ಭಯಂಕರಮಹುದರಿದು ಪಿಡಿಯ
ಲುರಗನೆ ನೇವಳವಾಸ್ತಂಭನಕಾಗ್ನಿಯೆ ಚಂದನದ ಮುಡು ||
ಕರಣಂಗಳು ತುಳುಕದೆ ಘನಲಿಂಗವ
ಕರದೊಳು ಪಿಡಿಯಲು ಬಲ್ಲೊಡೆ ದೇಹಮೆ
ಪರಮ ನಿರಂಗದ ಸಂಗಮದಾಗಿಹುದಿದೆ ಧಾರಣಯೋಗಂ || ೭೦ ||

ಶಂಕಿಸಿ ನಾಡಿಯ ಸವುರ ಸುನಾಳ ದೊ
ಳಂಕಿತ ಲಿಂಗಮನರಿಯದೆ ಲಿಂಗದ
ಕಿಂಕರ ಜೀವಂ ಜೀವನ ಹಂಗಿತನು ತನುವಿನೊಳಿರ್ಪ ||
ಸೋಂಕನೆ ವಿಸ್ತರಿಸಲು ಚರಭೃತ್ಯನ
ಕಿಂಕರನೇಂ ಪಟ್ಟಕೆ ಸಲ್ವನೆ ಸಹ
ಜಾಂಕವೆ ಪಸರಕೆ ಬರಲಭಿಮಾನ ಮದಾಡುದೆನಗೆ ಕೇಳಾ || ೭೧ ||

ಘೃತದಿಂ ಪಚ್ಚಿಸೆ ಶಾಖಂ ಲವಣ ರ
ಹಿತದಿಂ ಘೃತ ಘನವೆಂನೆ ಸಪ್ಪೆಯದಾ
ಯಿತು ಲೆಕ್ಕಣಿಕೆಯ ಬೋಮಂ ಪಲವಾನಿರವಯ ಚಿತ್ರವನು ||
ಚತುರಂ ಬರೆವಲ್ಲೊಂದಾದಂತೆ ಸು
ಮತಿಯಿಂ ಕುರುಹಿಂದರಿವ ಗುಣವೆ ಬಹು
ಳತೆಯಾಗಿಯೆ ವಸ್ತುವ ಬೆರೆವಲ್ಲೇಕತ ಮಾಗಿರಬೇಕು || ೭೨ ||

ತಿಳ ಕುಸುಮದ ಯೋಗದೆ ತೈಲಕೆ ಪರಿ
ಮಳ ವೇಧಿಸಿದಂತುದಕವೆ ಬಲಿದ ಮ *
ಲಳದನೋವಾಗಿ ಸಮಸ್ತ ಪದಾರ್ಥದೊಳಂ ಬೆರೆದಿರೆ ಸವಿಯೆ ||
ವಿಳಸದ್ರುಚಿಯಾಗಿಯೆ ರೂಹಿಗೆ ತಾ
ನಳವಡದಂತಿಷ್ಟಂ ಪ್ರಾಣವು ದಾ
ಗಳವಟ್ಟೆಹುದೀ ಧ್ಯಾನಾಂಗದೊಳಿದು ಮುನ್ನಿನ ಪರಿಯಹುದೆ || ೭೩ ||

ಅಂಗವೆ ಲಿಂಗವೆನಲು ಸಂಸಾರದ
ಸಂಗಂ ಪ್ರಾಣವೆ ಲಿಂಗವೆನಲ್ಪ್ರಳ
ಯಂ ಗತಮಹುದಿದ ನಾವಂಗಮುವೆನಲಿಲ್ಲಾವಂಗಗಳ ||
ಸಂಗದೊಳಿರ್ದೊಡವೇನು ಸುಶಬ್ದ ಸು
ಸಂಗಂ ವೇಧಿತ ಶರಣಂ ತದ್ಧ್ಯಾಶಿ
ನಾಂಗದೊಳನುವಿಂ ನಿಶ್ಚಲನಾಗಿ ನಿರಾಮಯನಾಗಿಹನು || ೭೪ ||

---

* ಪಾಠ— ಬಲಿದು ವಿ ಮಳೋದಕವಾಗಿ ಸಮಸ್ತಪದಾರ್ಥದೊಳು

ರೇಚಕ ಪೂರಕ ಕುಂಭಕದಲ್ಲಿ ಸ
ದಾಚಲ ಗರುಡಾನಿಲ ಸೋಹಂ ತೆಗೆ
ದಾಚೆಯ ಬ್ರಹ್ಮಾಂಡಕೆ ಕೀಲಿದಷ್ಟದ್ವಾರಕವಾಟವನು ||
ಸೂಚಿಸಿ ಬಲಿದಾಂದೋಳಿಸಿ ಬಾಲಕ
ರೋಚಿಃ ಪ್ರೌಢಕುಮಾರ ವಿಭೋಗವ
ರೀಚಿಯ ಮಸ್ತಕದಲ್ಲಿ ಧ್ಯಾಸವಿನಿಶ್ಚಲನಾಗಿಹನು || ೭೫ ||

ಚಿನ್ನಭದೊಳು ತೋರುವ ಬಹು ವರ್ಣವ
ಭಿನ್ನ ಜ್ಞಾನವನಾಶ್ರಯಿಸಿಯೆ ಮನ
ದಿಂ ನೆನಹಿಗೆ ಗುರಿಯಾಗಿಯೆ ಕಂಡೆನೆನಲು ಜಲದೊಳು ಬರೆದ ||
ಉನ್ನತ ಚಿತ್ರಮುದಾರ್ಕಣ್ಣಿಗೆ ಯೋ
ಗ್ಯಂ ನಯ ವರ್ಣವನೇಕವ ಮಾಡಿದೆ
ನೆನ್ನದಿರಾವರ್ಣಾತೀತಗನಾಮಗೆ ನುಡಿ ಸೊಗಸುವುದೆ || ೭೬ ||

ಕಂಡೆನರಿದೆನೆಂಬಲ್ಲೀರ್ವರಿಗೇಂ
ಖಂಡಿತದರಿವುಂಟೇ ನೆನೆವಲ್ಲಿಯ
ಖಂಡಿತನೇಂ ಮನದಿಂದೆ ವಿಯೋಗಮದಾಗಿರ್ಪನೆ ಗಗನ ||
ಮಂಡಳದೊಳು ಬೆಳಗುವ ರವಿ ಶಶಿ ಶಿಖಿ
ಮಂಡಲ ಮಧ್ಯ ಸದಾಸುಚಿದಾಸನ
ಮಂಡಿತ ಲಿಂಗವು ತಾನೇ ಕಾಣೆ ಬರಿಯಮಾತೇಂ ಜಡನೆ || ೭೭ ||

ಭಿನ್ನಪ್ರಾಣವನಳಿದು ಸುಚಿತ್ತುವೆ
ನನ್ನಿಯೆನಿಸಿ ರವಿಶಶಿಶಿಖಿಯಿಲ್ಲದೆ
ತನ್ನಪ್ರಾಣವೆ ತನಗೆ ಮಹಾಪ್ರಭೆಯಾಗಿ ಚಿದಭ್ರದೊಳು ||
ಇನ್ನುಕಳಾಭೇದದೆ ಝುಗಝುಗಿಪಾ
ಸನ್ನಧ್ರುವಮಂಡಲಮಂ ಮೀರಿ ಮ
ಹೋನ್ನತಮಾಗಿರ್ಪನುಪಮಲಿಂಗಮೆ ನೀನೆಂತಹೆ ಮರುಳೆ || ೭೮ ||

ಪ್ರಾಣವಿಬದ್ಧನೆ ಪರಶಿವನಲ್ಲಿಯೆ
ಪ್ರಾಣಂ ಸಂಚಿತನಾಗಿಯೆ ಲಿಂಗ
ಪ್ರಾಣಗಳೊಂದಾಗಿಯೆ ಪಶ್ಚಿಮದೊಳುನಿಂದನಿವಾಸಿ ಮಹಾ ||
ಪ್ರಾಣಸರಸುರಸ ಮೇಘಾತ್ಮಕ ಸಂ
ತ್ರಾಣಸುಕಂಠಂ ನಿಜಕಂಠಕ್ಕಂ
ಪ್ರಾಣನೆ ಮಂಗಳವಪ್ರತಿಮಂಗೆ ಪ್ರತಿಯುಂಟೇ ಮರುಳೆ || ೭೯ ||

ಚಿದ್ರೂಪಮೆ ಸತ್ಪ್ರಾಣಂ ಲಿಂಗಮೆ
ಸದ್ರೂಪಂ ತದುಭಯಯೋಗವೆ ಸ
ಚ್ಚಿದ್ರೂಪಪ್ರಾಣಪ್ರಾಣಾಪಾನಗಳಾಗುತ್ತಮಿರ್ಪ ||
ಆ ದೃಢಕಂಠಸ್ಥಾನದೊಳುದಿಸಿದ
ಸದ್ರೂಪಮೆ ಪವನಂಗಳ ತಡೆದು
ಸದ್ರ್ರಮಣೀಯಮುದಾಗಿಹುದಿದನರ್ಚಿಪುದಾ ಶ್ರದ್ಧೆಯೊಳು || ೮೦ ||

ವರ್ಣರಹಿತಲಿಂಗಕೆ ರೂಪುಂಟೆ ವಿ
ಸ್ತೀರ್ಣಪ್ರಳಯರಹಿತಲಿಂಗಕೆ ಜನಿ
ಜೀರ್ಣಪ್ರಾಣಮುದುಂಟೇ ಶ್ರುತ್ಯನುಪಮಗೇಂ ಸ್ತುತಿಯುಂಟೆ ||
ನಿರ್ಣಾಮಂಗಾಹ್ವಯಮುಂಟೆ ಘನೋ
ದೀರ್ಣಕ್ಷಣರುಚಿಗಾಶ್ರಯಮುಂಟೆ ಸು
ಪೂರ್ಣನೆನಿಸಿ ಮೀರಿದ ತಾಣದೊಳಿಹಗರ್ಚನೆಯೇಕಯ್ಯ ||೮೧||

ಚಂದ್ರಾದಿತ್ಯರ ಘಾತದಿನನಿಲಂ
ರುಂದ್ರಪ್ರಾಪ್ತಿಯನಲ್ಲೈದುವುದದೆ
ಸಾಂದ್ರಪ್ರಾಣಮಿದೇ ಪಲವಾಜ್ಯದ ಕುಂಭದೊಳಂ ದೀಪಂ ||
ತಾಂ ದೃಢದಿಂದುಜ್ವಳಿಸುವವೊಲ್ಕರ
ಣೇಂದ್ರಿಯಸರ್ವದ್ವಾರದೊಳಂ ನಿ
ಸ್ತಂದ್ರಾತ್ಮಕದಿಂ ಬೆಳಗುವ ಲಿಂಗಮನರ್ಚಿಪುದನವರತಾ || ೮೨ ||

ಅಂತರ್ಮಾರುತಘಾತದಿನೊಡೆದು ನಿ
ತಾಂತಬ್ರಹ್ಮಸುನಾಳಸುಧಾರ್ದ್ರದಿ
ನಂತಸ್ಸೀತಳಮಾದ ಹೃಷೀಕದ್ವಾರಹೃದಯಚಂದ್ರ ||
ಕಾಂತಾಗಾರದೊಳಂ ರವಿಶಶಿಶಿಖಿ
ಕಾಂತಿತ್ರೈಮಂಡಲದಗ್ರದೊಳು ನಿ
ರಂತರಸುಚಿದಾಸನದೊಳು ಬೆಳಗುವ ಲಿಂಗವ ಭಜಿಸುವುದು || ೮೩ ||

ಮೇರು ಗಿರಿಯ ರುಚಿರಾಮೃತದಿಂ ದಿ
ಗ್ವಾರಣಮಸ್ತಕ ಮುಕ್ತಾಕ್ಷತೆಯಿಂ
ಮಾರುತಗಂಧದಿನುರು ಮಾನಸಸುಸರೋವರವಾರಿಜದಿ ||
ಚಾರು ಫಣೀಶ್ವರ ಧೂಪದೆ ಚಂದ್ರಾ
ರ್ಕಾರಾರ್ತಿಕದಿಂ ಗಗನೌದನದಿಂ
ಸಾರತ್ರೈಮೂರ್ತಿ ಸುತಾಂಬೂಲಗಳಿಂ ಭಜಿಸುತ್ತಿಹನು || ೮೪ ||

ಎರಡಳಿದಿರೆ ಕೊಡುವುದೇನರ್ಚಿಸಿ
ಕರಮರ್ಪಿಸಿಕೊಂಬುದು ಘನಮರ್ಪಿಸು
ವುದುಚಿತ್ರಂ ಯುಗಭಾವಮದಾದಲ್ಲರಿದರಿವಿಗೆ ಭಂಗಂ ||
ಪರುಷದ ಪುತ್ಥಳಿಗವಯವ ಲೋಹಮೆ
ಪರಿಪೂರ್ಣಗೆ ಪರಕರ್ಪಿಸಿಯಪರವ
ನರಿದಿಹೆನೆಂಬೀಧ್ಯಾನಾರ್ಚನೆಯೆ ಪರಿಭ್ರಮಣಂ ತಿಳಿಯೆ || ೮೫ ||

ಸ್ವಕವಾದ್ಯಕೆ ಬಂಧನಮಲ್ಲದೆ ನಾ
ದಕೆ ಬಂಧನ ಮುಂಟೇ ಮಾಡುವ ಕ
ರ್ಮಕೆ ಬಂಧನಮಲ್ಲದೆಯರಿವಿಗೆಬಂಧನಮುಂಟೆಯರಿವ ಪಾ ||
ತಕವರುಹಿಸಿಕೊಂಬುರು ವಸ್ತುಗಳೆರ
ಡಕೆ ತೆರಹಿಲ್ಲದೆ ಭಾವವಿಶುದ್ಧದಿ
ನಕಲಂಕಿತ ತೃಪ್ತಿಯೊಳು ಸಮಾಧಿಯನೆಯ್ದಿರ್ಪುದು ನಿಜವು || ೮೬ ||

ಬೆಳಗೆಂದೊಡೆ ಒಂದರೊಳಂ ತೋರ್ದು
ಜ್ವಳಿಸುವುದಕೆ ಕಾರಣವರಿವೆನಲೊಂ
ದಳತೆಯ ಲಕ್ಷಿಸಿಯೊಂದಿಲ್ಲೆಂಬುದಕಿದು ಕಾರಣವೈಸೆ ||
ತಿಳಿದರಿದಿಹೆನೆಂಬೀ ಸಂಶಯಪದ
ಮಳಿದುಳುಮೆಯೆ ತಾನಾದವಗಿನ್ನೊಂ
ದೆಳಸಿ ಸಮಾಧಿಯು ನೆಯ್ದಿಹೆನೆಂಬುದು ತಾನೆ ಪರಿಭ್ರಮಣಂ || ೮೭ ||

ಕಂದದ ಪುಷ್ಪಮನರ್ಪಿಸಿ ನಂದದ
ಕಂದುಕವೆತ್ತಿಯೆ ಬಂದುತುಳುಕದಾ
ನಂದವಳಿಯದಂದಂ ದಿನಪೊಸ ಪೂಜೆಯ ಮೂಡಿಯೆ ಪರಮ ||
ಬಂಧುರ ಲಿಂಗದ ಮಧ್ಯವನರಿದಾ
ಮಂದರಥೇನುವ ಕರೆದಡಿಗೆಯ ಮಾ
ಡಿಂದಾರೋಗಣೆ ಸಮಯವೆ ದಿವ್ಯಸಮಾಧಿಯದಾಗಿಹುದು || ೮೮ ||

ಕಾಯದ ಸಂಚವನರಿದೀ ಬ್ರಹ್ಮದೊ
ಳಾಯತವಾದವಗಂಗವಳಿದೊಡೇಂ
ಕಾಯಂ ಶಿವನೊಳು ನಿರ್ವಯವಾ(ಲಾ)ದೊಡವೇಂ ಸಮಾಧಿಕರಣದ ||
ಕಾಯಸಮಾಧಿಸು ಭಾವಸಮಾಧಿಯು
ವಾಯುವಳಿಯೆ ನಿಜಬುದ್ಧಿಸಮಾಧಿಯ
ಜೇಯುವನೆಯ್ದಲು ಬಲ್ಲೊಡಿದೇ ತಿಳಿ ಸಹಜ ಸಮಾಧಿಕಣಾ || ೮೯ ||

ಕಾಯಮೆ ಕಡವಸಮಾಗಿಯೆ ಮಾನಸ
ಮೆ ಯೋಗಸಂ ಪಟ್ಟಕಮಾಗಿಂದ್ರಿಯ
ವಾಯುವಿಸಂಚದಿನಾದುಪಮೆಯನೇನೆನಬಹುದೆಲೆ ಸೌಖ್ಯ ||
ನ್ಯಾಯದ ಸೋಂಕಿಂದಾದ ಸಮಾಧಿ
ಸ್ವಾಯತದೊಳದನರಿದು ಪೊರಗಂ ಮರೆ
ದಾಯತ ಸನ್ಮಾತ್ರಬ್ರಹ್ಮಾನಂದದೊಳಿರುತಿಹೆ ನೊಲಿದು || ೯೦ ||

ಇಷ್ಟವೆ ಧಾರಣ ಯೋಗಂ ಪ್ರಾಣವೆ
ಶಿಷ್ಟಧ್ಯಾನಂ ತೃಪ್ತಿಸಮಾಧಿ ಮ
ಹೇಷ್ಟ ಪ್ರಾಣಗಳೊಂದಾಗಿಯೆ ನಿಜವೆನಿಸಿ ಕಳೇವರವೆ ॥
ಶ್ರೇಷ್ಠಶಿವಾಲಯ ಹೃದಯಾಂಬುಜ ಮ
ಧ್ಯಾಷ್ಟದಳಾಗ್ರಚತುರ್ದಳಲಸದುಪ
ವಿಷ್ಟಾಲಂಕೃತ ಲಿಂಗವೆ ಪರವಾಗಿತರವ ಮರೆದಿಹೆನು ॥ ೯೧ ॥

ಧರೆಯೊಳು ಪೂಜಿಸಿಕೊಂಬುದಕೇಂಕುರು
ಪುರದೊಳು ಪೂಜಿಸಿಕೊಂಬುದದೇ ಸ
ರ್ವದಿನಹುದಲ್ಲೆಂದುರೆ ಮಥನಿಸುವುದದಾವ ನಿಜಲಕ್ಷಣ ॥
ಇರಿಕಣ್ಮುಚ್ಚಿ ಬಯಲ್ತೆರದೊಡೆರೂ
ಪುರುವಸಮುದ್ರಿತನಾಗ ಸಮುದ್ರಿತ
ಪರದೊಳುಭಯವಳಿದರಿವಂ ಲಕ್ಷಿಪುದಿದುವೆ ಪರಿಭ್ರಮಣಂ ॥ ೯೨ ॥

ದೃಷ್ಟಿಯ ಬೊಂಬೆಯವೊಲು ತಾಂ ಕಂಡು *
ಚ್ಛಿಷ್ಟದೆ ಕಾಣಿಸಿಕೊಂಬಂತಿತರರ
ದೃಷ್ಟಕ್ಕೊಡಲಾಗಿಡಲು ಸದೃಶ್ಯವೆ ತನ್ನೊಳಡಗಿದಂತೆ ॥
ಇಷ್ಟದೊಳಂ ಲಕ್ಷಿಸಿ ಭಾವದೊಳು
ತ್ಕೃಷ್ಟ ಭ್ರಮೆಯಳಿದರಿವಿಹೆನೆಂಬೀ
ಕಷ್ಟಪರಿಭ್ರಮಣಂ ಪರಿದವಿರಳ ರೂಪಕವಾಗಿಹುದು ॥ ೯೩ ॥

ಕುರಿತೊಳಗಡಗಿಯೆ ಬಾಹ್ಯದ ವಸ್ತುವ
ನರಿವವನಾರ್ಬೀಜಾಂಕುರ ಮೂಲಕೆ
ಕುರುಹಾವೆಡೆ ಲಕ್ಷಿಸುವಲ್ಲಾತ್ಮಂ ನಿರ್ಲಕ್ಷ(ಕ್ಷ್ಯ)ವುದಾಗಿ ॥
ಪರಮಂ ವಹ್ನಿಗೆ ಕೀಳ್ಮೇಲುಂಟೇ
ನೆರೆಯರಿದೊಳ ಹೊರಗಳಿದನುಪಮಗೀ
ಪೊರಗಣ ವಸ್ತುವನೊಳಗಣ ನಿಜಕರ್ಪಿಸುವುದಿದೇಂ ಮರುಳಾ ॥ ೯೪ ॥

---

* ಪಾಠ— ಕಂಡುಂ, ಶಿಷ್ಟದೆ

ಸ್ಫಟಿಕದ ಮಂಟಪಮುಮನೊಳಕೊಂಡಾ
ಸ್ಫುಟದಿಂ ಪ್ರಜ್ವಲಿಸುವ ದೀಪದವೊ
ಲ್ನಿಟಿಲತಟ ಜ್ಯೋತಿರ್ಮಯ ಲಿಂಗಪ್ರಭೆಯೊಡೆದು ||
ಪಟುತರತನು ಕರಣೇಂದ್ರಿಯ ನಿವಹವ
ದಿಟದಿಂ ಮುಸುಕಿ ಬೆಳಗಲು ಬೆಳಗಿನು
ತ್ಕಟದಿಂ ದಳದಳನಿಳಿತಹ ರುಚಿರಾಮೃತಮೆ ಸಮರ್ಪಣವು || ೯೫ ||

ಚಂದ್ರಮಕಾಂತಶಿರಃ ಕುಂಭದೊಳಾ
ಸಾಂದ್ರಸುಕುಂಭಕದಿಂ ಪೂರಕಮಯ
ಚಂದ್ರರನಿರ್ಝರನೊಳ ಪೊಗಿಸುತೆ ಸಮರಸಮಂ ಮಾಡಲ್ಕೆ ||
ರುಂದ್ರದಿನಿಳಿದಮೃತವ ರೇಚಕದಿವ
ಸೇಂದ್ರಾನಿಲ ಕರಯುಗದಿಂ ಪಿಡಿದು ಫ
ಣೀಂದ್ರಗೆ ಸಲಿಸುವರಲ್ಲದೆ ನಿಜಕರ್ಪಿಸಿ ಸುಖಿಸುವರಾರೈ || ೯೬ ||

ಚಂಡಮರುತನ್ನೈದಂ ಬಲಿದೈದಂ
ಮಂಡಲಕೊಯಿದು ಸುಖಾವಧ್ಯಾನದೆ
ಕಂಡನಿಲನ ಸಂಚವ ಶೋಧಿಸಿ ಇಳಿತಹಸುಧೆಯಂ ವಾಯು ||
ಮಂಡಲದಿಂದೆತ್ತಿಯೆ ಘನಶಂಕಿನಿ
ಮಂಡಲದಿಂದಾಕರುಷಿಸಿ ಮಾಯಾ
ಮಂಡಲಕಿಳಿಯದೆ ನಿಜಕರ್ಪಿಸಿ ಶೇಷಾನುಭವದೊಳಿಹೆನು || ೯೭ ||

ಸೋಹಂ ಸೋಹಮ್ಮೆಂದಿನ ಚಂದ್ರರ
ಗಾಹಿನಪದದೊಳು ಗಮಿಪಾತ್ಮಂಗೆ ಶಿ
ವೋಹಮ್ಮೆಂಬರಿವಂ ಕೈಗೊಳಿಸನಿಲಸ್ಪಂದಮನಳಿದು ||
ಸೋಹಂ ಬ್ರಹ್ಮಸನಾದಾತ್ಮಕದಿಂ
ಸ್ನೇಹ ಬ್ರಹ್ಮವೆ ತಾನಾದ ಸುಖಂ
ಬೇಹವು ನಿಜಕರ್ಪಿತಮಾದಿರವಂ ದೇಹಿಯದೇಂ ಬಲ್ಲ || ೯೮ ||

